KA / BG - GPO/ 2515 /WPP-47/ 2009 - 2011




# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

**ವಿಶೇಷ ಪತ್ರಿಕೆ**

| ಭಾಗ – V | ಬೆಂಗಳೂರು, ಸೋಮವಾರ, ಮೇ ೧೮, ೨೦೦೯ (ವೈಶಾಖ ೨೮, ಶಕ ವರ್ಷ ೧೯೩೧) | ನಂ. ೩೦೨ |
|---|---|---|


**ಸಾರ್ವಜನಿಕ ಶಿಕ್ಷಣ ಇಲಾಖೆ**

**ಆಯ್ಕೆ ಪ್ರಾಧಿಕಾರಿ ಹಾಗೂ ವಿಭಾಗೀಯ ಕಾರ್ಯದರ್ಶಿಗಳು, ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ ಮತ್ತು ಪದನಿಮಿತ್ತ ಸಹನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಮೈಸೂರು ವಿಭಾಗ, ಮೈಸೂರು ಇವರ ಕಾರ್ಯಾಲಯ**

## ನೇಮಕಾತಿ ಅಧಿಸೂಚನೆ

**ಸಂಖ್ಯೆ: ಜಿ–12 /ಪ್ರೌ.ಶಾಶಿ/ನೇಮಕ–01/2009–10, ದಿನಾಂಕ: 18ನೇ ಮೇ, 2009**

**(ಅರ್ಜಿ ಸ್ವೀಕರಿಸಲು ಕೊನೆಯ ದಿನಾಂಕ: 08–07–2009)**

**ವಿಷಯ :–** 2009–10ನೇ ಸಾಲಿನಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆ, ಮೈಸೂರು ವಿಭಾಗ, ಮಟ್ಟದಲ್ಲಿ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯ ಮೂಲಕ ಪ್ರೌಢ ಶಾಲಾ ಸಹಾಯಕ ಶಿಕ್ಷಕರು (ಗ್ರೇಡ್–2) ಹಾಗೂ ದೈಹಿಕ ಶಿಕ್ಷಣ ಶಿಕ್ಷಕರು (ಗ್ರೇಡ್–1) ವೃಂದದ ಶಿಕ್ಷಕರನ್ನು ನೇರ ನೇಮಕಾತಿ ಮೂಲಕ ಆಯ್ಕೆ ಮಾಡುವ ಕುರಿತು.

**ಉಲ್ಲೇಖ :–**

1) ದಿನಾಂಕ 22.02.1967, 21.10.1991, ಮತ್ತು 24.06.2003ರ ಇಲಾಖಾ ನೇಮಕಾತಿ ನಿಯಮಗಳು.
2) ಸರ್ಕಾರದ ಆದೇಶ ಸಂಖ್ಯೆ: ಸಿ.ಆ.ಸು.ಇ 08 ಸಹಿಮ 95, ದಿನಾಂಕ: 20.06.1995 (ಅನುಬಂಧ–1 ಮತ್ತು 2).
3) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 28 ಸೇನೇನಿ 95, ದಿ. 19.8.95.
4) ಸರ್ಕಾರದ ಆದೇಶ ಸಂಖ್ಯೆ: ಡಿಪಿಎಆರ್ 34 ಎಸ್‌ಆರ್‌ಆರ್ 95, ದಿ. 06.03.1996.
5) ಸರ್ಕಾರದ ಆದೇಶ ಸಂಖ್ಯೆ: ಇಡಿ 93 ಎಸ್‌ಎಲ್‌ಬಿ 97, ದಿ. 31.01.97.
6) ಸರ್ಕಾರದ ಆದೇಶ ಸಂಖ್ಯೆ: ಇಡಿ 190 ಎಸ್‌ಎಲ್‌ಬಿ 97, ದಿ. 26.08.97.
7) ಸರ್ಕಾರದ ಅಧಿಸೂಚನೆ ಸಂಖ್ಯೆ: ಎಸ್.ಡಬ್ಲ್ಯೂಡಿ 132 ಎಸ್‌ಎಡಿ 97, ದಿ. 08.02.2000.
8) ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 23 ಎಸ್‌ಆರ್‌ಆರ್ 99, ದಿ. 23.11.2000.
9) ಸರ್ಕಾರದ ಸುತ್ತೋಲೆ ಸಂಖ್ಯೆ: ಸಿಆಸುಇ 44 ಸೇನೇನಿ 2001, ದಿ. 27.07.2001.
10) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 97 ಸೇನೇನಿ 2002, ದಿ. 22.11.2002.
11) ಸರ್ಕಾರದ ಪತ್ರ ಸಂಖ್ಯೆ: ಇಡಿ 174 ಎಸ್‌ಎಲ್‌ಬಿ 2002, ದಿ. 26.11.2002.
12) ಸರ್ಕಾರದ ಅಧಿಸೂಚನೆ ಸಂಖ್ಯೆ: ಎಸ್‌ಡಬ್ಲ್ಯೂಡಿ 126 ಬಿಸಿಎ 2002, ದಿ. 13.02.2003.
13) ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 59 ಎಸ್‌ಆರ್‌ಇ 2002, ದಿ. 24.06.2003.
14) ಸರ್ಕಾರದ ಆದೇಶ ಸಂಖ್ಯೆ ಇಡಿ 125 ಪಿಟಿಐ 2003, ದಿ. 16.08.2003.
15) ಸರ್ಕಾರದ ಆದೇಶ ಸಂಖ್ಯೆ: ಡಿಪಿಎಆರ್ 96 ಸೇನೇನಿ 2005 ಬೆಂಗಳೂರು, ದಿ. 10.8.2005.
16) ಸರ್ಕಾರದ ಆದೇಶ ಸಂಖ್ಯೆ: ಇಡಿ 82/ಎಸ್‌ಎಲ್‌ಬಿ/2003/ಪಾರ್ಟ್/ಬೆಂಗಳೂರು, ದಿನಾಂಕ: 17.06.2006.
17) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 33/ಎಸ್‌ಬಿಸಿ 81, ದಿನಾಂಕ: 01.09.1981.
18) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 30/ಸಹಿಮ 94, ದಿನಾಂಕ: 03.05.1994.

19) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 53/ಸೇನೇನಿ 2007 ಬೆಂಗಳೂರು, ದಿ: 04.01.2008.

20) ಸರ್ಕಾರದ ಸುತ್ತೋಲೆ ಸಂಖ್ಯೆ: ಸಿಆಸುಇ/16/ಸೇನೇನಿ 2008 ಬೆಂಗಳೂರು ದಿ: 01.09.2008.

21) ಸರ್ಕಾರದ ಪತ್ರ ಸಂಖ್ಯೆ: ಇಡಿ/04/ಎಸ್‌ಟಿಬಿ/2009, ಬೆಂಗಳೂರು, ದಿ: 13.03.2009.

22) ಸರ್ಕಾರದ ಪತ್ರ ಸಂಖ್ಯೆ: ಇಡಿ/573/ಎಲ್‌ಬಿಪಿ/2008, ಬೆಂಗಳೂರು, ದಿ: 05.05.2009.

23) ಸರ್ಕಾರದ ಪತ್ರ ಸಂಖ್ಯೆ: ಇಡಿ/573/ಎಲ್‌ಬಿಪಿ/2008, ಬೆಂಗಳೂರು, ದಿ: 18.05.2009.

ಸಾರ್ವಜನಿಕ ಶಿಕ್ಷಣ ಇಲಾಖೆ ಮೈಸೂರು ವಿಭಾಗದ **08** ಶೈಕ್ಷಣಿಕ ಜಿಲ್ಲೆಗಳ (ಮೈಸೂರು ,ಚಾಮರಾಜನಗರ, ಮಂಡ್ಯ, ಹಾಸನ, ಕೊಡಗು,ಚಿಕ್ಕಮಗಳೂರು, ದಕ್ಷಿಣಕನ್ನಡ ಮತ್ತು ಉಡುಪಿ) ಸರಕಾರಿ ಪ್ರೌಢ ಶಾಲೆ/ಸರಕಾರಿ ಪದವಿ ಪೂರ್ವ ಕಾಲೇಜುಗಳ ಪ್ರೌಢ ಶಾಲಾ ವಿಭಾಗಗಳಲ್ಲಿ ಖಾಲಿ ಇರುವ ಪ್ರೌಢ ಶಾಲಾ ಸಹಾಯಕ ಶಿಕ್ಷಕರ ಗ್ರೇಡ್–2 ವೃಂದದ ವಿವಿಧ ವಿಷಯ ಮತ್ತು ಬೋಧನಾ ಮಾಧ್ಯಮದ ಹುದ್ದೆಗಳಿಗೆ ಹಾಗೂ ದೈಹಿಕ ಶಿಕ್ಷಣ ಶಿಕ್ಷಕರು (ಗ್ರೇಡ್–1) ವೃಂದದ ಹುದ್ದೆಗಳಿಗೆ ಮತ್ತು 8ನೇ ತರಗತಿ ಹೊಂದಿರುವ ಉನ್ನತೀಕರಿಸಲಾದ ಸರಕಾರಿ ಹಿರಿಯ ಪ್ರಾಥಮಿಕ ಶಾಲೆಗಳಲ್ಲಿ ಖಾಲಿ ಇರುವ ಪ್ರೌಢ ಶಾಲಾ ಸಹಾಯಕ ಶಿಕ್ಷಕರ (ಗ್ರೇಡ್–2) ವೃಂದದ ಭೌತ ವಿಜ್ಞಾನ ಶಿಕ್ಷಕರನ್ನು ವಿವಿಧ ಮಾಧ್ಯಮದ ಹುದ್ದೆಗಳಿಗೆ, ವಿಭಾಗ ಮಟ್ಟದಲ್ಲಿ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆ ಮೂಲಕ ಅಂದರೆ **"ದಿ ಕರ್ನಾಟಕ ಎಜುಕೇಷನ್ ಡಿಪಾರ್ಟ್‌ಮೆಂಟ್ ಸರ್ವೀಸಸ್ (ಡಿಪಾರ್ಟ್‌ಮೆಂಟ್ ಆಫ್ ಪಬ್ಲಿಕ್ ಇನ್‌ಸ್ಟ್ರಕ್ಷನ್) (ರಿಕ್ರೂಟ್‌ಮೆಂಟ್) (ಅಮೆಂಡ್‌ಮೆಂಟ್) ರೂಲ್ಸ್ 2002"** ನಿಯಮಗಳನ್ವಯ ಆಯ್ಕೆ ಮಾಡಲು ಈ ನೇಮಕಾತಿ ಅಧಿಸೂಚನೆ ಹೊರಡಿಸಿದೆ. **ಅಂದರೆ ನೇಮಕಾತಿ ಅಧಿಸೂಚನೆ ದಿನಾಂಕದಂದು ಅರ್ಹರಾಗಿರುವ** ಅಭ್ಯರ್ಥಿಗಳಿಂದ ನಿಗಧಿಪಡಿಸಿರುವ ಅರ್ಜಿ ನಮೂನೆಯಲ್ಲಿ ಅರ್ಜಿಗಳನ್ನು ಕರೆಯಲಾಗಿದೆ. **ಇತರೆ ಯಾವುದೇ ನಮೂನೆಯಲ್ಲಿ ಸಲ್ಲಿಸುವ ಅರ್ಜಿಗಳನ್ನು ತಿರಸ್ಕರಿಸಲಾಗುವುದು.**

**ಟಿಪ್ಪಣಿ: ಪ್ರಕಟಿಸಲಾಗಿರುವ ಹುದ್ದೆಗಳ ಸಂಖ್ಯೆ ಮತ್ತು ವರ್ಗೀಕರಣವು ಅನಿವಾರ್ಯ ಸಂದರ್ಭಗಳಲ್ಲಿ ಬದಲಾವಣೆಗೆ ಒಳಪಟ್ಟಿರುತ್ತದೆ.**

**1) ಆಯ್ಕೆಗಾಗಿ ಪ್ರಕಟಿಸಿರುವ ಹುದ್ದೆಗಳು:–**

(ಎ) **ಪ್ರೌಢ ಶಾಲಾ ಸಹಾಯಕ ಶಿಕ್ಷಕ ಗ್ರೇಡ್–2 ವೃಂದದ ಕೆಳಕಂಡ ವಿಷಯಗಳ ಹುದ್ದೆಗಳು:–**

**i) ಕಲಾ ಶಿಕ್ಷಕರು (ಕನ್ನಡ ಮಾಧ್ಯಮ)**
**ii) ಭೌತ ವಿಜ್ಞಾನ (ಕನ್ನಡ ಮಾಧ್ಯಮ)**
**iii) ಜೀವ ವಿಜ್ಞಾನ (ಕನ್ನಡ ಮಾಧ್ಯಮ)**
**iv) ಭಾಷಾ ಶಿಕ್ಷಕರು (ಕನ್ನಡ, ಆಂಗ್ಲ ಹಿಂದಿ, ಉರ್ದು ಮತ್ತು ಸಂಸ್ಕೃತ )**

(ಬಿ) **ದೈಹಿಕ ಶಿಕ್ಷಣ ಶಿಕ್ಷಕ ಗ್ರೇಡ್–1 ಹುದ್ದೆಗಳು**

**2) ಆಯ್ಕೆಗೆ ಅರ್ಹತೆ:–**

**ನೇಮಕಾತಿ ಅಧಿಸೂಚನೆ ದಿನಾಂಕದಂದು** ಪ್ರೌಢ ಶಾಲಾ ಸಹಾಯಕ ಶಿಕ್ಷಕ ಗ್ರೇಡ್–2 ವೃಂದದ, ವಿವಿಧ ವಿಷಯಗಳ ಮತ್ತು ಬೋಧನಾ ಮಾಧ್ಯಮದ ಮತ್ತು ದೈಹಿಕ ಶಿಕ್ಷಣ ಶಿಕ್ಷಕ ಗ್ರೇಡ್–1 ಹುದ್ದೆಗಳಿಗೆ ಆಯ್ಕೆಗಾಗಿ ಅರ್ಹತೆ ಪಡೆಯಲು ಅಭ್ಯರ್ಥಿಗಳು ಆಯಾ ವಿಷಯ ಮತ್ತು ಬೋಧನಾ ಮಾಧ್ಯಮದ ಹುದ್ದೆಗಳಿಗೆ **"ದಿ ಕರ್ನಾಟಕ ಎಜುಕೇಷನ್ ಡಿಪಾರ್ಟ್‌ಮೆಂಟ್ ಸರ್ವೀಸಸ್ (ಡಿಪಾರ್ಟ್‌ಮೆಂಟ್ ಆಫ್ ಪಬ್ಲಿಕ್ ಇನ್‌ಸ್ಟ್ರಕ್ಷನ್) (ರಿಕ್ರೂಟ್‌ಮೆಂಟ್) (ಅಮೆಂಡ್‌ಮೆಂಟ್) ರೂಲ್ಸ್ 2002"** ನಿಯಮಗಳಲ್ಲಿ ನಿಗಧಿ ಪಡಿಸಿರುವ ವಿದ್ಯಾರ್ಹತೆಗಳನ್ನು ಹೊಂದಿರಬೇಕು. ಮತ್ತು ನಿಗದಿಪಡಿಸಲಾದ ವಯೋಮಿತಿಯೊಳಗಿದ್ದು, ಆಯ್ಕೆ ಪ್ರಾಧಿಕಾರಿಯು ನಡೆಸುವ ವಿಭಾಗ ಮಟ್ಟದ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಗೆ ಕಡ್ಡಾಯವಾಗಿ ಹಾಜರಾಗಬೇಕು. **ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಗೆ ಹಾಜರಾದ ಮಾತ್ರಕ್ಕೆ ಅಭ್ಯರ್ಥಿಯು ಆಯ್ಕೆಗೆ ಅರ್ಹತೆ ಪಡೆಯುವುದಿಲ್ಲ. ಅಭ್ಯರ್ಥಿಯು ಇದರ ಜೊತೆಗೆ ನೇಮಕಾತಿ ನಿಯಮಗಳಲ್ಲಿ ನಿಗಧಿ ಪಡಿಸಿರುವ ವಿದ್ಯಾರ್ಹತೆಗಳನ್ನು ಹೊಂದಿದ್ದು ಮತ್ತು ನಿಗಧಿತ ವಯೋಮಿತಿಯೊಳಗೆ ಇದ್ದಲ್ಲಿ ಮಾತ್ರ ಆಯ್ಕೆಗೆ ಪರಿಗಣಿಸಲಾಗುವುದು.**

**3) ಆಯ್ಕೆ ಮತ್ತು ನೇಮಕಾತಿ:–**

ಅರ್ಹ ಅಭ್ಯರ್ಥಿಗಳನ್ನು ಆಯ್ಕೆ ಪ್ರಾಧಿಕಾರಿಗಳಾದ ವಿಭಾಗೀಯ ಕಾರ್ಯದರ್ಶಿಗಳು, ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ ಹಾಗೂ ಪದನಿಮಿತ್ತ ಸಹ ನಿರ್ದೇಶಕರು ಸಾರ್ವಜನಿಕ ಶಿಕ್ಷಣ ಇಲಾಖೆ, ಮೈಸೂರು ವಿಭಾಗ, ಮೈಸೂರು ರವರು **"ದಿ ಕರ್ನಾಟಕ ಎಜುಕೇಷನ್ ಡಿಪಾರ್ಟ್‌ಮೆಂಟ್ ಸರ್ವೀಸಸ್ (ಡಿಪಾರ್ಟ್‌ಮೆಂಟ್ ಆಫ್ ಪಬ್ಲಿಕ್ ಇನ್‌ಸ್ಟ್ರಕ್ಷನ್) (ರಿಕ್ರೂಟ್‌ಮೆಂಟ್) (ಅಮೆಂಡ್‌ಮೆಂಟ್) ರೂಲ್ಸ್ 2002"** ಹಾಗೂ ಸಂಬಂಧಿಸಿದ ಕಾಲದಿಂದ ಕಾಲಕ್ಕೆ ತಿದ್ದುಪಡಿಯಾದ ಪ್ರಚಲಿತ ಸೇವಾ ನಿಯಮಗಳನ್ವಯ ವಿಭಾಗೀಯ ಮಟ್ಟದಲ್ಲಿ ಆಯ್ಕೆ ಪ್ರಾಧಿಕಾರಿಯಾಗಿರುತ್ತಾರೆ. ಮತ್ತು ಸಂಬಂಧಿಸಿದ ಜಿಲ್ಲಾ ಉಪನಿರ್ದೇಶಕರು [ಆಡಳಿತ] ರವರು ನೇಮಕಾತಿ ಪ್ರಾಧಿಕಾರಿಯಾಗಿದ್ದು, ಜಿಲ್ಲಾ ಮಟ್ಟದಲ್ಲಿ ನೇಮಕಾತಿ ಆದೇಶ ನೀಡುತ್ತಾರೆ.

**4) ನಿಗಧಿತ ಅರ್ಜಿ ನಮೂನೆ ದೊರೆಯುವ ಸ್ಥಳ:–**

ನಿಗಧಿತ ಅರ್ಜಿ ನಮೂನೆಯನ್ನು ಆಯ್ಕೆಗಾಗಿ ಪ್ರಕಟಿಸಲಾಗಿರುವ ಮಾಹಿತಿ ಪುಸ್ತಕದಲ್ಲಿ ಲಗತ್ತಿಸಲಾಗಿದೆ. ಈ ಅರ್ಜಿ ನಮೂನೆ ಹಾಗೂ ಮಾಹಿತಿ ಪುಸ್ತಕವು ಎಲ್ಲಾ ವಿಷಯ ಹಾಗೂ ಮಾಧ್ಯಮದ ಹುದ್ದೆಗಳಿಗೆ ಒಂದೇ ಆಗಿರುತ್ತದೆ. ಹಾಗೂ ಈ ಪುಸ್ತಕವು ಜಿಲ್ಲೆಯ ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರ (ಆಡಳಿತ)ರವರ ಕಚೇರಿಗಳಲ್ಲಿ ದಿನಾಂಕ 08–06–2009 ರಿಂದ ಅರ್ಜಿ ಸಲ್ಲಿಸಲು

ನಿಗದಿ ಪಡಿಸಿರುವ ಕೊನೆಯ ದಿನಾಂಕದವರೆಗೆ ಕಾರ್ಯಾಲಯದ ಎಲ್ಲಾ ಕೆಲಸದ ದಿನಗಳಲ್ಲಿ ಬೆಳಿಗ್ಗೆ 10–00 ರಿಂದ ಸಂಜೆ 5–30 ರವರೆಗೆ ದೊರೆಯುತ್ತದೆ. ಅರ್ಹ ಅಭ್ಯರ್ಥಿಗಳು ನಿಗದಿತ ಶುಲ್ಕವನ್ನು ಉಪನಿರ್ದೇಶಕರ ಕಚೇರಿಯಲ್ಲಿ ದೊರೆಯುವ ವಿಶೇಷ ಚಲನ್ ಮೂಲಕ **ವಿಶೇಷಾಧಿಕಾರಿ, ಕೇಂದ್ರೀಕೃತ ದಾಖಲಾತಿ ಘಟಕ, ಬೆಂಗಳೂರು ಇವರ ಹೆಸರಿನಲ್ಲಿ ಸ್ಟೇಟ್ ಬ್ಯಾಂಕ್ ಆಫ್ ಮೈಸೂರಿನ** ನಿಗದಿತ ಶಾಖೆಯಲ್ಲಿ ಹಣವನ್ನು ಪಾವತಿಸಿ, ಪಡೆದುಕೊಂಡ ಚಲನ್ ಪ್ರತಿಯನ್ನು ಉಪನಿರ್ದೇಶಕರ ಕಚೇರಿಯಲ್ಲಿ ಸಲ್ಲಿಸಿ ಮಾಹಿತಿ ಪುಸ್ತಕ ಸಹಿತ ಅರ್ಜಿ ನಮೂನೆಗಳನ್ನು ಪಡೆಯಬಹುದು.

**5) ಅರ್ಜಿ ನಮೂನೆ–ಸಹಿತ–ಮಾಹಿತಿ ಪುಸ್ತಕದ ಶುಲ್ಕ:–**

**1)** ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ ಮತ್ತು ಪ್ರವರ್ಗ–1ಕ್ಕೆ ಸೇರಿದ ಅಭ್ಯರ್ಥಿಗಳಿಗೆ **ರೂ. 150/–**

**2)** ಇತರೆ ಎಲ್ಲಾ ಅಭ್ಯರ್ಥಿಗಳಿಗೆ **ರೂ. 300/–**

**3)** ಸರ್ಕಾರದ ಆದೇಶ ಸಂಖ್ಯೆ: ಇಡಿ 04 ಎಸ್‌ಟಿಬಿ 2009, ದಿ. 13.3.2009ರ ಪ್ರಕಾರ ಅಂಗವಿಕಲ ಅಭ್ಯರ್ಥಿಗಳಿಗೆ ಅರ್ಜಿ ನಮೂನೆ ಸಹಿತ ಮಾಹಿತಿ ಪುಸ್ತಕದಿಂದ ಶುಲ್ಕ ವಿನಾಯಿತಿ ನೀಡಲಾಗಿದ್ದು, ವಿನಾಯಿತಿ ಪಡೆಯುವ ಅಂಗವಿಕಲ ಅಭ್ಯರ್ಥಿಗಳು ಅರ್ಜಿ ಪಡೆಯುವ ಸಂದರ್ಭದಲ್ಲಿ ನಿಗದಿತ ನಮೂನೆಯ ಅಂಗವಿಕಲ ಪ್ರಮಾಣ ಪತ್ರವನ್ನು ಹಾಜರುಪಡಿಸಬೇಕು.

**6) ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ, ವಿಧಾನ ಮತ್ತು ವಿಳಾಸ:–**

**i)** ಅರ್ಹ ಅಭ್ಯರ್ಥಿಗಳು ನಿಗಧಿತ ಅರ್ಜಿ ನಮೂನೆಯಲ್ಲಿ ಮಾಹಿತಿಯನ್ನು ಭರ್ತಿಮಾಡಿ, ಸಹಿ ಮಾಡಿದ ನಂತರ ಅರ್ಜಿ ಸಲ್ಲಿಸಲು ನಿಗಧಿಪಡಿಸಿರುವ ಕೊನೆಯ ದಿನಾಂಕವಾದ 08–07–2009 ರಂದು ಸಾಯಂಕಾಲ 05–30 ಗಂಟೆಯೊಳಗೆ, ಅಥವಾ ಅದಕ್ಕೂ ಮುಂಚಿತವಾಗಿ ಆಯ್ಕೆ ಪ್ರಾಧಿಕಾರಿಯ ವಿಭಾಗದ ವ್ಯಾಪ್ತಿಯಲ್ಲಿ ಬರುವ ಸಾರ್ವಜನಿಕ ಶಿಕ್ಷಣ ಇಲಾಖೆಯ ಜಿಲ್ಲಾ ಉಪನಿರ್ದೇಶಕರು (ಆಡಳಿತ) ರವರ ಕಚೇರಿಗೆ ಮೂರು ಪ್ರತಿಗಳನ್ನು (ಕೇಂದ್ರಿಕೃತ ದಾಖಲಾತಿ ಘಟಕದ ಮೂಲ ಓ.ಎಂ.ಆರ್., ಸಹ ನಿರ್ದೇಶಕರ ಪ್ರತಿ ಮತ್ತು ಉಪ ನಿರ್ದೇಶಕರ ಪ್ರತಿ) (ಅರ್ಜಿ ಖರೀದಿಸಿದ ಜಿಲ್ಲೆಯಲ್ಲಿ) ಖುದ್ದಾಗಿ ಸಲ್ಲಿಸಿ ಸ್ವೀಕೃತಿ ಮತ್ತು ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯ ಪ್ರವೇಶ ಪತ್ರವನ್ನು ಅಭ್ಯರ್ಥಿಯು ಖುದ್ದಾಗಿ ಪಡೆಯತಕ್ಕದ್ದು. **ನಿಗಧಿಪಡಿಸಿದ ಕೊನೆಯ ದಿನಾಂಕದ ನಂತರ, ಯಾವುದೇ ಅರ್ಜಿಗಳನ್ನು ಯಾವುದೇ ಕಾರಣಕ್ಕೂ ಸ್ವೀಕರಿಸಲಾಗುವುದಿಲ್ಲ ಹಾಗೂ ಅಂಚೆಯ ಮುಖಾಂತರ ಕಳುಹಿಸಿದ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.**

**ii)** ಅಭ್ಯರ್ಥಿಯು ಅರ್ಜಿಯಲ್ಲಿ ನಮೂದಿಸಿರುವ ವಿವರಗಳಿಗೆ ಸಂಬಂಧಪಟ್ಟ ಜನ್ಮ ದಿನಾಂಕ, ಪದವಿ ಪರೀಕ್ಷೆಯ ಮತ್ತು ಬಿ.ಎಡ್ ಪದವಿ ಪರೀಕ್ಷೆಯ ಎಲ್ಲಾ ವರ್ಷಗಳ ಹಾಗೂ ಎಲ್ಲಾ ಪ್ರಯತ್ನಗಳ ಅಂಕಪಟ್ಟಿಗಳು ಮತ್ತು ತೇರ್ಗಡೆಹೊಂದಿದ ಪ್ರಮಾಣ ಪತ್ರಗಳು ಹಾಗೂ ಕ್ಲೇಮು ಮಾಡುತ್ತಿರುವ ಮೀಸಲಾತಿ ಗುಂಪು (ನೇರ ಹಾಗೂ ಸಮತಳ) ಪ್ರಮಾಣ ಪತ್ರಗಳನ್ನು ಅಭ್ಯರ್ಥಿಯು ಸ್ವಯಂ ದೃಢೀಕರಿಸಿ ಪ್ರತಿಗಳನ್ನು ಅರ್ಜಿಯೊಂದಿಗೆ ಲಗತ್ತಿಸಿ, ಲಗತ್ತಿಸಲಾದ ದಾಖಲೆಗಳ ವಿವರವನ್ನು ಸ್ವೀಕೃತಿ ಪತ್ರದಲ್ಲಿ ಸ್ಪಷ್ಟವಾಗಿ ನಮೂದಿಸಬೇಕು.

**iii)** ಅರ್ಜಿ ನಮೂನೆಯ ಮೂಲ ಓ.ಎಂ.ಆರ್. ಪ್ರತಿಯನ್ನು ಕೇಂದ್ರಿಕೃತ ದಾಖಲಾತಿ ಘಟಕ, ಬೆಂಗಳೂರಿಗೆ ರವಾನಿಸಲಾಗುತಿದ್ದು, ಸದರಿ ಮೂಲ ಓ.ಎಂ.ಆರ್. ಪ್ರತಿಯಲ್ಲಿ ಅಭ್ಯರ್ಥಿಗಳು ಎಲ್ಲಾ ಅಂಕಣಗಳನ್ನು ಭರ್ತಿ ಮಾಡಿದ ನಂತರ ಇದರ ಎರಡು ಜೆರಾಕ್ಸ್ ಪ್ರತಿಗಳನ್ನು ಪಡೆದು ಸಹ ನಿರ್ದೇಶಕರು ಹಾಗೂ ಉಪ ನಿರ್ದೇಶಕರುಗಳಿಗೆ ಅಗತ್ಯ ದಾಖಲೆಗಳ ಸ್ವಯಂ ದೃಢೀಕೃತ ಪ್ರತಿಗಳೊಂದಿಗೆ ಸಲ್ಲಿಸತಕ್ಕದ್ದು. ಮೂಲ ಓ.ಎಂ.ಆರ್. ಅರ್ಜಿ ನಮೂನೆಯಲ್ಲಿ ಮೀಸಲಾತಿ (ನೇರ ಹಾಗೂ ಸಮತಳ) ಅಂಕಣಗಳನ್ನು ಹಾಗೆಯೇ ಬಿಟ್ಟು ಸಹ ನಿರ್ದೇಶಕರು ಹಾಗೂ ಉಪನಿರ್ದೇಶಕರ ಪ್ರತಿಗಳೊಂದಿಗೆ ಮೀಸಲಾತಿ ಪ್ರಮಾಣ ಪತ್ರಗಳನ್ನು ಸಲ್ಲಿಸದ್ದರೂ ಅಂತಹ ಅಭ್ಯರ್ಥಿಗಳ ಮೀಸಲಾತಿ ಕೋರಿಕೆಯನ್ನು ಪರಿಗಣಿಸದೆ ತಿರಸ್ಕರಿಸಲಾಗುವುದು.

**ಅರ್ಜಿಯೊಂದಿಗೆ ಸಲ್ಲಿಸಬೇಕಾದ ತತ್ಸಬಂಧ ಸ್ವಯಂ ದೃಢೀಕೃತ ಹಾಗೂ ಸ್ಪಷ್ಟವಾಗಿರುವ ಜೆರಾಕ್ಸ್ ಪ್ರಮಾಣ ಪತ್ರಗಳ ವಿವರಗಳು ಈ ಕೆಳಕಂಡಂತೆ ಇರುತ್ತವೆ.**

1) ಎಸ್.ಎಸ್.ಎಲ್.ಸಿ. ಕ್ರೋಢೀಕೃತ ಅಂಕಪಟ್ಟಿ (ಜನ್ಮ ದಿನಾಂಕ ಹಾಗೂ ಅಧ್ಯಯನ ಮಾಡಿದ ಭಾಷೆಗಳ ವಿವರದೊಂದಿಗೆ)

2) ಪಿ.ಯು.ಸಿ. ಅಂಕಪಟ್ಟಿ (ಅಧ್ಯಯನ ಮಾಡಿದ ಭಾಷೆಗಳ ವಿವರದೊಂದಿಗೆ) **(ಹಿಂದಿ ಭಾಷಾ ಶಿಕ್ಷಕರಿಗೆ ಮಾತ್ರ)**

3) ಪಿ.ಯು.ಸಿ.ಯಲ್ಲಿ ಅಧ್ಯಯನ ಮಾಡಿದ ಮಾಧ್ಯಮದ ಪ್ರಮಾಣ ಪತ್ರ **(ಹಿಂದಿ ಭಾಷಾ ಶಿಕ್ಷಕರ ಹುದ್ದೆಗೆ ಮಾತ್ರ)**

4) ಬಿ.ಎ / ಬಿ.ಎಸ್ಸಿ ಪದವಿಯ ಮೂರು ವರ್ಷದ ಎಲ್ಲಾ ಪ್ರಯತ್ನಗಳ ಅಂಕಪಟ್ಟಿಗಳು.

5) ಬಿ.ಎ. / ಬಿ.ಎಸ್ಸಿ ಪದವಿಯ ತೇರ್ಗಡೆ ಪ್ರಮಾಣ ಪತ್ರ.

6) ಪದವಿ ತತ್ಸಮಾನ ಪರೀಕ್ಷೆಯ ಎಲ್ಲಾ ವರ್ಷದ ಹಾಗೂ ಎಲ್ಲಾ ಪ್ರಯತ್ನಗಳ ಅಂಕಪಟ್ಟಿಗಳು. **(ಹಿಂದಿ ಭಾಷಾ ವಿಷಯದ ಅಭ್ಯರ್ಥಿಗಳಿಗೆ ಮಾತ್ರ)**

7) ಪದವಿ ತತ್ಸಮಾನ ಪರೀಕ್ಷೆಯ ತೇರ್ಗಡೆ ಪ್ರಮಾಣ ಪತ್ರ **(ಹಿಂದಿ ಭಾಷಾ ವಿಷಯದ ಅಭ್ಯರ್ಥಿಗಳಿಗೆ ಮಾತ್ರ)**

8) ಬಿ.ಎಡ್/ಬಿ.ಪಿ.ಎಡ್. ಪರೀಕ್ಷೆಯ ಅಂಕಪಟ್ಟಿ ಹಾಗೂ ತೇರ್ಗಡೆ ಪ್ರಮಾಣ ಪತ್ರಗಳು.

9) ಬಿ.ಎಡ್. ತತ್ಸಮಾನ ಪರೀಕ್ಷೆಯ ಅಂಕಪಟ್ಟಿ ಹಾಗೂ ತೇರ್ಗಡೆ ಪ್ರಮಾಣ ಪತ್ರಗಳು.

10) ಬಿ.ಎ. ಪದವಿಯಲ್ಲಿ ಸಂಬಂಧಿಸಿದ ಭಾಷೆ ಅಧ್ಯಯನ ಮಾಡದೆ, ಸದರಿ ಭಾಷೆಯಲ್ಲಿ ಸ್ನಾತಕೋತ್ತರ ಪದವಿ ಪಡೆದು, ಭಾಷಾ ಶಿಕ್ಷಕರ ಹುದ್ದೆಗೆ ಅರ್ಜಿ ಸಲ್ಲಿಸಿದಲ್ಲಿ ಸಂಬಂಧಿಸಿದ ಸ್ನಾತಕೋತ್ತರ ಪದವಿಯ ಅಂಕಪಟ್ಟಿಗಳು ಹಾಗೂ ತೇರ್ಗಡೆ ಪ್ರಮಾಣ ಪತ್ರಗಳು.

11) ಆಂಗ್ಲ ಭಾಷಾ ಶಿಕ್ಷಕರ ಹುದ್ದೆಗೆ ಸಂಬಂಧಿಸಿದಂತೆ ನಿಗದಿಪಡಿಸಲಾದ ರೀಜನಲ್ ಇನ್ಸ್‌ಟ್ಯೂಟ್ ಆಫ್ ಇಂಗ್ಲೀಷ್ ಸೌತ್ ಇಂಡಿಯಾರವರಿಂದ ಪಡೆದುಕೊಂಡಿರುವ ಸ್ನಾತಕೋತ್ತರ ಡಿಪ್ಲೋಮಾದ ಅಂಕಪಟ್ಟಿಗಳು ಹಾಗೂ ತೇರ್ಗಡೆ ಪ್ರಮಾಣ ಪತ್ರಗಳು.

12) ಕನ್ನಡ ಪಂಡಿತ/ಸಂಸ್ಕೃತ ವಿದ್ವಾನ/ಉರ್ದು ಮುನಷಿ ಪರೀಕ್ಷೆಯ ಎಲ್ಲಾ ವರ್ಷದ ಹಾಗೂ ಎಲ್ಲಾ ಪ್ರಯತ್ನಗಳ ಅಂಕಪಟ್ಟಿಗಳು ಹಾಗೂ ತೇರ್ಗಡೆ ಪ್ರಮಾಣ ಪತ್ರಗಳು.

13) ಕನ್ನಡ ಸರ್ಟಿಫಿಕೇಟ್ ಕೋರ್ಸಿನ ಅಂಕಪಟ್ಟಿ ಹಾಗೂ ತೇರ್ಗಡೆ ಪ್ರಮಾಣ ಪತ್ರಗಳು. (ಕನ್ನಡ ಸಾಹಿತ್ಯ ಪರಿಷತ್/ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ ಬೆಂಗಳೂರು) **(ಸಂಬಂಧಿಸಿದವರಿಗೆ ಮಾತ್ರ )**

14) ಅಂಗೀಕೃತ ವಿಶ್ವವಿದ್ಯಾನಿಲಯದಿಂದ ಸಂಬಂಧಿಸಿದ ಬೋಧನಾ ಮಾಧ್ಯಮದ ಭಾಷೆಯಲ್ಲಿ ಪಡೆದುಕೊಂಡಿರುವ ಡಿಪ್ಲೋಮಾ ಕೋರ್ಸಿನ ಅಂಕಪಟ್ಟಿ ಹಾಗೂ ತೇರ್ಗಡೆ ಪ್ರಮಾಣ ಪತ್ರ. **(ಸಂಬಂಧಿಸಿದವರಿಗೆ ಮಾತ್ರ )**

15) ಕೋರಿರುವ ಮೀಸಲಾತಿ (ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ / ಪ್ರವರ್ಗ–1 / 2ಎ / 2ಬಿ / 3ಎ / 3ಬಿ) ಪ್ರಮಾಣ ಪತ್ರ. **(ಸಂಬಂಧಿಸಿದವರಿಗೆ ಮಾತ್ರ )**

16) ಗ್ರಾಮೀಣ ಅಭ್ಯರ್ಥಿ ವ್ಯಾಸಂಗ ಪ್ರಮಾಣ ಪತ್ರ (ಸರಕಾರಿ ಆದೇಶ ದಿನಾಂಕ 10–08–2005 ರಲ್ಲಿ ನಿಗದಿಪಡಿಸಲಾದ ನಮೂನೆ–2ರಲ್ಲಿ ಮಾತ್ರ) (ಸಾಮಾನ್ಯ ಗುಂಪಿಗೆ ಸೇರಿದ ಅಭ್ಯರ್ಥಿ ನಮೂನೆ–2 ರ ಜೊತೆಗೆ ನಮೂನೆ–1ರಲ್ಲಿ ಸಂಬಂಧಿಸಿದ ತಹಸೀಲ್ದಾರರವರಿಂದ ಪಡೆದುಕೊಂಡಿರುವ ಪ್ರಮಾಣ ಪತ್ರವನ್ನು ಸಹ ಲಗತ್ತಿಸುವುದು) **(ಸಂಬಂಧಿಸಿದವರಿಗೆ ಮಾತ್ರ)**

17) ಕನ್ನಡ ಮಾಧ್ಯಮ ಅಭ್ಯರ್ಥಿ ವ್ಯಾಸಂಗ ಪ್ರಮಾಣ ಪತ್ರ. ( **ಸಂಬಂಧಿಸಿದವರಿಗೆ ಮಾತ್ರ** )

18) ಯೋಜನೆಗಳಿಂದ ನಿರಾಶ್ರಿತರಾದ ಕುಟುಂಬದ ಅಭ್ಯರ್ಥಿ ಪ್ರಮಾಣ ಪತ್ರ. ( **ಸಂಬಂಧಿಸಿದವರಿಗೆ ಮಾತ್ರ** )

19) ಅಂಗವಿಕಲ ಅಭ್ಯರ್ಥಿಯ ಪ್ರಮಾಣ ಪತ್ರ. ( **ಸಂಬಂಧಿಸಿದವರಿಗೆ ಮಾತ್ರ** )

20) ಮಾಜಿ ಸೈನಿಕ / ಅವಲಂಬಿತರ ಪ್ರಮಾಣ ಪತ್ರ. (ಸೈನಿಕ ಸೇವೆಯಿಂದ ಬಿಡುಗಡೆ / ಮುಕ್ತಿ ಹೊಂದಿದ ಪುಸ್ತಿಕೆಯೊಂದಿಗೆ) ( **ಸಂಬಂಧಿಸಿದವರಿಗೆ ಮಾತ್ರ** )

21) ಸರಕಾರಿ ಪ್ರೌಢ ಶಾಲೆಯಲ್ಲಿ ಸಂಬಂಧಿಸಿದ ವಿಷಯದಲ್ಲಿ ಸಕ್ಷಮ ಪ್ರಾಧಿಕಾರದಿಂದ ನೇಮಕಗೊಂಡು ಗೌರವ ಶಿಕ್ಷಕರಾಗಿ ಸೇವೆ ಸಲ್ಲಿಸಿದ ಬಗ್ಗೆ ಪ್ರಮಾಣ ಪತ್ರ. ( **ಸಂಬಂಧಿಸಿದವರಿಗೆ ಮಾತ್ರ** )

22) ಸರಕಾರಿ ಪ್ರೌಢ ಶಾಲೆಯಲ್ಲಿ ಸಂಬಂಧಿಸಿದ ವಿಷಯದಲ್ಲಿ ಸಕ್ಷಮ ಪ್ರಾಧಿಕಾರದಿಂದ ನೇಮಕಗೊಂಡು ಅರೆ ಕಾಲಿಕ ಶಿಕ್ಷಕರಾಗಿ ಸೇವೆ ಸಲ್ಲಿಸಿದ ಬಗ್ಗೆ ಪ್ರಮಾಣ ಪತ್ರ. ( **ಸಂಬಂಧಿಸಿದವರಿಗೆ ಮಾತ್ರ** )

23) ಭಾರತಿಯ ಜನಗಣತಿ ಸಂಸ್ಥೆಯಲ್ಲಿ ಗುತ್ತಿಗೆ ಆಧಾರದ ಮೇಲೆ ಸೇವೆ ಸಲ್ಲಿಸಿರುವ ಬಗ್ಗೆ ಪ್ರಮಾಣ ಪತ್ರ. ( **ಸಂಬಂಧಿಸಿದವರಿಗೆ ಮಾತ್ರ** )

24) **ಸರಕಾರದ ಸೇವೆಯಲ್ಲಿರುವ ಅಭ್ಯರ್ಥಿಗಳು** ಹಾಲಿ ಕಾರ್ಯ ನಿರ್ವಹಿಸುತ್ತಿರುವ ಉದ್ಯೋಗಕ್ಕೆ ಸಂಬಂಧಿಸಿದ ಸೇವಾ ಪ್ರಮಾಣ ಪತ್ರ ಹಾಗೂ ಈ ಹುದ್ದೆಗೆ ಅರ್ಜಿ ಸಲ್ಲಿಸಲು ನೇಮಕಾತಿ ಪ್ರಾಧಿಕಾರಿಯಿಂದ ಪಡೆದುಕೊಂಡಿರುವ **ಅನುಮತಿ ಪತ್ರ** [**ಸಂಬಂಧಿಸಿದವರಿಗೆ ಮಾತ್ರ** ]

25) ಇನ್ನಿತರ ಅವಶ್ಯವೆಂದು ಭಾವಿಸಿದ ದಾಖಲೆಗಳ ಪ್ರತಿಗಳು.

**ಸೂಚನೆ:–** **ಮೇಲ್ಕಂಡ ಎಲ್ಲಾ ದಾಖಲೆಗಳನ್ನು ಅರ್ಜಿ ಸಲ್ಲಿಸುವಾಗಲೇ ಪಡೆದು ಲಗತ್ತಿಸಬೇಕು. ಯಾವುದೇ ಹೊಸ ದಾಖಲೆಗಳನ್ನು ಆಕ್ಷೇಪಣೆ ಸಲ್ಲಿಸುವ ಹಂತದಲ್ಲಿ ಸಲ್ಲಿಸಲು ಅವಕಾಶವಿರುವುದಿಲ್ಲ, ಅಂತಹ ದಾಖಲೆಗಳನ್ನು ಪರಿಗಣಿಸದೆ ತಿರಸ್ಕರಿಸಲಾಗುವುದು**

**iii) ಹಾಲಿ ರಾಜ್ಯ ಸರಕಾರದ ಸೇವೆಯಲ್ಲಿರುವ ಅಭ್ಯರ್ಥಿಗಳು ತಮ್ಮ ಹುದ್ದೆಯ ನೇಮಕಾತಿ ಪ್ರಾಧಿಕಾರಿಯ ಮುಖಾಂತರವೇ ತಮ್ಮ ಅರ್ಜಿಗಳನ್ನು ಸಲ್ಲಿಸತಕ್ಕದ್ದು ಮತ್ತು ಅರ್ಜಿ ಸ್ವೀಕರಿಸಲು ನಿಗಧಿಪಡಿಸಿರುವ ಕೊನೆಯ ದಿನಾಂಕವಾದ 08.07.2009ರ ಸಾಯಂಕಾಲ 05–30 ರೊಳಗೆ ಅಥವಾ ಅದಕ್ಕೂ ಮುಂಚಿತವಾಗಿ ಆಯ್ಕೆ ಪ್ರಾಧಿಕಾರಿಯ ವಿಭಾಗದ ವ್ಯಾಪ್ತಿಯಲ್ಲಿ ಬರುವ ಜಿಲ್ಲಾ ಉಪನಿರ್ದೇಶಕರ ಕಛೇರಿಗೆ ಖುದ್ದಾಗಿ ಸಲ್ಲಿಸುವುದು. ಕೊನೆಯ ದಿನಾಂಕದ ನಂತರ ಬರುವ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.**

**iv)** ಅರ್ಜಿಗಳನ್ನು ಸ್ವೀಕರಿಸಲು ನಿಗಧಿಪಡಿಸಿದ ಕೊನೆಯ ದಿನಾಂಕವು ಸಾರ್ವಜನಿಕ ರಜಾ ದಿನವಾಗಿದ್ದಲ್ಲಿ ನಂತರದ ಕೆಲಸದ ದಿನವು ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕವಾಗಿರುತ್ತದೆ.

**v)** ಅರ್ಜಿಯನ್ನು ಒಳಗೊಂಡ ಲಕೋಟೆಯ ಮೇಲೆ **"ಪ್ರೌಢ ಶಾಲಾ ಸಹಾಯಕ ಶಿಕ್ಷಕರ ಗ್ರೇಡ್–2 ವೃಂದದ ______________ ವಿಷಯದ______________ಬೋಧನಾ ಮಾಧ್ಯಮದ / ದೈಹಿಕ ಶಿಕ್ಷಣ ಶಿಕ್ಷಕ (ಗ್ರೇಡ್–1) ಹುದ್ದೆಗಾಗಿ ಅರ್ಜಿ"** ಎಂದು ದಪ್ಪ ಅಕ್ಷರದಲ್ಲಿ ಬರೆದಿರಬೇಕು.

7) **ಪ್ರೌಢ ಶಾಲಾ ಸಹ ಶಿಕ್ಷಕ (ಗ್ರೇಡ್–2) ವೃಂದದ ವಿವಿಧ ವಿಷಯ ಹಾಗೂ ಮಾಧ್ಯಮದ ಮತ್ತು ದೈಹಿಕ ಶಿಕ್ಷಣ ಶಿಕ್ಷಕ (ಗ್ರೇಡ್–1) ಹುದ್ದೆಗಳಿಗೆ ಅರ್ಜಿ ಸಲ್ಲಿಸುವ ಬಗ್ಗೆ.**

ಪ್ರೌಢ ಶಾಲಾ ಸಹಾಯಕ ಶಿಕ್ಷಕರ ಗ್ರೇಡ್–2 ವೃಂದದ, ವಿವಿಧ ವಿಷಯ ಹಾಗೂ ಮಾಧ್ಯಮದ ಮತ್ತು ದೈಹಿಕ ಶಿಕ್ಷಣ ಶಿಕ್ಷಕ (ಗ್ರೇಡ್–1) ಹುದ್ದೆಗಳಿಗೆ ಒಂದೇ ಅರ್ಜಿ ನಮೂನೆಯನ್ನು ನಿಗಧಿಪಡಿಸಿದೆ. ಅಭ್ಯರ್ಥಿಗಳು ಒಂದೇ ಅರ್ಜಿಯಲ್ಲಿ ಒಂದಕ್ಕಿಂತ ಹೆಚ್ಚು ವಿಷಯದ ಅಥವಾ ಮಾಧ್ಯಮದ ಹುದ್ದೆಗಳಿಗೆ ಅರ್ಜಿ ಸಲ್ಲಿಸಬಹುದಾಗಿದೆ. ಪ್ರತ್ಯೇಕ ಅರ್ಜಿಗಳ ಅವಶ್ಯಕತೆ ಇರುವದಿಲ್ಲ.ಆದರೆ ಅಭ್ಯರ್ಥಿಗಳು ವಿವಿಧ ವಿಷಯ ಹಾಗೂ ಮಾಧ್ಯಮದ ಹುದ್ದೆಗಳಿಗೆ ಆದ್ಯತೆಯನ್ನು ನಮೂದಿಸಬೇಕು. **ಆದ್ಯತೆ ಪ್ರಕಾರ ಆಯ್ಕೆ ಮಾಡಲಾಗುವುದು. ಒಂದು ಆದ್ಯತೆಯ ಪ್ರಕಾರ ಆಯ್ಕೆ ಹೊಂದಿದ್ದಲ್ಲಿ ಉಳಿದ ಆದ್ಯತೆಗಳನ್ನು ಕೈಬಿಡಲಾಗುವುದು.**

**ಉದಾಹರಣೆಗೆ:–(1)** ಅಧಿಸೂಚನೆಯಲ್ಲಿ ನೀಡಿರುವಂತೆ ಒಬ್ಬ ಅಭ್ಯರ್ಥಿಯು ಕಲಾ [ಕನ್ನಡ ಮಾಧ್ಯಮ] ಮತ್ತು ಕನ್ನಡ ಭಾಷಾ ಶಿಕ್ಷಕರ ಹುದ್ದೆಗೆ ಅರ್ಹನಾಗಿದ್ದಲ್ಲಿ, ಅಂತಹ ಅಭ್ಯರ್ಥಿಯು ಎರಡು ಹುದ್ದೆಗಳಿಗೆ ಆದ್ಯತೆಯನ್ನು ಸೂಚಿಸಬಹುದು. ಉದಾಹರಣೆಗೆ, ಕನ್ನಡ ಭಾಷಾ ಶಿಕ್ಷಕರ ಹುದ್ದೆಗೆ ಪ್ರಥಮ ಆದ್ಯತೆಯಾಗಿದ್ದು, ಕಲಾ [ಕನ್ನಡ ಮಾಧ್ಯಮ] ಹುದ್ದೆಗೆ ಎರಡನೆಯ ಆದ್ಯತೆಯಾಗಿದ್ದಲ್ಲಿ **ಕನ್ನಡ ಭಾಷಾ** ಕಾಲಂನಲ್ಲಿ **(1)** ಎಂದು ಹಾಗೂ ಕಲಾ [ಕನ್ನಡ ಮಾಧ್ಯಮ] ಕಾಲಂನಲ್ಲಿ **(2)** ಎಂದು ನಮೂದಿಸಬೇಕು. ಒಂದು ವೇಳೆ ಆದ್ಯತೆಗಳನ್ನು ನಮೂದಿಸದಿದ್ದಲ್ಲಿ ಅಭ್ಯರ್ಥಿಯು ಹೊಂದಿರುವ ವಿದ್ಯಾರ್ಹತೆಗಳನ್ನು ಆಧರಿಸಿ ಆಯ್ಕೆಗೆ ಪರಿಗಣಿಸಲಾಗುವುದು.

**8) ವಿದ್ಯಾರ್ಹತೆಗಳು:–**

**ಅಭ್ಯರ್ಥಿಗಳು ನೇಮಕಾತಿ ಅಧಿಸೂಚನೆ ದಿನಾಂಕದಂದು "ದಿ ಕರ್ನಾಟಕ ಎಜುಕೇಷನ್ ಡಿಪಾರ್ಟ್‌ಮೆಂಟ್ ಸರ್ವೀಸಸ್ (ಡಿಪಾರ್ಟ್‌ಮೆಂಟ್ ಆಫ್ ಪಬ್ಲಿಕ್ ಇನ್ಸ್‌ಸ್ಟ್ರಕ್ಷನ್) (ರಿಕ್ರೂಟ್‌ಮೆಂಟ್) (ಅಮೆಂಡ್‌ಮೆಂಟ್) ರೂಲ್ಸ್ 2002"** ನಿಯಮಗಳಲ್ಲಿ ನಿಗದಿಪಡಿಸಿರುವಂತೆ, ಪ್ರೌಢ ಶಾಲಾ ಸಹಾಯಕ ಗ್ರೇಡ್–2 ವೃಂದದ, ವಿವಿಧ ವಿಷಯಗಳ ಹಾಗೂ ಮಾಧ್ಯಮದ ಮತ್ತು ದೈಹಿಕ ಶಿಕ್ಷಣ ಶಿಕ್ಷಕ (ಗ್ರೇಡ್–1) ಶಿಕ್ಷಕರ ಹುದ್ದೆಗಳಿಗೆ ಹೊಂದಿರಬೇಕಾದ ವಿದ್ಯಾರ್ಹತೆಗಳ ವಿವರಗಳು ಈ ಮುಂದೆ ತಿಳಿಸಿದಂತಿರುತ್ತದೆ.

**(ಅ) ಕಲಾ ಶಿಕ್ಷಕರ ಹುದ್ದೆಗಳಿಗೆ (Arts Teacher):–**

i) ಅಭ್ಯರ್ಥಿಯು, ಭಾರತ ದೇಶದ ಕಾನೂನಿನಂತೆ ಸ್ಥಾಪಿಸಲ್ಪಟ್ಟ ಮತ್ತು ವಿಶ್ವವಿದ್ಯಾಲಯ ಧನ ಸಹಾಯ ಆಯೋಗದಿಂದ ಅಂಗೀಕೃತವಾದ ಒಂದು ವಿಶ್ವವಿದ್ಯಾಲಯದ **"ಬ್ಯಾಚಲರ್ ಆಫ್ ಆರ್ಟ್ಸ್"** (ಬಿ.ಎ) ಪದವೀಧರರಾಗಿದ್ದು, ಈ ಪದವಿ ಪರೀಕ್ಷೆಯಲ್ಲಿ **"ಇತಿಹಾಸ, ಅರ್ಥಶಾಸ್ತ್ರ, ಭೂಗೋಳ ಶಾಸ್ತ್ರ, ರಾಜ್ಯಶಾಸ್ತ್ರ, ಸಮಾಜ ಶಾಸ್ತ್ರ** ಇವುಗಳಲ್ಲಿ ಯಾವುದಾದರೂ **ಎರಡು ಐಚ್ಛಿಕ ವಿಷಯಗಳನ್ನು** ಅಧ್ಯಯನ ಮಾಡಿರಬೇಕು.

**ಮತ್ತು**

ii] ಭಾರತ ದೇಶದ ಕಾನೂನಿನಂತೆ ಸ್ಥಾಪಿಸಲ್ಪಟ್ಟ ಮತ್ತು ವಿಶ್ವವಿದ್ಯಾಲಯ ಧನ ಸಹಾಯ ಆಯೋಗದಿಂದ ಅಂಗೀಕೃತವಾದ ಒಂದು ವಿಶ್ವವಿದ್ಯಾನಿಲಯದಿಂದ **ಬ್ಯಾಚುಲರ್ ಆಫ್ ಎಜ್ಯುಕೇಶನ್** (ಬಿ.ಇಡಿ) ಪದವಿಯನ್ನು ಪಡೆದಿರಬೇಕು.

**ಹಾಗೂ**

iii) ಬೋಧನಾ ಮಾಧ್ಯಮದ ಭಾಷೆಯನ್ನು ಅಭ್ಯರ್ಥಿಯು **ಬ್ಯಾಚುಲರ್ ಆಫ್ ಆರ್ಟ್ಸ್ (ಬಿ.ಎ)** ಪದವಿಯಲ್ಲಿ ಒಂದು ಭಾಷೆಯನ್ನಾಗಿ ಅಧ್ಯಯನ ಮಾಡಿರಬೇಕು.

**ಅಥವಾ**

ಬೋಧನಾ ಮಾಧ್ಯಮದ ಭಾಷೆಯನ್ನು ಬಿ.ಎ. ಪದವಿಯಲ್ಲಿ ಅಧ್ಯಯನ ಮಾಡದೆ ಇದ್ದಲ್ಲಿ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಆ ಭಾಷೆಯನ್ನು ಪ್ರಥಮ ಅಥವಾ ದ್ವಿತೀಯ ಭಾಷೆಯನ್ನಾಗಿ ಅಧ್ಯಯನ ಮಾಡಿರಬೇಕು.

**ಅಥವಾ**

ಎಸ್.ಎಸ್.ಎಲ್.ಸಿ. ಅಥವಾ ಬಿಎ ಪದವಿ ಪರೀಕ್ಷೆಯನ್ನು **ಬೋಧನಾ ಮಾಧ್ಯಮದ** ಭಾಷೆಯ ಮಾಧ್ಯಮದಲ್ಲಿ ಅಧ್ಯಯನ ಮಾಡಿರಬೇಕು.

**ಅಥವಾ**

ಭಾರತ ದೇಶದ ಕಾನೂನಿನಂತೆ ಸ್ಥಾಪಿಸಲ್ಪಟ್ಟ ಮತ್ತು ವಿಶ್ವವಿದ್ಯಾಲಯ ಧನ ಸಹಾಯ ಆಯೋಗದಿಂದ ಅಂಗೀಕೃತವಾದ ಒಂದು ವಿಶ್ವವಿದ್ಯಾನಿಲಯದಿಂದ, ಸಂಬಂಧಿಸಿದ ಬೋಧನಾ ಮಾಧ್ಯಮದ ಭಾಷೆಯಲ್ಲಿ **ಡಿಪ್ಲೋಮಾ** ಹೊಂದಿರಬೇಕು.

**ಕನ್ನಡ ಮಾಧ್ಯಮದಲ್ಲಿ ಬೋಧಿಸುವ ವಿಷಯಗಳಿಗೆ ಸಂಬಂಧಿಸಿದಂತೆ ಮೇಲೆ ತಿಳಿಸಿದ ನಿಬಂಧನೆಗಳ ಪ್ರಕಾರ ಇಲ್ಲದಿದ್ದಲ್ಲಿ, ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ, ಬೆಂಗಳೂರು ಅಥವಾ ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು ಇವರುಗಳ ವತಿಯಿಂದ ನಡೆಸಲ್ಪಡುವ "ಕನ್ನಡ ಸರ್ಟಿಫಿಕೇಟ್"[ಕಾವ/ಜಾಣ/ರತ್ನ] ಕೋರ್ಸ್‌ನ್ನು ಪಾಸು ಮಾಡಿರಬೇಕು.**

**(ಆ) ಭೌತ ವಿಜ್ಞಾನ ಶಿಕ್ಷಕರ ಹುದ್ದೆಗಳಿಗೆ (Physical Science Teacher):–**

i) ಅಭ್ಯರ್ಥಿಯು, ಭಾರತ ದೇಶದ ಕಾನೂನಿನಂತೆ ಸ್ಥಾಪಿಸಲ್ಪಟ್ಟ ಮತ್ತು ವಿಶ್ವವಿದ್ಯಾಲಯ ಧನ ಸಹಾಯ ಆಯೋಗದಿಂದ ಅಂಗೀಕೃತವಾದ ಒಂದು ವಿಶ್ವವಿದ್ಯಾಲಯದ **"ಬ್ಯಾಚಲರ್ ಆಫ್ ಸೈನ್ಸ್"** (ಬಿ.ಎಸ್ಸಿ) ಪದವೀಧರರಾಗಿದ್ದು, ಈ ಪದವಿ

ಪರೀಕ್ಷೆಯಲ್ಲಿ ಈ ಕೆಳಕಂಡ ಐಚ್ಛಿಕ ವಿಷಯಗಳಲ್ಲಿ ಎರಡು ಐಚ್ಛಿಕ ವಿಷಯಗಳನ್ನು ಅಧ್ಯಯನ ಮಾಡಿರಬೇಕು. ಇದರಲ್ಲಿ **"ಗಣಿತ ಶಾಸ್ತ್ರ"** ಐಚ್ಛಿಕ ವಿಷಯವನ್ನು ಕಡ್ಡಾಯವಾಗಿ ಅಧ್ಯಯನ ಮಾಡಿರಬೇಕು.

**" ಭೌತಶಾಸ್ತ್ರ, ಗಣಿತಶಾಸ್ತ್ರ, ರಸಾಯನ ಶಾಸ್ತ್ರ "**

**ಅಥವಾ**

**" ಭೌತಶಾಸ್ತ್ರ, ಗಣಿತಶಾಸ್ತ್ರ, ಕಂಪ್ಯೂಟರ್ ಸೈನ್ಸ್ "**

**ಅಥವಾ**

**" ಭೌತಶಾಸ್ತ್ರ, ಗಣಿತಶಾಸ್ತ್ರ, ಎಲೆಕ್ಟ್ರಾನಿಕ್ಸ್ "**

**ಮತ್ತು**

ii) ಭಾರತ ದೇಶದ ಕಾನೂನಿನಂತೆ ಸ್ಥಾಪಿಸಲ್ಪಟ್ಟ ಮತ್ತು ವಿಶ್ವವಿದ್ಯಾಲಯ ಧನ ಸಹಾಯ ಆಯೋಗದಿಂದ ಅಂಗೀಕೃತವಾದ ಒಂದು ವಿಶ್ವವಿದ್ಯಾಲಯದಿಂದ **"ಬ್ಯಾಚಲರ್ ಆಫ್ ಎಜುಕೇಷನ್"** (ಬಿ.ಎಡ್) ಪದವಿ ಪಡೆದಿರಬೇಕು.

**ಹಾಗೂ**

iii) ಬೋಧನಾ ಮಾಧ್ಯಮದ ಭಾಷೆಯನ್ನು ಅಭ್ಯರ್ಥಿಯು **"ಬ್ಯಾಚಲರ್ ಆಫ್ ಸೈನ್ಸ್"** (ಬಿ.ಎಸ್ಸಿ) ಪದವಿಯಲ್ಲಿ ಒಂದು ಭಾಷೆಯನ್ನಾಗಿ ಅಧ್ಯಯನ ಮಾಡಿರಬೇಕು.

**ಅಥವಾ**

ಬೋಧನಾ ಮಾಧ್ಯಮದ ಭಾಷೆಯನ್ನು ಬಿ.ಎಸ್ಸಿ. ಪದವಿಯಲ್ಲಿ ಅಧ್ಯಯನ ಮಾಡದೆ ಇದ್ದಲ್ಲಿ **ಎಸ್.ಎಸ್.ಎಲ್**.ಸಿ. ಪರೀಕ್ಷೆಯಲ್ಲಿ ಆ ಭಾಷೆಯನ್ನು **ಪ್ರಥಮ ಅಥವಾ ದ್ವಿತೀಯ** ಭಾಷೆಯನ್ನಾಗಿ ಅಧ್ಯಯನ ಮಾಡಿರಬೇಕು.

**ಅಥವಾ**

ಎಸ್.ಎಸ್.ಎಲ್.ಸಿ. ಅಥವಾ ಬಿ.ಎಸ್ಸಿ. ಪದವಿ ಪರೀಕ್ಷೆಯನ್ನು **ಬೋಧನಾ ಮಾಧ್ಯಮದ** ಭಾಷೆಯ ಮಾಧ್ಯಮದಲ್ಲಿ ಅಧ್ಯಯನ ಮಾಡಿರಬೇಕು.

**ಅಥವಾ**

ಭಾರತ ದೇಶದ ಕಾನೂನಿನಂತೆ ಸ್ಥಾಪಿಸಲ್ಪಟ್ಟ ಮತ್ತು ವಿಶ್ವವಿದ್ಯಾಲಯ ಧನ ಸಹಾಯ ಆಯೋಗದಿಂದ ಅಂಗೀಕೃತವಾದ ಒಂದು ವಿಶ್ವವಿದ್ಯಾಲಯದಿಂದ, ಸಂಬಂಧಿಸಿದ ಬೋಧನಾ ಮಾಧ್ಯಮದ ಭಾಷೆಯಲ್ಲಿ **ಡಿಪ್ಲೋಮಾವನ್ನು** ಹೊಂದಿರಬೇಕು.

**ಕನ್ನಡ ಮಾಧ್ಯಮದಲ್ಲಿ ಬೋಧಿಸುವ ವಿಷಯಗಳಿಗೆ ಸಂಬಂಧಿಸಿದಂತೆ ಮೇಲೆ ತಿಳಿಸಿದ ನಿಬಂಧನೆಗಳ ಪ್ರಕಾರ ಇಲ್ಲದಿದ್ದಲ್ಲಿ, ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ, ಬೆಂಗಳೂರು ಅಥವಾ ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು ಇವರುಗಳ ವತಿಯಿಂದ ನಡೆಸಲ್ಪಡುವ "ಕನ್ನಡ ಸರ್ಟಿಫಿಕೇಟ್" ಕೋರ್ಸ್‌ನ್ನು [ಕಾವ/ಜಾಣ/ರತ್ನ] ಪಾಸು ಮಾಡಿರಬೇಕು.**

(ಇ) ಜೀವ ವಿಜ್ಞಾನ ಶಿಕ್ಷಕರ ಹುದ್ದೆಗಳಿಗೆ (**Biological Science Teacher**):–

i) ಅಭ್ಯರ್ಥಿಯು, ಭಾರತ ದೇಶದ ಕಾನೂನಿನಂತೆ ಸ್ಥಾಪಿಸಲ್ಪಟ್ಟ ಮತ್ತು ವಿಶ್ವವಿದ್ಯಾಲಯ ಧನ ಸಹಾಯ ಆಯೋಗದಿಂದ ಅಂಗೀಕೃತವಾದ ಒಂದು ವಿಶ್ವವಿದ್ಯಾಲಯದ **"ಬ್ಯಾಚಲರ್ ಆಫ್ ಸೈನ್ಸ್"** (ಬಿ.ಎಸ್ಸಿ) ಪದವೀಧರರಾಗಿದ್ದು, ಈ ಪದವಿ ಪರೀಕ್ಷೆಯಲ್ಲಿ **ರಸಾಯನ ಶಾಸ್ತ್ರ, ಸಸ್ಯಶಾಸ್ತ್ರ ಮತ್ತು ಪ್ರಾಣಿಶಾಸ್ತ್ರ** ಈ ಐಚ್ಛಿಕ ವಿಷಯಗಳಲ್ಲಿ ಎರಡು ಐಚ್ಛಿಕ ವಿಷಯಗಳನ್ನು ಅಧ್ಯಯನ ಮಾಡಿರಬೇಕು. ಹಾಗೂ ಇದರಲ್ಲಿ **" ರಸಾಯನಶಾಸ್ತ್ರ "** ಐಚ್ಛಿಕ ವಿಷಯವನ್ನು ಕಡ್ಡಾಯವಾಗಿ ಅಧ್ಯಯನ ಮಾಡಿರಬೇಕು.

**ಮತ್ತು**

ii) ಭಾರತ ದೇಶದ ಕಾನೂನಿನಂತೆ ಸ್ಥಾಪಿಸಲ್ಪಟ್ಟ ಮತ್ತು ವಿಶ್ವವಿದ್ಯಾಲಯ ಧನ ಸಹಾಯ ಆಯೋಗದಿಂದ ಅಂಗೀಕೃತವಾದ ಒಂದು ವಿಶ್ವವಿದ್ಯಾಲಯದಿಂದ **"ಬ್ಯಾಚಲರ್ ಆಫ್ ಎಜುಕೇಷನ್"** (ಬಿ.ಎಡ್) ಪದವಿ ಪಡೆದಿರಬೇಕು.

**ಹಾಗೂ**

iii) ಬೋಧನಾ ಮಾಧ್ಯಮದ ಭಾಷೆಯನ್ನು ಅಭ್ಯರ್ಥಿಯು **"ಬ್ಯಾಚಲರ್ ಆಫ್ ಸೈನ್ಸ್"** (ಬಿ.ಎಸ್ಸಿ) ಪದವಿಯಲ್ಲಿ ಒಂದು ಭಾಷೆಯನ್ನಾಗಿ ಅಧ್ಯಯನ ಮಾಡಿರಬೇಕು.

**ಅಥವಾ**

ಬೋಧನಾ ಮಾಧ್ಯಮದ ಭಾಷೆಯನ್ನು ಬಿ.ಎಸ್ಸಿ. ಪದವಿಯಲ್ಲಿ ಅಧ್ಯಯನ ಮಾಡದೆ ಇದ್ದಲ್ಲಿ **ಎಸ್.ಎಸ್.ಎಲ್**.ಸಿ. ಪರೀಕ್ಷೆಯಲ್ಲಿ ಆ ಭಾಷೆಯನ್ನು **ಪ್ರಥಮ ಅಥವಾ ದ್ವಿತೀಯ** ಭಾಷೆಯನ್ನಾಗಿ ಅಧ್ಯಯನ ಮಾಡಿರಬೇಕು.

**ಅಥವಾ**

ಎಸ್.ಎಸ್.ಎಲ್.ಸಿ. ಅಥವಾ ಬಿ.ಎಸ್ಸಿ. ಪದವಿ ಪರೀಕ್ಷೆಯನ್ನು **ಬೋಧನಾ ಮಾಧ್ಯಮದ** ಭಾಷೆಯ ಮಾಧ್ಯಮದಲ್ಲಿ ಅಧ್ಯಯನ ಮಾಡಿರಬೇಕು.

**ಅಥವಾ**

ಭಾರತ ದೇಶದ ಕಾನೂನಿನಂತೆ ಸ್ಥಾಪಿಸಲ್ಪಟ್ಟ ಮತ್ತು ವಿಶ್ವವಿದ್ಯಾಲಯ ಧನ ಸಹಾಯ ಆಯೋಗದಿಂದ ಅಂಗೀಕೃತವಾದ ಒಂದು ವಿಶ್ವವಿದ್ಯಾಲಯದಿಂದ, ಸಂಬಂಧಿಸಿದ ಬೋಧನಾ ಮಾಧ್ಯಮದ ಭಾಷೆಯಲ್ಲಿ **'ಡಿಪ್ಲೋಮಾ'** ವನ್ನು ಹೊಂದಿರಬೇಕು.

ಕನ್ನಡ ಮಾಧ್ಯಮದಲ್ಲಿ ಬೋಧಿಸುವ ವಿಷಯಗಳಿಗೆ ಸಂಬಂಧಿಸಿದಂತೆ ಮೇಲೆ ತಿಳಿಸಿದ ನಿಬಂಧನೆಗಳ ಪ್ರಕಾರ ಇಲ್ಲದಿದ್ದಲ್ಲಿ, ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ, ಬೆಂಗಳೂರು ಅಥವಾ ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು ಇವರುಗಳ ವತಿಯಿಂದ ನಡೆಸಲ್ಪಡುವ **"ಕನ್ನಡ ಸರ್ಟಿಫಿಕೇಟ್"** ಕೋರ್ಸ್‌ನ್ನು[ಕಾವ/ಜಾಣ/ರತ್ನ] ಪಾಸು ಮಾಡಿರಬೇಕು.

**(ಈ) ಭಾಷಾ ಶಿಕ್ಷಕರುಗಳ ಹುದ್ದೆಗಳಿಗೆ (Language Assistants ):–**

i) ಅಭ್ಯರ್ಥಿಯು, ಭಾರತ ದೇಶದ ಕಾನೂನಿನಂತೆ ಸ್ಥಾಪಿಸಲ್ಪಟ್ಟ ಮತ್ತು ವಿಶ್ವವಿದ್ಯಾಲಯ ಧನ ಸಹಾಯ ಆಯೋಗದಿಂದ ಅಂಗೀಕೃತವಾದ ಒಂದು ವಿಶ್ವವಿದ್ಯಾಲಯದ **"ಬ್ಯಾಚಲರ್ ಆಫ್ ಆರ್ಟ್ಸ್"** (ಬಿ.ಎ) ಪದವೀಧರರಾಗಿದ್ದು, ಈ ಪದವಿ ಪರೀಕ್ಷೆಯಲ್ಲಿ ಸಂಬಂಧಿಸಿದ ಭಾಷಾ ಶಿಕ್ಷಕರ ಹುದ್ದೆಗೆ ಅನುಗುಣವಾದ ಭಾಷೆಯನ್ನು ಒಂದು ಐಚ್ಛಿಕ ವಿಷಯವನ್ನಾಗಿ (Optionals) ಅಧ್ಯಯನ ಮಾಡಿರಬೇಕು. ಭಾಷೆಗಳು ಅಂದರೆ **ಕನ್ನಡ, ಇಂಗ್ಲೀಷ್, ಉರ್ದು, ಹಿಂದಿ, ಮರಾಠಿ, ತೆಲುಗು, ತಮಿಳು ಮತ್ತು ಸಂಸ್ಕೃತ.**

**ಅಥವಾ**

ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ ಬೆಂಗಳೂರು ಇವರು ನಡೆಸುವ (04) ನಾಲ್ಕು ವರ್ಷಗಳ ಅವಧಿಯ **ಕನ್ನಡ ಪಂಡಿತ, ಸಂಸ್ಕೃತ ವಿದ್ವಾನ್[ವಿದ್ಯುನ್ಮಧ್ಯಮ ಮತ್ತು ವಿದ್ವತ್ ಉತ್ತಮ] "ಉರ್ದು ಮುನ್ಷಿ"** ಪರೀಕ್ಷೆಯನ್ನು ಪಾಸು ಮಾಡಿರಬೇಕು.

**ಮತ್ತು**

ii) ಭಾರತ ದೇಶದ ಕಾನೂನಿನಂತೆ ಸ್ಥಾಪಿಸಲ್ಪಟ್ಟ ಮತ್ತು ವಿಶ್ವವಿದ್ಯಾಲಯ ಧನ ಸಹಾಯ ಆಯೋಗದಿಂದ ಅಂಗೀಕೃತವಾದ ಒಂದು ವಿಶ್ವವಿದ್ಯಾಲಯದಿಂದ **"ಬ್ಯಾಚಲರ್ ಆಫ್ ಎಜುಕೇಷನ್"** (ಬಿ.ಎಡ್) ಪದವಿ ಪಡೆದಿರಬೇಕು.

**ಬ್ಯಾಚುಲರ್ ಪದವಿಯಲ್ಲಿ ಸಂಬಂಧಿಸಿದ ಭಾಷಾ ಶಿಕ್ಷಕರ ಹುದ್ದೆಗೆ ಅನುಗುಣವಾದ ಭಾಷಾ ಐಚ್ಛಿಕ ವಿಷಯವನ್ನು ಅಧ್ಯಯನ ಮಾಡದೆ ಇದ್ದಲ್ಲಿ ಅಂಥಹ ಅಭ್ಯರ್ಥಿಗಳು;**

**a)** ಸಂಬಂದಿಸಿದ ಭಾಷಾ ವಿಷಯದಲ್ಲಿ ಸ್ನಾತಕೋತ್ತರ ಪದವಿಯನ್ನು (Post Graduate Degree) ಹೊಂದಿದ್ದಲ್ಲಿ ಸಂಬಂಧಿಸಿದ ಭಾಷಾ ಶಿಕ್ಷಕರ ಹುದ್ದೆಗೆ ಪರಿಗಣಿಸಲು ಅರ್ಹತೆ ಪಡೆಯುತ್ತಾರೆ.

**b)** **ರೀಜನಲ್ ಇನ್‌ಸ್ಟ್ಯೂಟ್ ಆಫ್ ಇಂಗ್ಲೀಷ್ ಸೌತ್ ಇಂಡಿಯಾ** ಇವರು ನೀಡುವ **ಪೋಸ್ಟ್ ಗ್ರಾಜುಯೇಟ್ ಡಿಪ್ಲೋಮಾ ಸರ್ಟಿಫಿಕೇಟ್ ಇನ್ ಇಂಗ್ಲೀಷ್** ಹೊಂದಿದ್ದಲ್ಲಿ ಅಂತಹ ಅಭ್ಯರ್ಥಿಗಳು ಇಂಗ್ಲೀಷ್ ಭಾಷಾ ಶಿಕ್ಷಕರ ಹುದ್ದೆಗೆ ಪರಿಗಣಿಸಲು ಅರ್ಹತೆ ಪಡೆಯುತ್ತಾರೆ.

**c)** ಹಿಂದಿ ಭಾಷಾ ಶಿಕ್ಷಕರ ಹುದ್ದೆಗೆ ಅಭ್ಯರ್ಥಿಯು, ಭಾರತ ದೇಶದ ಕಾನೂನಿನಂತೆ ಸ್ಥಾಪಿಸಲ್ಪಟ್ಟ ಮತ್ತು ವಿಶ್ವವಿದ್ಯಾಲಯ ಧನ ಸಹಾಯ ಆಯೋಗದಿಂದ ಅಂಗೀಕೃತವಾದ ಒಂದು ವಿಶ್ವವಿದ್ಯಾನಿಲಯದ **ಬ್ಯಾಚುಲರ್ ಪದವೀಧರರಾಗಿದ್ದು,** ಈ ಪದವಿಯಲ್ಲಿ **ಹಿಂದಿ**ಯನ್ನು ಒಂದು ಮೇಜರ್ ಐಚ್ಛಿಕ ವಿಷಯವನ್ನಾಗಿ ಅಧ್ಯಯನ ಮಾಡಿರಬೇಕು.

**ಮತ್ತು**

ಭಾರತ ದೇಶದ ಕಾನೂನಿನಂತೆ ಸ್ಥಾಪಿಸಲ್ಪಟ್ಟ ಮತ್ತು ವಿಶ್ವವಿದ್ಯಾಲಯ ಧನ ಸಹಾಯ ಆಯೋಗದಿಂದ ಅಂಗೀಕೃತವಾದ ಒಂದು ವಿಶ್ವವಿದ್ಯಾನಿಲಯದಿಂದ **ಬ್ಯಾಚುಲರ್ ಆಫ್ ಎಜುಕೇಷನ್ (ಬಿ.ಎಡ್)** ಪದವೀಧರರಾಗಿದ್ದು, ಈ ಪದವಿ ಪರೀಕ್ಷೆಯಲ್ಲಿ **ಹಿಂದಿ**ಯನ್ನು ಬೋಧನಾ ವಿಷಯವನ್ನಾಗಿ ಅಧ್ಯಯನ ಮಾಡಿರಬೇಕು.

**d)** ಇಂಗ್ಲೀಷ್ ಭಾಷಾ ಶಿಕ್ಷಕರ ಹುದ್ದೆಗೆ ಸಂಬಂಧಿಸಿದಂತೆ ಅಭ್ಯರ್ಥಿಗಳು ಬಿ.ಎಡ್. ಪದವಿಯಲ್ಲಿ ಇಂಗ್ಲೀಷ್‌ನ್ನು ಬೋಧನಾ ವಿಷಯವನ್ನಾಗಿ ಅಧ್ಯಯನ ಮಾಡದೆ ಇದ್ದಲ್ಲಿ ಅಂತಹ ಅಭ್ಯರ್ಥಿಗಳು **ರೀಜನಲ್ ಇನ್‌ಸ್ಟ್ಯೂಟ್ ಆಫ್ ಇಂಗ್ಲೀಷ್, ಸೌತ್ ಇಂಡಿಯಾ** ಇವರು ನೀಡುವ **ಪೋಸ್ಟ್ ಗ್ರಾಜುಯೇಟ್ ಡಿಪ್ಲೋಮಾ ಸರ್ಟಿಫಿಕೇಟ್ ಇನ್ ಇಂಗ್ಲೀಷ್** ಹೊಂದಿದ್ದಲ್ಲಿ ನೇಮಕಾತಿಗೆ ಪರಿಗಣಿಸಲು ಅರ್ಹತೆ ಪಡೆಯುತ್ತಾರೆ.

**ವಿಶೇಷ ಸೂಚನೆ:–** ಮೇಲ್ಕಂಡ ಎ, ಬಿ ಮತ್ತು ಡಿ (ಪ್ರಕರಣಗಳಲ್ಲಿ) ಅಭ್ಯರ್ಥಿಯು ಬ್ಯಾಚುಲರ್ ಪದವಿ ಮತ್ತು ಬ್ಯಾಚುಲರ್ ಆಫ್ ಎಜುಕೇಷನ್ ಪದವಿ ಪರೀಕ್ಷೆಗಳಲ್ಲಿ ಪಡೆದಿರುವ ಅಂಕಗಳನ್ನು ಮಾತ್ರ ಮೆರಿಟ್ ಕಂಡುಕೊಳ್ಳಲು ಪರಿಗಣಿಸಲಾಗುತ್ತದೆ. ಆದರೆ ಸ್ನಾತಕೋತ್ತರ ಮತ್ತು ಡಿಪ್ಲೋಮಾ ಪರೀಕ್ಷೆಗಳಲ್ಲಿ ಪಡೆದಿರುವ ಅಂಕಗಳನ್ನು ಮೆರಿಟ್ ಕಂಡು ಹಿಡಿಯಲು ಗಣನೆಗೆ ತೆಗೆದುಕೊಳ್ಳವುದಿಲ್ಲ.

**ಹಿಂದಿ ಭಾಷಾ ಸಹ ಶಿಕ್ಷಕರ ಹುದ್ದೆಗೆ ಸಂಬಂಧಿಸಿದಂತೆ ಅಭ್ಯರ್ಥಿಯು:–**

1. ದಕ್ಷಿಣ ಭಾರತ ಹಿಂದಿ ಪ್ರಚಾರ ಸಭಾ, ಮದ್ರಾಸ್ ಇವರು ನಡೆಸುವ ರಾಷ್ಟ್ರಭಾಷಾ ಪ್ರವೀಣ್ ಮತ್ತು ಶಿಕ್ಷ ಸ್ನಾತಕ್ (ಹಿಂದಿ ಮತ್ತು ಮತ್ತೊಂದು ಭಾಷೆಯನ್ನು ಬೋಧನಾ ವಿಷಯವನ್ನಾಗಿ ಶಿಕ್ಷಾ ಸ್ನಾತಕ್ ಪರೀಕ್ಷೆಯಲ್ಲಿ ಅಧ್ಯಯನ ಮಾಡಿರಬೇಕು) ಮತ್ತು ಪದವಿ ಪೂರ್ವ ಶಿಕ್ಷಣ (ಪಿ.ಯು.ಸಿ) ಕೋರ್ಸ್ ಅನ್ನು ಪಾಸು ಮಾಡಿದ್ದು, ಈ ಕೋರ್ಸಿನಲ್ಲಿ ಕನ್ನಡ ಅಥವಾ ಯಾವುದೇ ಒಂದು ಪ್ರಾದೇಶಿಕ ಭಾಷೆಯನ್ನು ಒಂದು ವಿಷಯವನ್ನಾಗಿ ಅಥವಾ ಮಾಧ್ಯಮದಲ್ಲಿ ಪಾಸು ಮಾಡಿರಬೇಕು.

ಅಥವಾ

2. ರಾಜ್ಯ ಸರ್ಕಾರವು ತತ್ಸಮಾನ ವಿದ್ಯಾರ್ಹತೆ ಎಂದು ಘೋಷಿರುವ ಇತರೆ ಯಾವುದೇ ವಿದ್ಯಾರ್ಹತೆಯನ್ನು ಹೊಂದಿದ್ದಲ್ಲಿ ನೇಮಕಾತಿಗೆ ಪರಿಗಣಿಸಲು ಅರ್ಹತೆ ಪಡೆಯುತ್ತಾರೆ.

ಸರ್ಕಾರದ ಆದೇಶ ಸಂಖ್ಯೆ ಇಡಿ 160 ಪಿಟಿಐ 2003 ದಿನಾಂಕ 24-02-2004ರನ್ವಯ ಈಕೆಳಕಂಡಂತೆ ಪದವಿ ಮತ್ತು ಬಿಇಡಿ ತತ್ಸಮಾನ ವಿದ್ಯಾರ್ಹತೆಯನ್ನು ಹೊಂದಿರಬೇಕು

| **ಪದವಿ ತತ್ಸಮಾನ ಪರೀಕ್ಷೆ ಹೆಸರು** | **ಸಂಸ್ಥೆಯ ಹೆಸರು** |
|---|---|
| 1. ಹಿಂದಿ ರತ್ನ | ಮೈಸೂರು ಹಿಂದಿ ಪ್ರಚಾರ ಪರಿಷತ್,ಬೆಂಗಳೂರು |
| 2. ರಾಜ ಭಾಷಾ ವಿದ್ವಾನ್ | ಕರ್ನಾಟಕ ಹಿಂದಿ ಪ್ರಚಾರ ಸಮಿತಿ,ಬೆಂಗಳೂರು |
| 3. ಹಿಂದಿ ಭಾಷಾ ಪ್ರವೀಣ್ | ಕರ್ನಾಟಕ ಮಹಿಳಾ ಹಿಂದಿ ಸೇವಾ ಸಮಿತಿ,ಬೆಂಗಳೂರು |
| 4. ರಾಷ್ಟ್ರಭಾಷಾ ಪ್ರವೀಣ್ | ದಕ್ಷಿಣ ಭಾರತ ಹಿಂದಿ ಪ್ರಚಾರ ಸಭಾ,ಮದ್ರಾಸ್ |

ಸರ್ಕಾರದ ಆದೇಶ ಸಂಖ್ಯೆ ಇಡಿ 125 ಪಿಟಿಐ 2003 ದಿನಾಂಕ 16-08-2003 ರನ್ವಯ ಕೆಳಕಂಡ ವಿದ್ಯಾರ್ಹತೆಗಳನ್ನು ಬಿಎಡ್ ಪರೀಕ್ಷೆಗೆ ತತ್ಸಮಾನವೆಂದು ಈ ಕೆಳಕಂಡ ಷರತ್ತಿಗೆ ಒಳಪಟ್ಟು ಘೋಷಿಸಲಾಗಿದೆ.

| **ಬಿಎಡ್ ತತ್ಸಮಾನ ಪರೀಕ್ಷೆ ಹೆಸರು** | **ಸಂಸ್ಥೆಯ ಹೆಸರು** |
|---|---|
| 1. ಹಿಂದಿ ಶಿಕ್ಷಕ್ ಪರೀಕ್ಷೆ | ಅ. ಕರ್ನಾಟಕ ಮಹಿಳಾ ಹಿಂದಿ ಸೇವಾ ಸಮಿತಿ,ಬೆಂಗಳೂರು |
| | ಆ. ಕರ್ನಾಟಕ ಹಿಂದಿ ಪ್ರಚಾರ ಸಮಿತಿ,ಬೆಂಗಳೂರು |
| | ಇ. ಮೈಸೂರು ಹಿಂದಿ ಪ್ರಚಾರ ಪರಿಷತ್,ಬೆಂಗಳೂರು |
| | ಈ. ಮಾನಸ ಎಜುಕೇಷನ್ ಸೊಸೈಟಿ, ತುಮಕೂರು |
| | ಉ. ಕರ್ನಾಟಕ ಲೇಬರ್ ಎಜುಕೇಷನ್ ಸೊಸೈಟಿ,ಬೀದರ್ |
| 2. ಹಿಂದಿ ಶಿಕ್ಷಣ ಪಾರಂಗತ್ ಪರೀಕ್ಷೆ | ಅ. ಸರ್ಕಾರಿ ಹಿಂದಿ ಶಿಕ್ಷಕರ ತರಬೇತಿ ಕಾಲೇಜು, ಮೈಸೂರು. |

I) ಹಿಂದಿ ಶಿಕ್ಷಕ ಮತ್ತು ಹಿಂದಿ ಶಿಕ್ಷಣ ಪರಾಂಗತ ವಿದ್ಯಾರ್ಹತೆ ಹೊಂದಿರುವ ಅಭ್ಯರ್ಥಿಗಳು ಸದರಿ ಕೋರ್ಸನ್ನು ಸೇರುವ ಮುಂಚೆ ಪಿ.ಯು.ಸಿ.ಯನ್ನು ಪಾಸು ಮಾಡಿದ್ದು, ಸದರಿ ಪಿ.ಯು ಕೋರ್ಸಿನಲ್ಲಿ ಕನ್ನಡ ಅಥವಾ ಯಾವುದಾದರೂ ಒಂದು ಪ್ರಾಂತೀಯ ಭಾಷೆಯನ್ನು ಒಂದು ವಿಷಯವನ್ನಾಗಿ ಅಥವಾ ಮಾಧ್ಯಮವನ್ನಾಗಿ ವ್ಯಾಸಂಗ ಮಾಡಿರಬೇಕು.

II) ಹಿಂದಿ ಮತ್ತು ಮತ್ತೊಂದು ಭಾಷೆಯನ್ನು ಬೋಧನಾ ವಿಧಾನವನ್ನಾಗಿ ಅಧ್ಯಯನ ಮಾಡಿರಬೇಕು.

**(ಉ) ದೈಹಿಕ ಶಿಕ್ಷಣ ಶಿಕ್ಷಕ (ಗ್ರೇಡ್-1) ಹುದ್ದೆಗಳಿಗೆ (Physical Education Teacher Grade-I):-**

i) ಭಾರತ ದೇಶದ ಕಾನೂನಿನಂತೆ ಸ್ಥಾಪಿಸಲ್ಪಟ್ಟ ಮತ್ತು ವಿಶ್ವವಿದ್ಯಾಲಯ ಧನ ಸಹಾಯ ಆಯೋಗದಿಂದ ಅಂಗೀಕೃತವಾದ ಒಂದು ವಿಶ್ವವಿದ್ಯಾಲಯದ **"ಬ್ಯಾಚಲರ್ ಪದವಿ"** ಯನ್ನು ಪಡೆದಿರಬೇಕು.

**ಮತ್ತು**

ii) ಭಾರತ ದೇಶದ ಕಾನೂನಿನಂತೆ ಸ್ಥಾಪಿಸಲ್ಪಟ್ಟ ಮತ್ತು ವಿಶ್ವವಿದ್ಯಾಲಯ ಧನ ಸಹಾಯ ಆಯೋಗದಿಂದ ಅಂಗೀಕೃತವಾದ ಒಂದು ವಿಶ್ವವಿದ್ಯಾಲಯದ **"ಬ್ಯಾಚಲರ್ ಆಫ್ ಫಿಸಿಕಲ್ ಎಜುಕೇಷನ್"** ಪದವಿಯನ್ನು ಪಡೆದಿರಬೇಕು. ಅಥವಾ **ಗೌರ್ನಮೆಂಟ್ ಕಾಲೇಜ್ ಆಫ್ ಫಿಸಿಕಲ್ ಎಜುಕೇಷನ್** ಇಲ್ಲಿಂದ **ಡಿಪ್ಲೋಮಾ ಇನ್ ಫಿಸಿಕಲ್ ಎಜುಕೇಷನ್** ಹೊಂದಿರಬೇಕು. ಅಥವಾ ರಾಜ್ಯ ಸರಕಾರವು ತತ್ಸಮಾನ ಪರೀಕ್ಷೆ ಎಂದು ಪರಿಗಣಿಸಿರುವ ವಿದ್ಯಾರ್ಹತೆಯನ್ನು ಹೊಂದಿರಬೇಕು.

**9) ವೇತನ ಶ್ರೇಣಿ:- ಪ್ರೌಢ ಶಾಲಾ ಸಹಾಯಕ ಶಿಕ್ಷಕರು ಗ್ರೇಡ್-2 ಹಾಗೂ ದೈಹಿಕ ಶಿಕ್ಷಣ ಶಿಕ್ಷಕ (ಗ್ರೇಡ್-1) ವೃಂದದ ಹುದ್ದೆಗಳಿಗೆ :**

ರೂ.8825 -225-9500-250-10500-300-12300-350-14400-400-16000.

**10) ವಯೋಮಿತಿ**

**ಅಭ್ಯರ್ಥಿಗಳು ಈ** ನೇಮಕಾತಿ ಅಧಿಸೂಚನೆ **ದಿನಾಂಕದಂದು ಮುಂದೆ ತಿಳಿಸಿರುವ ಕನಿಷ್ಠ ಮತ್ತು ಗರಿಷ್ಠ ವಯೋಮಿತಿಯೊಳಗಿರಬೇಕು.**

**ಕನಿಷ್ಠ :** 20 ವರ್ಷಗಳು ತುಂಬಿರಬೇಕು.

**ಗರಿಷ್ಠ :**

| | |
|---|---|
| ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡ ಅಥವಾ ಹಿಂದುಳಿದ ಪ್ರವರ್ಗ-1ಕ್ಕೆ **ಸೇರಿದ ಅಭ್ಯರ್ಥಿಗಳು** | 45 ವರ್ಷಗಳನ್ನು ತಲುಪಿರಬಾರದು. |
| ಪ್ರವರ್ಗ 2(ಎ), 2(ಬಿ), 3(ಎ) ಮತ್ತು 3(ಬಿ) **ಗಳಿಗೆ ಸೇರಿದ ಅಭ್ಯರ್ಥಿಗಳು** | 43 ವರ್ಷಗಳನ್ನು ತಲುಪಿರಬಾರದು. |
| ಇತರೆ ಅಭ್ಯರ್ಥಿಗಳು [ಸಾಮಾನ್ಯ ಅಭ್ಯರ್ಥಿಗಳು] | 40 ವರ್ಷಗಳನ್ನು ತಲುಪಿರಬಾರದು. |

**ಗರಿಷ್ಠ ವಯೋಮಿತಿಯ ಸಡಿಲಿಕೆ:**

**i)** ಸರ್ಕಾರಿ ಪ್ರೌಢಶಾಲೆಗಳಲ್ಲಿ ಕಾರ್ಯನಿರ್ವಹಿಸಿದ /ನಿರ್ವಹಿಸುತ್ತಿರುವ "ಅರೆಕಾಲಿಕ" ಮತ್ತು ಗೌರವ ಶಿಕ್ಷಕರುಗಳಿಗೆ ಗರಿಷ್ಠ ವಯೋಮಿತಿಯನ್ನು ಅವರುಗಳು "ಅರೆಕಾಲಿಕ/ಗೌರವ ಶಿಕ್ಷಕರ ಸೇವೆ ಸಲ್ಲಿಸಿದ ವರ್ಷಗಳಷ್ಟು ( ಗರಿಷ್ಠ 10 ವರ್ಷಗಳ ಮಿತಿಗೆ ಒಳಪಟ್ಟು) ಸಡಿಲಿಕೆ ಇರುತ್ತದೆ.

**ii)** ಮಾಜಿ ಸೈನಿಕ ಅಭ್ಯರ್ಥಿಗಳು 1977ರ ಕರ್ನಾಟಕ ರಾಜ್ಯ ಸರ್ಕಾರಿ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳ ಪ್ರಕಾರ ವಯೋಮಿತಿ ಸಡಿಲಿಕೆಗೆ ಅರ್ಹರಿರುತ್ತಾರೆ.

**11) ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆ:–** ಆಯ್ಕೆ ಬಯಸುವ ಪ್ರತಿ ಅಭ್ಯರ್ಥಿಯು ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಗೆ ಕಡ್ಡಾಯವಾಗಿ ಹಾಜರಾಗಬೇಕು.

**12) ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆ ಬಗ್ಗೆ ವಿವರಗಳು:–**

**i) ಪರೀಕ್ಷೆ ಹೆಸರು:** ಸರಕಾರಿ ಪ್ರೌಢ ಶಾಲಾ ಸಹಾಯಕ ಶಿಕ್ಷಕ (ಗ್ರೇಡ್–2) ವೃಂದದ ಮತ್ತು ದೈಹಿಕ ಶಿಕ್ಷಣ ಶಿಕ್ಷಕ (ಗ್ರೇಡ್–1) ವೃಂದದ ಶಿಕ್ಷಕರ ಹುದ್ದೆಗಳಿಗೆ ನೇರ ನೇಮಕಾತಿಗಾಗಿ ನಡೆಸುವ ವಿಭಾಗೀಯ ಮಟ್ಟದ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆ.

**ii) ಪರೀಕ್ಷೆ ನಡೆಸುವ ಪ್ರಾಧಿಕಾರಿ:** ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯನ್ನು ಮೈಸೂರು ವಿಭಾಗೀಯ ಕಾರ್ಯದರ್ಶಿಗಳು, ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ ಹಾಗೂ ಪದನಿಮಿತ್ತ ಸಹನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಮೈಸೂರು ವಿಭಾಗ, ಮೈಸೂರು ಇವರು ವಿಭಾಗ ಮಟ್ಟದಲ್ಲಿ ನಡೆಸುವರು. ವಿಭಾಗದ ವ್ಯಾಪ್ತಿಯಲ್ಲಿ ಬರುವ ಶೈಕ್ಷಣಿಕ ಜಿಲ್ಲೆಗಳು (ಮೈಸೂರು ,ಚಾಮರಾಜನಗರ, ಮಂಡ್ಯ, ಹಾಸನ, ಕೊಡಗು, ಚಿಕ್ಕಮಗಳೂರು, ದಕ್ಷಿಣಕನ್ನಡ ಮತ್ತು ಉಡುಪಿ)ಪರೀಕ್ಷಾ ಕೇಂದ್ರಗಳಾಗಿರುತ್ತವೆ.

**iii) ಪರೀಕ್ಷೆಯ ದಿನಾಂಕ: ಶನಿವಾರ 08–08–2009 ಮತ್ತು ಭಾನುವಾರ 09–08–2009**

**iv) ಪರೀಕ್ಷೆಯ ಅವಧಿ ಮತ್ತು ಸಮಯ :**

ಶನಿವಾರ ದಿನಾಂಕ: 08–08–2009 : ಪ್ರಥಮ ಪತ್ರಿಕೆ ಪೂರ್ವಾಹ್ನ 10–30 ರಿಂದ 12–30 ರವರೆಗೆ.

ದ್ವಿತೀಯ ಪತ್ರಿಕೆ ಅಪರಾಹ್ನ 2–30 ರಿಂದ 4–30 ರವರೆಗೆ.

ಭಾನುವಾರ ದಿನಾಂಕ; :09–08–2009 : ಪೂರ್ವಾಹ್ನ 9–00 ರಿಂದ 11–00 ರವರೆಗೆ

ಅಪರಾಹ್ನ 12–00 ರಿಂದ 2–00 ರವರೆಗೆ

ಅಪರಾಹ್ನ 3–00 ರಿಂದ 5–00 ರವರೆಗೆ.

**v) ಪರೀಕ್ಷಾ ಮಾಧ್ಯಮ :** ಕನ್ನಡ ಮತ್ತು ಇಂಗ್ಲೀಷ್.

**vi) ಪ್ರಶ್ನೆ ಪತ್ರಿಕೆ, ಅಂಕಗಳು ಮತ್ತು ವಿಷಯ :** ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆ ಕೆಳಕಂಡ ವಿಷಯಗಳಲ್ಲಿ ಪ್ರಶ್ನೆ ಪತ್ರಿಕಗಳನ್ನು ಹೊಂದಿರುತ್ತದೆ. ಪ್ರತಿ ಪ್ರಶ್ನೆ ಪತ್ರಿಕೆಯು 100 ಅಂಕಗಳನ್ನು ಒಳಗೊಂಡಿದು, ಭಾಷಾ ವಿಷಯಗಳನ್ನು ಹೊರತುಪಡಿಸಿ ಉಳಿದ ಎಲ್ಲಾ ಪ್ರಶ್ನೆ ಪತ್ರಿಕೆಗಳು ಕನ್ನಡ ಮತ್ತು ಆಂಗ್ಲ ಮಾಧ್ಯಮದಲ್ಲಿ ಇರುತ್ತದೆ. ಎಲ್ಲಾ ಅಭ್ಯರ್ಥಿಗಳು ಸಾಮಾನ್ಯ ಪತ್ರಿಕೆಯು ಸೇರಿದಂತೆ ಅವರು ಆಯ್ಕೆ ಮಾಡಿಕೊಂಡಿರುವ ವಿಷಯಗಳಿಗೆ ಅನುಗುಣವಾಗಿ ಕಡ್ಡಾಯವಾಗಿ ಪರೀಕ್ಷೆಗಳಲ್ಲಿ ಹಾಜರಾಗಿರಬೇಕಾಗಿರುತ್ತದೆ.

| ಕ್ರ. ಸಂ. | ಹುದ್ದೆಯ ಹೆಸರು | ವಿಷಯ | ಅಂಕಗಳು |
|---|---|---|---|
| 1 | ಪ್ರೌಢ ಶಾಲಾ ಸಹಾಯಕ ಶಿಕ್ಷಕ ಗ್ರೇಡ್–2 (ಫಿಸಿಕಲ್ ಸೈನ್ಸ್, ಬಯಾಲಜಿಕಲ್ ಸೈನ್ಸ್, ಕಲಾ ಹಾಗೂ ಎಲ್ಲಾ ಭಾಷಾ ಶಿಕ್ಷಕರ ಹುದ್ದೆಗಳು)/ ದೈಹಿಕ ಶಿಕ್ಷಣ ಶಿಕ್ಷಕ ಗ್ರೇಡ್–1 | **ಸಾಮಾನ್ಯ ಪ್ರಶ್ನೆ ಪತ್ರಿಕೆ**<br>ಸಾಮಾನ್ಯ ಜ್ಞಾನ<br>ಶೈಕ್ಷಣಿಕ ಮನೋವಿಜ್ಞಾನ<br>ಮೆಂಟಲ್ ಎಬಿಲಿಟಿ | 100 |

**ದ್ವಿತೀಯ / ಐಚ್ಛಿಕ ಪತ್ರಿಕೆ :**

| | | | |
|---|---|---|---|
| 2 | ಕಲಾ ಶಿಕ್ಷಕರು | ಇತಿಹಾಸ, ಭೂಗೋಳ ಶಾಸ್ತ್ರ, ಅರ್ಥಶಾಸ್ತ್ರ ಪೌರನೀತಿ | 100 |
| 3 | ಭಾಷಾ ಶಿಕ್ಷಕರ ಹುದ್ದೆಗಳಿಗೆ | ಕನ್ನಡ / ಇಂಗ್ಲೀಷ್ / ಉರ್ದು / ಹಿಂದಿ / ಮರಾಠಿ / ತೆಲುಗು / ತಮಿಳು ಮತ್ತು ಸಂಸ್ಕೃತ | 100 |
| 4 | ಫಿಸಿಕಲ್ ಸೈನ್ಸ್ ( ಭೌತ ವಿಜ್ಞಾನ ) | ಭೌತ ಶಾಸ್ತ್ರ ಮತ್ತು ಗಣಿತ ಶಾಸ್ತ್ರ | 100 |
| 5 | ಬಯಾಲಾಜಿಕಲ್ ಸೈನ್ಸ್ (ಜೀವ ವಿಜ್ಞಾನ ) | ರಸಾಯನ ಶಾಸ್ತ್ರ, ಪ್ರಾಣಿ ಶಾಸ್ತ್ರ, ಸಸ್ಯಶಾಸ್ತ್ರ | 100 |
| 6 | ದೈಹಿಕ ಶಿಕ್ಷಣ ಗ್ರೇಡ್–1 ಶಿಕ್ಷಕರು | ದೈಹಿಕ ಶಿಕ್ಷಣದ ಇತಿಹಾಸ, ತತ್ವಗಳು ಮತ್ತು ತತ್ವಜ್ಞಾನ, ದೈಹಿಕ ಶಿಕ್ಷಣದ ಆಡಳಿತ ಮತ್ತು ಸಂಘಟನೆ, ದೈಹಿಕ ಶಿಕ್ಷಣದ ಮನೋಜ್ಞಾನ ಸಾಮಾಗ್ರಿ ಮತ್ತು ಬೋಧನಾ ವಿಧಾನ, ಅಂಗರಚನಾಶಾಸ್ತ್ರ, ಅಂಗಕಾರ್ಯಶಾಸ್ತ್ರ ಮತ್ತು ಜೀವಶಾಸ್ತ್ರ, ಆರೋಗ್ಯ ಶಿಕ್ಷಣ, ಸುರಕ್ಷಣಾ ಶಿಕ್ಷಣ ಮತ್ತು ಅಂಗೆಲಸ ವ್ಯಾಯಮ, ಕ್ರೀಡಾಧಿಕಾರತ್ವ ಮತ್ತು ಕ್ರೀಡಾ ತರಬೇತಿ ತತ್ವಗಳು | 100 |

**ಪ್ರಶ್ನೆಗಳ ವ್ಯಾಪ್ತಿ ಹಾಗೂ ಸ್ವರೂಪ:**

1) ಪ್ರಶ್ನೆಗಳು ನಿಗದಿಪಡಿಸಲಾಗಿರುವ ಪಠ್ಯವಸ್ತುವಿನ ವ್ಯಾಪ್ತಿಯಲ್ಲಿರುತ್ತದೆ.
2) ಪ್ರಶ್ನೆಗಳು ವಸ್ತುನಿಷ್ಠವಾಗಿದ್ದು ಪ್ರತಿ ಪ್ರಶ್ನೆಗೆ ಒಂದು ಅಂಕ ನಿಗದಿಪಡಿಸಿದೆ.
3) ಪ್ರತಿ ಪ್ರಶ್ನೆ 4 ಉತ್ತರಗಳನ್ನು ಹೊಂದಿದ್ದು ಇವುಗಳಲ್ಲಿ ಒಂದು ಸರಿ ಉತ್ತರವಾಗಿರುತ್ತದೆ.
4) ಉತ್ತರಗಳನ್ನು " ಓ.ಎಂ.ಆರ್." ಶೀಟಿನಲ್ಲಿ ಗುರ್ತಿಸುವುದು.

ಪ್ರಶ್ನೆ ಪತ್ರಿಕೆಗಳು ಕನ್ನಡ ಮತ್ತು ಆಂಗ್ಲ ಭಾಷೆಯಲ್ಲಿರುತ್ತದೆ. ಭಾಷಾ ವಿಷಯಕ್ಕೆ ಸಂಬಂಧಿಸಿದಂತೆ ಆಯಾ ಭಾಷೆಯಲ್ಲಿರುತ್ತದೆ.

**13) ಆಯ್ಕೆ ವಿಧಾನ:**

ಅಭ್ಯರ್ಥಿಗಳನ್ನು **"ದಿ ಕರ್ನಾಟಕ ಎಜುಕೇಷನ್ ಡಿಪಾರ್ಟ್‌ಮೆಂಟ್ ಸರ್ವೀಸಸ್ (ಡಿಪಾರ್ಟ್‌ಮೆಂಟ್ ಆಫ್ ಪಬ್ಲಿಕ್ ಇನ್‌ಸ್ಟ್ರಕ್ಷನ್) (ರಿಕ್ರೂಟ್‌ಮೆಂಟ್) (ಅಮೆಂಡ್‌ಮೆಂಟ್) ರೂಲ್ಸ್ 2002"** ನಿಯಮಗಳ ಅನ್ವಯ ಮೆರಿಟ್ ಮತ್ತು ಕರ್ನಾಟಕ ಸರ್ಕಾರದ ಪ್ರಚಲಿತ ಮೀಸಲಾತಿ ನಿಯಮಗಳ ಆಧಾರದ ಮೇಲೆ ಆಯ್ಕೆ ಮಾಡಲಾಗುವುದು.

**ಅರ್ಹತೆ ನಿರ್ಧರಿಸುವುದು:–**

**ಅ) ಪ್ರೌಢ ಶಾಲಾ ಸಹ ಶಿಕ್ಷಕ ಗ್ರೇಡ್–2 ವೃಂದದ (ಕಲಾ, ಭೌತ ವಿಜ್ಞಾನ, ಜೀವ ವಿಜ್ಞಾನ ಮತ್ತು ಭಾಷೆಗಳು) ಶಿಕ್ಷಕರ ವಿವಿಧ ಮಾಧ್ಯಮದ ಹುದ್ದೆಗಳಿಗೆ:–**

ಅಭ್ಯರ್ಥಿಯು ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಪಡೆದ ಒಟ್ಟು ಅಂಕಗಳ ಶೇಕಡ 70%, ಮತ್ತು ಬಿ.ಎ/ಬಿ.ಎಸ್ಸಿ. ಪದವಿ ಪರೀಕ್ಷೆಯ ಒಟ್ಟು ಅಂಕಗಳ ಶೇಕಡ 20%, ಹಾಗೂ ಬಿ.ಎಡ್. ಪದವಿ ಪರೀಕ್ಷೆಯಲ್ಲಿ ಪಡೆದಿರುವ ಒಟ್ಟು ಅಂಕಗಳ ಶೇಕಡ 10%, ಈ ಮೂರು ಒಟ್ಟು ಅಂಕಗಳ ಮೇಲೆ ಮೆರಿಟ್ ಪಟ್ಟಿ ತಯಾರಿಸಿ, ಪ್ರಚಲಿತ ಮೀಸಲಾತಿ ನಿಯಮಗಳ ಅನ್ವಯ ಆಯ್ಕೆ ಮಾಡಲಾಗುವುದು.

ಮೇಲ್ಕಂಡ ಮೆರಿಟ್ ಲಿಸ್ಟ್ ತಯಾರಿಸುವಾಗ ಅಭ್ಯರ್ಥಿಯು ಸರ್ಕಾರಿ ಪ್ರೌಢ ಶಾಲೆಗಳಲ್ಲಿ ಸಂಬಂಧಿಸಿದ ವಿಷಯದಲ್ಲಿ "ಅರೆಕಾಲಿಕ ಅಥವಾ ಗೌರವ" ಶಿಕ್ಷಕರಾಗಿ, ಅಥವಾ ಭಾರತೀಯ ಜನಗಣತಿ ಸಂಸ್ಥೆಯಲ್ಲಿ ಗುತ್ತಿಗೆ ಆಧಾರದ ಮೇಲೆ ಸಕ್ಷಮ ಪ್ರಾಧಿಕಾರದಿಂದ ನೇಮಕಗೊಂಡು ಹಾಲಿ ಸೇವೆ ಸಲ್ಲಿಸುತ್ತಿದ್ದಲ್ಲಿ / ಸೇವೆ ಸಲ್ಲಿಸಿದ್ದಲ್ಲಿ ಹಾಗೆ ಸೇವೆ ಸಲ್ಲಿಸಿದ ಪೂರ್ಣಗೊಂಡ ಪ್ರತಿ ಒಂದು ವರ್ಷದ ಸೇವೆಗೆ ಶೇಕಡ 2% ರಷ್ಟು ಕೃಪಾಂಕಗಳನ್ನು ನೇಮಕಾತಿ ನಿಯಮಗಳ ಪ್ರಕಾರ ಅರ್ಹತೆ ಇದ್ದಲ್ಲಿ ಮಾತ್ರ ಮೇಲಿನ ಕಂಡಿಕೆಯಲ್ಲಿ ವಿವರಿಸಿರುವ ಒಟ್ಟು ಅಂಕಗಳಿಗೆ ಸೇರಿಸಲಾಗುವುದು.

**ವಿವರಣೆ:–** ಅ) ಮೊದಲಿಗೆ, ಬಿ.ಎ/ಬಿ.ಎಸ್ಸಿ. ಪದವಿ ಪರೀಕ್ಷೆಯ ಎಲ್ಲಾ ವರ್ಷಗಳಲ್ಲಿ, ಎಲ್ಲಾ ವಿಷಯಗಳಲ್ಲಿ ಪಡೆದಿರುವ ಒಟ್ಟು ಅಂಕಗಳನ್ನು ಶೇಕಡ 20%ಕ್ಕೆ ಲೆಕ್ಕ ಹಾಕಲಾಗುವುದು.

ಆ) ಬಿ.ಎಡ್. ಪದವಿ ಪರೀಕ್ಷೆಯಲ್ಲಿ ಪಡೆದ ಒಟ್ಟು ಅಂಕಗಳನ್ನು ಶೇಕಡ 10%ಕ್ಕೆ ಲೆಕ್ಕ ಹಾಕಲಾಗುವುದು.

ಇ) ನಂತರ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಪಡೆದ ಒಟ್ಟು ಅಂಕಗಳನ್ನು ಶೇಕಡ 70%ಕ್ಕೆ ಲೆಕ್ಕ ಹಾಕಲಾಗುವುದು.

ಈ) ಬಿ.ಎ/ಬಿ.ಎಸ್ಸಿ/ಬ್ಯಾಚುಲರ್ ಪದವಿ/ತತ್ಸಮಾನ ಪರೀಕ್ಷೆಯ ಶೇಕಡ 20%, ಬಿ.ಎಡ್ ಪದವಿಯ/ಬಿ.ಪಿ.ಎಡ್/ ತತ್ಸಮಾನ ಪರೀಕ್ಷೆಯ ಶೇಕಡ 10%, ಮತ್ತು ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯ ಶೇಕಡ 70% ಅಂಕಗಳನ್ನು ಸೇರಿಸಿ ಒಟ್ಟು ಶೇಕಡ 100 ಅಂಕಕ್ಕೆ ಪಡೆದ ಅಂಕಗಳನ್ನು ಕಂಡುಕೊಳ್ಳಲಾಗುವುದು. ಮತ್ತು ಮೇರಿಟಿಗೆ ಪರಿಗಣಿಸಲಾಗುವುದು.

ಉ) ಮೇಲಿನ ಒಟ್ಟು ಶೇಕಡ ಅಂಕಗಳಿಗೆ (ಪ್ಯಾರ "ಈ"), ಅರೆಕಾಲಿಕ ಅಥವಾ ಗೌರವ ಶಿಕ್ಷಕ/ಭಾರತೀಯ ಜನಗಣತಿಯಲ್ಲಿ ಗುತ್ತಿಗೆ ಆಧಾರದ ಮೇಲೆ ಕಾರ್ಯನಿರ್ವಹಿಸಿದಂತಹ ಅಭ್ಯರ್ಥಿಗಳಿಗೆ ಪ್ರಸ್ತುತ ನೇಮಕಾತಿ ನಿಯಮಗಳ ಪ್ರಕಾರ ಅರ್ಹತೆ ಇದ್ದಲ್ಲಿ ಮಾತ್ರ ಪ್ರತಿ ಪೂರ್ಣಗೊಂಡ ಒಂದು ವರ್ಷದ ಸೇವೆಗೆ ಶೇಕಡ 2% ರಂತೆ ಕೃಪಾಂಕಗಳನ್ನು ಸೇರಿಸಲಾಗುವುದು.

(ಈ+ಉ) ಒಟ್ಟು ಅಂಕಗಳನ್ನು ಪ್ರತಿ ಅಭ್ಯರ್ಥಿಯ ಮೆರಿಟ್ (ಅರ್ಹತಾ) ಅಂಕಗಳೆಂದು ನಿರ್ಧರಿಸಲಾಗುವುದು.

**ಉದಾಹರಣೆ:–**

"X" ಎಂಬ ಅಭ್ಯರ್ಥಿಯು ಅರ್ಹತಾ ಪದವಿ (ಬಿ.ಎ/ಬಿ.ಎಸ್ಸಿ ಮತ್ತು ಬಿ.ಎಡ್/ಬಿ.ಪಿ.ಎಡ್ ಪರೀಕ್ಷೆಗಳಲ್ಲಿ ಹಾಗೂ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ಪಡೆದಿರುವ ಅಂಕಗಳು ಹಾಗೂ ಅರೆಕಾಲಿಕ, ಗೌರವ ಶಿಕ್ಷಕರಾಗಿ, ಜನಗಣತಿ ಸಂಸ್ಥೆಯಲ್ಲಿ ಸೇವೆ ಸಲ್ಲಿಸಿದ್ದ ಬಾಬ್ತು ಪಡೆದು ಕೊಂಡಿರುವ ಕೃಪಾಂಕಗಳ ವಿವರಗಳು ಈ ರೀತಿ ಇದೆ.

| ಕ್ರ. ಸಂ. | ಪರೀಕ್ಷೆಯ ಹೆಸರು | ಗರಿಷ್ಠ ಅಂಕಗಳು | ಗಳಿಸಿದ ಅಂಕ |
|---|---|---|---|
| 1 | ಬಿ.ಎಸ್ಸಿ. ಪದವಿ | | |
| | ಅ) ಪ್ರಥಮ ವರ್ಷ | 500 | 300 |
| | ಆ) ದ್ವಿತೀಯ ವರ್ಷ | 500 | 360 |
| | ಇ) ತೃತೀಯ ವರ್ಷ | 900 | 540 |
| | **ಒಟ್ಟು** | **1900** | **1200** |
| 2 | ಬಿ.ಎಡ್. ಪದವಿ | 1000 | 600 |
| 3 | ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಗಳಿಸಿದ ಅಂಕಗಳು | 200 | 140 |

| | | | |
|---|---|---|---|
| 4 | "X"ಅಭ್ಯರ್ಥಿಯು ಮೂರು ವರ್ಷಗಳ ಕಾಲ ಅರೆಕಾಲಿಕ ಶಿಕ್ಷಕರಾಗಿ ಸರ್ಕಾರಿ ಪ್ರೌಢ ಶಾಲೆಯಲ್ಲಿ ಸೇವೆ ಸಲ್ಲಿಸಿರುತ್ತಾರೆ | 3 X 2 | = ಶೇಕಡಾ 6 ಕೃಪಾಂಕಗಳು |

| | |
|---|---|
| ಅ) ಬಿ.ಎಸ್ಸಿ.ಪದವಿಯಲ್ಲಿ X ಅಭ್ಯರ್ಥಿ ಪಡೆದ ಶೇಕಡ 20 ಅಂಕಗಳು | = ಗಳಿಸಿದ ಒಟ್ಟು ಅಂಕಗಳು X 20 / ಒಟ್ಟು ಗರಿಷ್ಠ ಅಂಕಗಳು<br>= 1200 X 20 / 1900<br>= 12.63157 |
| ಆ) ಬಿ.ಎಡ್. ಪದವಿ ಪರೀಕ್ಷೆಯಲ್ಲಿ ಶೇಕಡ 10 ಅಂಕಗಳು | = ಗಳಿಸಿದ ಒಟ್ಟು ಅಂಕಗಳು X 10 / ಒಟ್ಟು ಗರಿಷ್ಠ ಅಂಕಗಳು<br>= 600 X 10 / 1000<br>= 6.00000 |
| ಇ) ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಶೇಕಡ 70 ಅಂಕಗಳು | = ಗಳಿಸಿದ ಒಟ್ಟು ಅಂಕಗಳು X 70 / ಒಟ್ಟು ಗರಿಷ್ಠ ಅಂಕಗಳು<br>= 140 X 70 / 200<br>= 9800 / 200<br>= 49.00000 |
| ಈ) X ಅಭ್ಯರ್ಥಿಯು ಬಿ.ಎಸ್ಸಿ., ಬಿ.ಎಡ್. ಹಾಗೂ ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ಪಡೆದ ಒಟ್ಟು ಅಂಕಗಳು (ಅ+ಆ+ಇ) | : ಬಿ.ಎಸ್ಸಿ. : 12.63157<br>: ಬಿ.ಎಡ್ : 06.0000<br>ಸಂ.ಸ್ಪ.ಪ. : 49.0000<br>ಒಟ್ಟು : 67.63157 |
| ಉ) X ಅಭ್ಯರ್ಥಿಯು ಸಲ್ಲಿಸಿರುವ ಮೂರು ವರ್ಷ ಅರೆಕಾಲಿಕ ಶಿಕ್ಷಕರ ಸೇವೆಗೆ ಪ್ರತಿ ಪೂರ್ಣಗೊಳಿಸಿದ ವರ್ಷಕ್ಕೆ ಶೇಕಡ 2ರಂತೆ ಕೃಪಾಂಕಗಳು | = 3 X 2 = ಶೇಕಡಾ 6 ಕೃಪಾಂಕಗಳು |
| ಊ) X ಎಂಬ ಅಭ್ಯರ್ಥಿಯ ಅಂತಿಮ ಮೆರಿಟ್ ಅಂಕಗಳು (ಈ+ಉ) | = 67.63157<br>+<br>ಕೃಪಾಂಕಗಳು = 06.0000<br>ಒಟ್ಟು (ಮೆರಿಟ್) = 73.63157 |

**14) ಮೀಸಲಾತಿ ಅವಕಾಶಗಳು:–**

ಅ) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 08 ಸಹಿಮ 95 ದಿನಾಂಕ 20–06–1995 ಮತ್ತು ನಂತರ ಹಾಲಿ ಜಾರಿಯಲ್ಲಿರುವ ಮೀಸಲಾತಿ ನಿಯಮಗಳ ಪ್ರಕಾರ ಲಭ್ಯವಿರುವ ರಿಕ್ತ ಸ್ಥಾನಗಳನ್ನು ಈ ಕೆಳಕಂಡ ಪ್ರಮಾಣದಲ್ಲಿ ನಿಯಮಾನುಸಾರ ಮೀಸಲಿರಿಸಲಾಗಿದೆ.

| | |
|---|---|
| ಸಾಮಾನ್ಯ ಅರ್ಹತೆ | ಶೇ. 50 |
| ಪರಿಶಿಷ್ಟ ಪಂಗಡ | ಶೇ. 03 |
| ಪರಿಶಿಷ್ಟ ಜಾತಿ | ಶೇ. 15 |
| ಪ್ರವರ್ಗ–1 | ಶೇ. 04 |
| ಪ್ರವರ್ಗ–2ಎ | ಶೇ. 15 |
| ಪ್ರವರ್ಗ–2ಬಿ | ಶೇ. 04 |
| ಪ್ರವರ್ಗ–3ಎ | ಶೇ. 04 |
| ಪ್ರವರ್ಗ–3ಬಿ | ಶೇ. 05 |
| ಒಟ್ಟು | 100 |

ಪ್ರವರ್ಗ–1, 2ಎ, 2ಬಿ, 3ಎ, ಹಾಗೂ 3ಬಿ ಈ ಪ್ರವರ್ಗಗಳಿಗೆ ಮೀಸಲಿರಿಸಿದ ರಿಕ್ತ ಸ್ಥಾನಗಳಿಗೆ ಅದೇ ವರ್ಗಕ್ಕೆ ಸೇರಿದ ಅಭ್ಯರ್ಥಿಗಳು ದೊರೆಯದಿದ್ದಲ್ಲಿ ಈ ಸ್ಥಾನಗಳನ್ನು ಸಾಮಾನ್ಯ ಅಭ್ಯರ್ಥಿಗಳಿಂದ ತುಂಬಲಾಗುವುದು. ಆದರೆ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡದ ಅಭ್ಯರ್ಥಿಗಳು ದೊರೆಯದಿದ್ದಲ್ಲಿ ಅಂತಹ ರಿಕ್ತ ಸ್ಥಾನಗಳನ್ನು ಭರ್ತಿ ಮಾಡದೆ ಬ್ಯಾಕಲಾಗ್ ಹುದ್ದೆಗಳೆಂದು ಪರಿಗಣಿಸಲಾಗುವುದು.

ಆ) ಮೇಲೆ ವಿವರಿಸಿದ ಸಾಮಾನ್ಯ ಅರ್ಹತೆ ಸೇರಿದಂತೆ ಪ್ರತಿ ಮೀಸಲಾತಿ ಪ್ರವರ್ಗಗಳಿಗೆ ಈ ಕೆಳಕಂಡ ಆದೇಶಗಳ ಪ್ರಕಾರ "ಸಮತಳ ಮೀಸಲಾತಿ" (Horizontal reservation) ಅನ್ವಯ ಹುದ್ದೆಗಳನ್ನು ವರ್ಗೀಕರಿಸಲಾಗಿದೆ.

| | | | |
|---|---|---|---|
| 1 | ಮಾಜಿ ಸೈನಿಕರಿಗೆ | ಶೇಕಡ 10 | ಕರ್ನಾಟಕ ಸಿವಿಲ್ ಸರ್ವೀಸಸ್ (ಜನರಲ್ ರೆಕ್ರೂಟ್‌ಮೆಂಟ್) ರೂಲ್ಸ್ 1977ರ ನಿಯಮ 9(1)ರ ಅನ್ವಯ ಹಾಗೂ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 97 ಸೇನೆನಿ 2002 ದಿನಾಂಕ 22–11–2002.ಮತ್ತು ಸರ್ಕಾರದ ಆದೇಶ ಸಂಖ್ಯೆ ಸಿಆಸುಇ53/ಸೇನೆನಿ/2007 ದಿನಾಂಕ:–04–01–2008 |
| 2 | ಅಂಗವಿಕಲರಿಗೆ | ಶೇಕಡ 5 | ಕರ್ನಾಟಕ ಸಿವಿಲ್ ಸರ್ವೀಸಸ್ (ಜನರಲ್ ರೆಕ್ರೂಟ್‌ಮೆಂಟ್) ರೂಲ್ಸ್ 1977 ನಿಯಮ 9(1)(ಎ)ರ ಅನ್ವಯ ಹಾಗೂ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 97 ಸೇನೆನಿ 2002 ದಿನಾಂಕ 22–11–2002. ಮತ್ತು ಸರ್ಕಾರದ ಆದೇಶ ಸಂಖ್ಯೆ ಸಿಆಸುಇ53/ಸೇನೆನಿ/2007 ದಿನಾಂಕ:–04–01–2008 |
| 3 | ಮಹಿಳಾ ಅಭ್ಯರ್ಥಿಗಳಿಗೆ | ಶೇಕಡ 30 | ಕರ್ನಾಟಕ ಸಿವಿಲ್ ಸರ್ವೀಸಸ್ (ಜನರಲ್ ರೆಕ್ರೂಟ್‌ಮೆಂಟ್) ರೂಲ್ಸ್ 1977ರ ನಿಯಮ 9(1)(ಬಿ) ಮತ್ತು ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 97 ಸೇನೆನಿ 2002 ದಿನಾಂಕ 22–11–2002. ಹಾಗೂ ಸರ್ಕಾರದ ಸುತ್ತೋಲೆ ಸಂಖ್ಯೆ ಸಿಅಸುಇ 16/ಸೇನೇನಿ 2008 ದಿನಾಂಕ 01–09–2008 ಮತ್ತು ಸರ್ಕಾರದ ಆದೇಶ ಸಂಖ್ಯೆ ಸಿಆಸುಇ53/ಸೇನೆನಿ/2007ದಿನಾಂಕ:–04–01–2008 |
| 4 | ಯೋಜನೆಗಳಿಂದ ನಿರಾಶ್ರಿತರಾದವರ ಕುಟುಂಬದವರ ಅಭ್ಯರ್ಥಿಗಳಿಗಾಗಿ | ಶೇಕಡ 5 | ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 23 ಎಸ್‌ಆರ್‌ಆರ್ 99 ದಿನಾಂಕ 23–11–2000 ಮತ್ತು ಸರ್ಕಾರದ ಆದೇಶದ ಸಂಖ್ಯೆ: ಸಿಆಸುಇ 97 ಸೇನೆನಿ 2002 ದಿನಾಂಕ 22–11–2002 ಮತ್ತು ಸರ್ಕಾರದ ಆದೇಶ ಸಂಖ್ಯೆ ಸಿಆಸುಇ53/ಸೇನೆನಿ/2007 ದಿನಾಂಕ:–04–01–2008 |
| 5 | ಗ್ರಾಮೀಣ ಅಭ್ಯರ್ಥಿಗಳಿಗೆ | ಶೇಕಡ 25 | 2000ದ ಕರ್ನಾಟಕ ಗ್ರಾಮೀಣ ಅಭ್ಯರ್ಥಿಗಳಿಗಾಗಿ (ರಾಜ್ಯ ಸಿವಿಲ್ ಸೇವೆಗಳಲ್ಲಿ ನೇಮಕಾತಿ ಅಥವಾ ಹುದ್ದೆಗಳ ಮೀಸಲಾತಿ ವಿಧೇಯಕ) ಹಾಗೂ ಸರಕಾರದ ಆದೇಶ ಸಂಖ್ಯೆ: ಸಿಆಸುಇ 97 ಸೇನೆನಿ 2002 ದಿನಾಂಕ 22–11–2002 ಮತ್ತು ಸರ್ಕಾರದ ಆದೇಶ ಸಂಖ್ಯೆ ಸಿಆಸುಇ53/ಸೇನೆನಿ/2007 ದಿನಾಂಕ:–04–01–2008 |
| 6 | ಕನ್ನಡ ಮಾಧ್ಯಮದ ಅಭ್ಯರ್ಥಿಗಳಿಗಾಗಿ | ಶೇಕಡ 5 | ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 71 ಎಸ್‌ಆರ್‌ಆರ್ 2001 ದಿನಾಂಕ 24–10–2002 ಮತ್ತು ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 97 ಸೇನೆನಿ 2002 ದಿನಾಂಕ 22–11–2002 ಮತ್ತು ಸರ್ಕಾರದ ಆದೇಶ ಸಂಖ್ಯೆ ಸಿಆಸುಇ53/ಸೇನೆನಿ/2007 ದಿನಾಂಕ:–04–01–2008 |

**15) ವಿವರಣೆ:**

i) "ಮಾಜಿ ಸೈನಿಕ"ರಿಗಾಗಿ ಮೀಸಲಿಟ್ಟ ಖಾಲಿ ಹುದ್ದೆಗಳನ್ನು ಮಿಲಿಟರಿ ಸೇವೆಯಿಂದ ಬಿಡುಗಡೆ ಹೊಂದಿದ ವ್ಯಕ್ತಿಗಳಿಂದ ಮತ್ತು ಭಾರತ ದೇಶದ ಒಕ್ಕೂಟದ ಸಶಸ್ತ್ರ ದಳದಲ್ಲಿ ಸೇವೆ ಸಲ್ಲಿಸುವಾಗ ಕೊಲ್ಲಲ್ಪಟ್ಟ ಅಥವಾ ಶಾಶ್ವತವಾಗಿ ಅಂಗಹೀನರಾದ ವ್ಯಕ್ತಿಗಳ ಕುಟುಂಬದ ಸದಸ್ಯರಿಂದ ನೇಮಕಾತಿ ಮೂಲಕ ತುಂಬಲಾಗುತ್ತದೆ.

ii) "ಮಾಜಿ ಸೈನಿಕ" "ಸಶಸ್ತ್ರ ದಳದ ಸದಸ್ಯ" ಮತ್ತು "ಕುಟುಂಬದ ಸದಸ್ಯ" ಎಂಬ ಪದಗಳ ಅರ್ಥವು ಕಾಲದಿಂದ ಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ರಾಜ್ಯ ಸರ್ಕಾರಿ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977 ರಲ್ಲಿ ವಿವರಿಸಿರುವಂತೆ ಇರುತ್ತದೆ.

iii) ಕರ್ನಾಟಕ ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ: ಎಂಎಂಡಬ್ಲ್ಯೂ. 107. ಪಿಹೆಚ್‌ಪಿ 2003 ದಿನಾಂಕ: 11–07–2003 ಮತ್ತು ಡಿಪಿಎಆರ್ 50 ಎಸ್‌ಆರ್‌ಆರ್ 2000 ದಿನಾಂಕ: 03–09–2005ರ ಅನ್ವಯ ತಾನು "ಅಂಗವಿಕಲರ ಗುಂಪಿಗೆ ಸೇರಿದವರೆಂದು ಹೇಳಿಕೊಳ್ಳುವ ಅಭ್ಯರ್ಥಿಯು" ವೈದ್ಯಕೀಯ ಪ್ರಮಾಣ ಪತ್ರವನ್ನು ಹೊಂದಿರಬೇಕು.

iv) ನೇರ ನೇಮಕಾತಿಯಲ್ಲಿ ಲಭ್ಯವಿರುವ ಸ್ಥಾನಗಳನ್ನು ದಿನಾಂಕ 20–06–1995ರಂದು ಹೊರಡಿಸಿರುವ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 8 ಸೆಹಿಮ 95ರ ಅನ್ವಯ ಸಾಮಾನ್ಯ ಅರ್ಹತೆ, ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಹಿಂದುಳಿದ ಪ್ರವರ್ಗ 1, 2ಎ, 2ಬಿ, 3ಎ, 3ಬಿ ವರ್ಗಗಳಿಗೆ ವಿಂಗಡಿಸಿ ಮೀಸಲಿರಿಸಲಾಗುವುದು. ಹಾಗೂ ಆಯಾ ವರ್ಗಕ್ಕೆ ಲಭ್ಯವಾಗುವ ರಿಕ್ತ ಸ್ಥಾನಗಳಲ್ಲಿ ಶೇ. 30 ರಷ್ಟು ಹುದ್ದೆಗಳನ್ನು ಮಹಿಳಾ ಅಭ್ಯರ್ಥಿಗಳಿಗೆ, ಶೇಕಡಾ 10 ರಷ್ಟು ಹುದ್ದೆಗಳನ್ನು ಮಾಜಿ ಸೈನಿಕ ಅಭ್ಯರ್ಥಿಗಳಿಗೆ, ಶೇಕಡ

5 ರಷ್ಟು ರಿಕ್ತ ಸ್ಥಾನಗಳನ್ನು ಅಂಗವಿಕಲ ಅಭ್ಯರ್ಥಿಗಳಿಗೆ, ಶೇ. 5 ರಷ್ಟು ರಿಕ್ತ ಸ್ಥಾನಗಳನ್ನು ಯೋಜನೆಗಳಿಂದ ನಿರಾಶ್ರಿತರಾದವರ ಕುಟುಂಬದ ಅಭ್ಯರ್ಥಿಗಳಿಗೆ, ಶೇ. 25 ರಷ್ಟು ಸ್ಥಾನಗಳನ್ನು ಗ್ರಾಮೀಣ ಅಭ್ಯರ್ಥಿಗಳಿಗೆ, ಮತ್ತು ಶೇ 5 ರಷ್ಟು ರಿಕ್ತ ಸ್ಥಾನಗಳನ್ನು ಕನ್ನಡ ಮಾಧ್ಯಮ ವ್ಯಾಸಂಗ ಮಾಡಿದ ಅಭ್ಯರ್ಥಿಗಳಿಂದ, ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 97 ಸೇನೇನಿ. 2002 ದಿನಾಂಕ: 22–11–2002ರಲ್ಲಿ ವಿವರಿಸಿರುವಂತೆ ಭರ್ತಿ ಮಾಡಲು ಮೀಸಲಿರಿಸಲಾಗುವುದು.

**ಅಂತಿಮ ಆಯ್ಕೆಪಟ್ಟಿ ತಯಾರಿಸುವಾಗ :**

ಮಹಿಳೆಯರಿಗೆ ಮೀಸಲಿರಿಸಿದ ರಿಕ್ತ ಸ್ಥಾನಗಳಿಗೆ ಅರ್ಹ ಮಹಿಳಾ ಅಭ್ಯರ್ಥಿಗಳು ಲಭ್ಯವಾಗದಿದ್ದಲ್ಲಿ ಅಂತಹ ರಿಕ್ತ ಸ್ಥಾನಗಳನ್ನು ಆಯಾ ವರ್ಗಕ್ಕೆ ಸೇರಿದ ಪುರುಷ ಅಭ್ಯರ್ಥಿಗಳಿಂದ ಭರ್ತಿ ಮಾಡಲಾಗುವುದು.

ಮಾಜಿ ಸೈನಿಕರಿಗಾಗಿ ಮೀಸಲಿರಿಸಿದ ರಿಕ್ತ ಸ್ಥಾನಗಳಿಗೆ ಅರ್ಹ ಮಾಜಿ ಸೈನಿಕ ಅಭ್ಯರ್ಥಿಗಳು ಲಭ್ಯವಾಗದಿದ್ದಲ್ಲಿ ಅಂತಹ ರಿಕ್ತ ಸ್ಥಾನಗಳನ್ನು ಅಯಾ ವರ್ಗಕ್ಕೆ ಸೇರಿದ ಇತರೆ ಅರ್ಹ ಅಭ್ಯರ್ಥಿಗಳಿಂದ ಭರ್ತಿ ಮಾಡಲಾಗುವುದು.

ಇದೇ ರೀತಿ ಯೋಜನಾ ನಿರಾಶ್ರಿತ / ಗ್ರಾಮೀಣ ಅರ್ಹ ಅಭ್ಯರ್ಥಿಗಳು ದೊರಯದಿದ್ದಲ್ಲಿ ಅಂತಹ ರಿಕ್ತ ಸ್ಥಾನಗಳನ್ನು ಆಯಾ ಪ್ರವರ್ಗಕ್ಕೆ ಸೇರಿದ ಇತರೆ ಅರ್ಹ ಅಭ್ಯರ್ಥಿಗಳಿಂದ ಭರ್ತಿ ಮಾಡಲಾಗುವುದು.

ಅರ್ಹ ಅಂಗವಿಕಲ ಅಭ್ಯರ್ಥಿಗಳು ದೊರೆಯದಿದ್ದಲ್ಲಿ ಅಂತಹ ರಿಕ್ತ ಸ್ಥಾನಗಳನ್ನು ಭರ್ತಿ ಮಾಡದೆ ಬ್ಯಾಕ್‌ಲಾಗ್ ಹುದ್ದೆಗಳೆಂದು ಪರಿಗಣಿಸಲಾಗುವುದು.

**16) ಹುದ್ದೆಗಳ ವರ್ಗೀಕರಣ:–**

ಸರಕಾರದ ಆದೇಶ ಸಂಖ್ಯೆ: ಸಿಆಸುಇ 08 ಸಹಿಮ 95 ದಿನಾಂಕ 20–06–1995 ಮತ್ತು ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 97 ಸೇನೆನಿ 2002 ದಿನಾಂಕ 22–11–2002 ಹಾಗೂ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 53/ಸೇನಿನಿ/2007, ದಿ. 4.1.2008ರ ಪ್ರಕಾರ ಜಿಲ್ಲಾ ಮಟ್ಟದಲ್ಲಿ ವಿಷಯವಾರು ಮತ್ತು ಮಾಧ್ಯಮವಾರು ಹುದ್ದೆಗಳನ್ನು ಈ ಮುಂದಿನ ಅನುಬಂಧ ದಂತೆ ವರ್ಗೀಕರಿಸಿದೆ.

ಮುಂದುವರಿದು ಆಯ್ಕೆ ಪಟ್ಟಿಯನ್ನು ತಯಾರಿಸುವಾಗ ಸಮತಳ ಮೀಸಲಾತಿಗೆ ಸಂಬಂದಿಸಿದಂತೆ ಗೌರವಾನ್ವಿತ ಸರ್ವೋಚ್ಚ ನ್ಯಾಯಾಲಯವು ವಿವರಿಸಿರುವ ಕಾರ್ಯವಿಧಾನವನ್ನು ಸರ್ಕಾರದ ಸುತ್ತೋಲೆ ಸಂಖ್ಯೆ ಸಿಆಸುಇ16/ಸೇನಿ/2008 ದಿನಾಂಕ:–01–09–2008ರಲ್ಲಿ ಆದೇಶಿಸಿರುವಂತೆ ಅಳವಡಿಸಿಕೊಳ್ಳಲಾಗುವುದು

**ಟಿಪ್ಪಣಿ :** **ಪ್ರೌಢ ಶಾಲಾ ಸಹ ಶಿಕ್ಷಕ ಗ್ರೇಡ್–2 ವೃಂದದ ವಿವಿಧ ವಿಷಯ ಮತ್ತು ಬೋಧನಾ ಮಾಧ್ಯಮದ ಮತ್ತು ದೈಹಿಕ ಶಿಕ್ಷಣ ಶಿಕ್ಷಕ (ಗ್ರೇಡ್–1) ವೃಂದದ ಖಾಲಿ ಹುದ್ದೆಗಳ ಸಂಖ್ಯೆ ಹಾಗೂ ಮೀಸಲಾತಿ ವರ್ಗೀಕರಣದ ವಿವರಗಳನ್ನು ಈ ಅಧಿಸೂಚನೆಗೆ ಲಗತ್ತಿಸಿರುವ "ಹುದ್ದೆಗಳ ವರ್ಗೀಕರಣದ ಅನುಬಂಧದಲ್ಲಿ" ಪ್ರತ್ಯೇಕವಾಗಿ ವಿವರಿಸಿದೆ.**

**ಸೂಚನೆ :** **ಪ್ರಕಟಿಸಿರುವ ಹುದ್ದೆಗಳ ಸಂಖ್ಯೆ ಮತ್ತು ವರ್ಗೀಕರಣವು ಅನಿವಾರ್ಯ ಸಂದರ್ಭಗಳಲ್ಲಿ ಬದಲಾವಣೆಗೆ ಒಳಪಟ್ಟಿರುತ್ತದೆ.**

(1) ಮೀಸಲಾತಿ ಸೌಲಭ್ಯ ಪಡೆಯಲು ಅಭ್ಯರ್ಥಿಗಳು ಸಲ್ಲಿಸಬೇಕಾದ ಪ್ರಮಾಣ ಪತ್ರಗಳು:

ಅ) ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ ಮತ್ತು ಹಿಂದುಳಿದ ಪ್ರವರ್ಗ–1 ಕ್ಕೆ ಸೇರಿದ ಅಭ್ಯರ್ಥಿಗಳು ಸರ್ಕಾರದ ಅಧಿಸೂಚನೆ ಸಂಖ್ಯೆ: ಎಸ್‌ಡಬ್ಲೂಡಿ 132 ಎಸ್ಎಡಿ 97 ದಿನಾಂಕ 08–02–2000 ಮತ್ತು ಹಿಂದುಳಿದ ಪ್ರವರ್ಗಗಳಾದ ಪ್ರವರ್ಗ–2ಎ, 2ಬಿ, 3ಎ, ಮತ್ತು 3ಬಿ ಗೆ ಸೇರಿದ ಅಭ್ಯರ್ಥಿಗಳು ಸರ್ಕಾರದ ಆದೇಶ ಸಂಖ್ಯೆ: ಎಸ್‌ಡಬ್ಲೂಡಿ 126 ಬಿಡಿಎ ದಿನಾಂಕ 13–02–2003 ರಂದು ಹೊರಡಿಸಿದ **"ಕರ್ನಾಟಕ ಅನುಸೂಚಿತ ಜಾತಿಗಳು, ಅನುಸೂಚಿತ ಬುಡಕಟ್ಟುಗಳು, ಮತ್ತು ಇತರೆ ಹಿಂದುಳಿದ ವರ್ಗಗಳ (ನೇಮಕಾತಿ ಮುಂತಾದ ಮೀಸಲಾತಿ) (ತಿದ್ದುಪಡಿ) ನಿಯಮಗಳು 2000"** ರನ್ವಯ ನಿಗದಿಪಡಿಸಿರುವ ಅಭ್ಯರ್ಥಿಗಳಿಗೆ ಅನ್ವಯಿಸುವ ಕೆಳಕಂಡ ನಮೂನೆಗಳಲ್ಲಿಯೇ ಸಂಬಂಧಿಸಿದ ವ್ಯಾಪ್ತಿಯ ತಹಸೀಲ್ದಾರರ ದರ್ಜೆಗಿಂತ ಕಡಿಮೆ ಇಲ್ಲದ ರೆವಿನ್ಯೂ ಪ್ರಾಧಿಕಾರಿಯಿಂದ ಪ್ರಮಾಣ ಪತ್ರವನ್ನು ಪಡೆದಿರಬೇಕು.

| | | |
|---|---|---|
| 1 | ಅನುಸೂಚಿತ ಜಾತಿ ಅಥವಾ ಅನುಸೂಚಿತ ಪಂಗಡಕ್ಕೆ ಸೇರಿದ ಅಭ್ಯರ್ಥಿಗಳು | **ನಮೂನೆ – ಡಿ** (ನಿಯಮ 3ಎ(2)(3), ಸರಕಾರದ ಆದೇಶ ಸಂಖ್ಯೆ: ಎಸ್‌ಡಬ್ಲೂಡಿ 132 ಎಸ್ಎಡಿ 97 ದಿನಾಂಕ 08–02–2000 |
| 2 | ಹಿಂದುಳಿದ ಪ್ರವರ್ಗ–1 ಕ್ಕೆ ಸೇರಿದ ಅಭ್ಯರ್ಥಿಗಳು | **ನಮೂನೆ – ಇ** (ನಿಯಮ 3ಎ(2)(3), ಸರಕಾರದ ಆದೇಶ ಸಂಖ್ಯೆ: ಎಸ್‌ಡಬ್ಲೂಡಿ 132 ಎಸ್ಎಡಿ 97 ದಿನಾಂಕ 08–02–2000 |
| 3 | ಹಿಂದುಳಿದ ಪ್ರವರ್ಗ 2ಎ, 2ಬಿ, 3ಎ, ಮತ್ತು 3ಬಿ ಗೆ ಸೇರಿದ ಅಭ್ಯರ್ಥಿಗಳು | **ನಮೂನೆ – ಎಫ್** (ನಿಯಮ 3ಎ(2)(3), ಸರಕಾರದ ಆದೇಶ ಸಂಖ್ಯೆ: ಎಸ್‌ಡಬ್ಲೂಡಿ 126 ಎಸ್ಎಡಿ 97 ದಿನಾಂಕ 13–02–2003 |

**ಮೇಲ್ಕಂಡ ಮೀಸಲಾತಿ ಪ್ರಮಾಣ ಪತ್ರಗಳು ಉಲ್ಲೇಖಿಸಿರುವ ನಿಯಮಗಳ ಪ್ರಕಾರವಿರಬೇಕು ಮತ್ತು ನೇಮಕಾತಿ ಅಧಿಸೂಚನೆ ದಿನಾಂಕಕ್ಕೆ ಐದು ವರ್ಷಗಳನ್ನು ಮೀರಿರಬಾರದು. ಅವಧಿ ಮೀರಿದ ಮೀಸಲಾತಿ ಪ್ರಮಾಣ ಪತ್ರಗಳನ್ನು ತಿರಸ್ಕರಿಸಲಾಗುವುದು.**

**ಅಂಗವಿಕಲ ಅಭ್ಯರ್ಥಿಗಳಿಗೆ ಸೂಚನೆ:–**

ಸರ್ಕಾರಿ ಆದೇಶ ಸಂಖ್ಯೆ: ಡಿಪಿಎಆರ್ 52 ಎಸ್.ಎಸ್.ಆರ್. 99 ದಿನಾಂಕ 29–11–2002ರಲ್ಲಿ ನಿಗದಿಪಡಿಸಿರುವ ಅಂಗವಿಕಲ ಅಭ್ಯರ್ಥಿಗಳನ್ನು ಮಾತ್ರ ಪರಿಗಣಿಸಲಾಗುವುದು. ಸರ್ಕಾರಿ ಆದೇಶ ಸಂಖ್ಯೆ ಎಂ.ಎ.ಇ107/ಪಿ.ಹೆಚ್.ಪಿ/2003 ದಿನಾಂಕ: 11/7/2003 ರಲ್ಲಿ

ನಿಗಧಿಪಡಿಸಿರುವ ನಮೂನೆಯಲ್ಲಿ ವೈದ್ಯಕೀಯ ಪ್ರಮಾಣ ಪತ್ರಗಳನ್ನು ಸಕ್ಷಮ ವೈದ್ಯಾಧಿಕಾರಿಗಳಿಂದ ಪಡೆದಿರಬೇಕು. ಈ ಪ್ರಮಾಣ ಪತ್ರವನ್ನು ಅರ್ಜಿ ಸಲ್ಲಿಸುವ ದಿನಾಂಕಕ್ಕೆ ಅಭ್ಯರ್ಥಿಯು ಪಡೆದುಕೊಂಡಿರಬೇಕು.

ಸರ್ಕಾರಿ ಅಧಿಸೂಚನೆ ಸೆಕ್ಷನ್ ಸಂಖ್ಯೆ: ಡಿಪಿಎಆರ್ 52 ಎಸ್.ಎಸ್.ಆರ್. 99 29–11–2002ರ ಅಧಿನಿಯಮದ ಸೆಕ್ಷನ್ 32ರ ಪ್ರಕಾರ Persons with disabilities(equal opportunities. Protection of rights & full participation) Act1995 ರಾಜ್ಯ ಸರ್ಕಾರವು ವಿವಿಧ ಇಲಾಖೆಗಳಲ್ಲಿ ಅಂಗವಿಕಲರು ನಿರ್ವಹಿಸಬಹುದಾದ ಹುದ್ದೆಗಳನ್ನು ಗುರುತಿಸಿದೆ.ಸದರಿ ಅಧಿಸೂಚನೆ ಪುಟ–21 ರಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆಗೆ ಸಂಬಂಧಿಸಿದಂತೆ ಅಂಗವಿಕಲ ಅಭ್ಯರ್ಥಿಗಳಿಗೆ ಗುರುತಿಸಿರುವ ಹುದ್ದೆಗಳ ಉದ್ಧೃತವನ್ನು ಈ ಕೆಳಗೆ ನೀಡಲಾಗಿದೆ.

**Name of the Dept-Public Instruction**

| | |
|---|---|
| Blind | Music teachers Gr.1& 11(HS) |
| Low Vision | MusicTr.Gr.1&11(HS) Packer,counter,,,,,,Grp.D-Sweeper,Cleanrer peon |
| Leprosry Cured | Pri school HM,Sr.Librarian,Gr 1& 11 Pry-School Teacher.Drawing music Art Master (SSLC with Asst.Master Certi)Sec.Sch Asst.11,Tr.1,Asst Agri Teacher pri.Sch.Tr,Trained & Untrained, FDA,SDA,Drama,Craft, Hindi Trs.Group-D post: Lift Attender,Peon/Packer/Carrier Counter Cleaner Pacher, Attender. |
| Hearing Impaired | Pri School HM, Sr.Librarian,Pry.Schools Nursery School Tr Drawing Art Master(SSLC with Art Master certificate) Sec School Asst -2 Tr.Gr-1Asst Agriculture teacher Pry.ASchol Tr,Trained, & Untrainaed Drama teacher, FDA,SDA Craft ,Hindi Tr, Group D Post Attender /Lift Attender / Packer / carrian /counter/ packer /peon/Cleaner/Sweeper. |
| Locomotor Disability | Pry School HM, Nursery School teacher/Mother, Librarian state education library FDA,Drawing Art Master (SSLC with Art Master certificate) Secondary school Asst teachers grade-1 Asst Craft & Hindi Teachers ,group the Post Attender /Lift Attender / Packer / carrian /counter/ packer /peon/Cleaner/Sweeper. |
| Mentally ill | Pri School HM, Sr.Librarian,Pry.Schools Nursery School Tr Drawing Art Master(SSLC with Art Master certificate) Sec School Asst -2 Tr.Gr-1Asst Agriculture teacher Pry.ASchol Tr,Trained, & Untrainaed Drama teacher, FDA,SDA Craft ,Hindi Tr, Group D Post Attender /Lift Attender / Packer / carrian /counter/ packer /peon/Cleaner/Sweeper. |
| Menatally Retarted | ---------- |

1. ಮೇಲಿನಂತೆ Blind, Low vision ಹಾಗೂ Menatally Retarted ಅಂಗವಿಕಲ ಅಭ್ಯರ್ಥಿಗಳು ಪ್ರೌಢ ಶಾಲಾ ಸಹ ಶಿಕ್ಷಕರು ಗ್ರೇಡ್–2 ವೃಂದದ ಹುದ್ದೆಗಳಿಗೆ ಅರ್ಹರಿರುವುದಲ್ಲ ಹಾಗೂ ದೈಹಿಕ ಶಿಕ್ಷಣ ಶಿಕ್ಷಕರು ಗ್ರೇಡ್–1 ಹುದ್ದೆಗಳಿಗೆ ಯಾವುದೇ ರೀತಿಯ ಅಂಗವಿಕಲ ಅಭ್ಯರ್ಥಿಗಳು ಅರ್ಹರಿರುವುದಿಲ್ಲ.
2. ದೈಹಿಕ ಅಂಗವಿಕಲ ಅಭ್ಯರ್ಥಿಗಳು ಸರ್ಕಾರಿ ಜಿಲ್ಲಾ ಆಸ್ಪತ್ರೆಗಳಲ್ಲಿರುವ ಮೂಳೆ ತಜ್ಞ (Orthopaedic Surgeon) ರಿಂದ ದೈಹಿಕ ಅಂಗವಿಕಲತೆಯ ಮೌಲೀಕರಣವನ್ನು ALimco Kanpur (W.H.O Standard) ಇದರ ಆಧಾರದ ಮೇಲೆ ಮಾಡಿಸುವುದು ಕಡ್ಡಾಯವಾಗಿರುತ್ತದೆ.ಹಾಗೂ ಶ್ರವಣ ಧೋಷ ಹೊಂದಿರುವ ಅಂಗವಿಕಲ ಅಬ್ಯರ್ಥಿಗಳ ಪ್ರಮಾಣ ಪತ್ರದಲ್ಲಿ ಶ್ರವಣ ದೋಷದ ನಷ್ಟವನ್ನು ಡೆಸಿಬಲ್ಸ್ (Decibels) ಗಳಲ್ಲಿ ಕಡ್ಡಾಯವಾಗಿ ನಮೂದಿಸತಕ್ಕದ್ದು.

**ಉ) ಮಾಜಿ ಸೈನಿಕರ ಗುಂಪಿನಲ್ಲಿ ಆಯ್ಕೆ ಬಯಸುವ ಅಭ್ಯರ್ಥಿಗಳಿಗೆ ಸೂಚನೆಗಳು:**

ಮಾಜಿ ಸೈನಿಕರ ಗುಂಪಿನಲ್ಲಿ ಆಯ್ಕೆಗೆ ಕೆಳಗಿನವರು ಅರ್ಹರು:–

1) ಮಾಜಿ ಸೈನಿಕ ಎಂದರೆ ಸಶಸ್ತ್ರ ದಳಗಳಾದ ನಿಯಮಿತ ಭೂದಳ, ನೌಕಾದಳ ಮತ್ತು ವಾಯುದಳದಲ್ಲಿ ಯಾವುದೇ ಶ್ರೇಣಿಯಲ್ಲಿ (ಯೋಧ ಅಥವಾ ಅಯೋಧನಾಗಿ) ಸೇವೆ ಸಲ್ಲಿಸಿದ ವ್ಯಕ್ತಿ. ಅಂದರೆ:–

(ಅ) ಅಂತಹ ಸೇವೆಯಿಂದ ನಿವೃತ್ತಿ ಹೊಂದಿದ ನಂತರ ನಿವೃತ್ತಿ ವೇತನ ಪಡೆಯುತ್ತಿರುವ ವ್ಯಕ್ತಿ.

**ಅಥವಾ**

(ಆ) ವೈದ್ಯಕೀಯ ಕಾರಣಗಳಿಂದ ಮಿಲಿಟರಿ ಸೇವೆಗೆ ಅನರ್ಹನಾದವನೆಂದೋ ಅಥವಾ ವ್ಯಕ್ತಿಯ ಹಿಡಿತಕ್ಕೂ ಮೀರಿದ ಪರಿಸ್ಥಿತಿಗಳಿಂದ ಮತ್ತು ವೈದ್ಯಕೀಯ ಅಥವಾ ಅಸಾಮರ್ಥ್ಯದ ಪಿಂಚಣಿ ಪಡೆದು ಸೇವೆಯಿಂದ ಬಿಡುಗಡೆಯಾದ ವ್ಯಕ್ತಿ.

**ಅಥವಾ**

(ಇ) ಸ್ವಂತ ಕೋರಿಕೆ ಹೊರತುಪಡಿಸಿ ಸಿಬ್ಬಂದಿ ಕಡಿತದ ಪರಿಣಾಮದಿಂದ ಅಂತಹ ಸೇವೆಯಿಂದ ಬಿಡುಗಡೆ ಹೊಂದಿದ ವ್ಯಕ್ತಿ.

**ಅಥವಾ**

(ಈ) ತನ್ನ ಸ್ವಂತ ಕೋರಿಕೆಯ ಮೇರೆಗೆ ಅಥವಾ ದುರ್ನಡತೆ ಅಥವಾ ಅಸಾಮರ್ಥ್ಯದ ಕಾರಣದಿಂದಾಗಿ ತೆಗೆದು ಹಾಕಿರುವ ಅಥವಾ ಕರ್ತವ್ಯದಿಂದ ವಜಾ ಮಾಡಿದ ವ್ಯಕ್ತಿಗಳನ್ನು ಹೊರತುಪಡಿಸಿ, ನಿರ್ಧಿಷ್ಟ ಅವಧಿಯನ್ನು ಪೂರೈಸಿದ ತರುವಾಯ ಬಿಡುಗಡೆ ಹೊಂದಿದ ವ್ಯಕ್ತಿ ಮತ್ತು ಗ್ರಾಚ್ಯುಟಿ ಪಡೆಯುತ್ತಿರುವ ವ್ಯಕ್ತಿ.

**ಅಥವಾ**

(ಉ) ಪ್ರಾಂತೀಯ ಸೇವೆಯ ಈ ಕೆಳಗೆ ಹೆಸರಿಸಿದ ವರ್ಗದ ಸಿಬ್ಬಂದಿ.

1) ನಿರಂತರ ಸೇವೆ ಸಲ್ಲಿಸಿ ನಿವೃತ್ತಿ ಹೊಂದಿದ ಪಿಂಚಣಿದಾರರು.

2) ಮಿಲಿಟರಿ ಸೇವೆಯಿಂದ ಉಂಟಾದ ದೈಹಿಕ ಅಸಾಮರ್ಥ್ಯತೆ ಹೊಂದಿ ಬಿಡುಗಡೆಯಾದ ವ್ಯಕ್ತಿ.

3) ಗ್ಯಾಲಂಟ್ರಿ ಪ್ರಶಸ್ತಿ ವಿಜೇತರು.

**2. ಮಾಜಿ ಸೈನಿಕ ಅವಲಂಬಿತರ ಗುಂಪಿನಲ್ಲಿ ಆಯ್ಕೆ ಬಯಸುವ ಅಭ್ಯರ್ಥಿಗಳು ಅಂದರೆ:–**

ಕೇಂದ್ರ ಸಶಸ್ತ್ರ ದಳದಲ್ಲಿ ಸೇವೆ ಸಲ್ಲಿಸುವಾಗ ಕೊಲ್ಲಲ್ಪಟ್ಟ ಅಥವಾ ಶಾಶ್ವತವಾಗಿ ದೈಹಿಕ ವಿಕಲತೆ ಹೊಂದಿದ ವ್ಯಕ್ತಿಗಳ ಕುಟುಂಬದವರು.

**(ಸಂಬಂಧಾನುಸಾರ ಹೆಂಡತಿ ಅಥವಾ ಗಂಡ ಮತ್ತು ಮಕ್ಕಳು ಮತ್ತು ಮಲ ಮಕ್ಕಳು ಮಾಜಿ ಸೈನಿಕರ ಅವಲಂಬಿತರಡಿಯಲ್ಲಿ ಮೀಸಲಾತಿಗೆ ಅರ್ಹರಾಗಿರುತ್ತಾರೆ. ಆದರೆ ಅಂತಹವರಿಗೆ ವಯೋಮಿತಿ ಸಡಿಲಿಕೆ ಇಲ್ಲ)**

**ವಿವರಣೆ:**

1. ಈ ಸೌಲಭ್ಯಕ್ಕೆ ಡಿಫೆನ್ಸ್ ಸೆಕ್ಯುರಿಟಿ ಕಾರ್ಪ್ಸ್, ಜನರಲ್ ರಿಸರ್ವ್ ಇಂಜಿನಿಯರಿಂಗ್ ಕಾರ್ಪ್ಸ್ ಲೋಕ ಸಹಾಯಕ ಸೇವೆ ಮತ್ತು ಪ್ಯಾರಾ ಮಿಲಿಟರಿ ದಳದಲ್ಲಿ ಸೇವೆ ಸಲ್ಲಿಸಿದ ವ್ಯಕ್ತಿ ಅರ್ಹರಲ್ಲ.
2. ಕೇಂದ್ರ ಸಶಸ್ತ್ರದಳದ ಸೇವೆಯಿಂದ ನಿವೃತ್ತಿ ಹೊಂದಿದ ನಂತರ ಮಾಜಿ ಸೈನಿಕರ ವರ್ಗದಡಿ ಬರುವ ವ್ಯಕ್ತಿಗೆ ಒಪ್ಪಂದವು ಪೂರ್ಣವಾಗಲು ಒಂದು ವರ್ಷಕ್ಕೆ ಮುನ್ನ ಪುನರ್ ಉದ್ಯೋಗಕ್ಕೆ ಅರ್ಜಿ ಹಾಕಿಕೊಳ್ಳಲು ಹಾಗೂ ಅವರಿಗೆ ಮಾಜಿ ಸೈನಿಕರಿಗೆ ದೊರೆಯುವ ಎಲ್ಲಾ ಸೌಲಭ್ಯಗಳನ್ನು ಹೊಂದಲು ಅನುಮತಿ ನೀಡಲಾಗಿದೆ. ಆದರೆ, ಸಮವಸ್ತ್ರವನ್ನು ತ್ಯಜಿಸಲು ಅನುಮತಿ ನೀಡುವವರೆಗೆ ರಾಜ್ಯ ನಾಗರೀಕ ಸೇವೆ ಅಥವಾ ಹುದ್ದೆಗೆ ನೇಮಕ ಹೊಂದುವಂತಿಲ್ಲ.

**ಗ್ರಾಮೀಣ ಗುಂಪಿನಲ್ಲಿ ಮೀಸಲಾತಿ:–**

ಗ್ರಾಮೀಣ ಅಭ್ಯರ್ಥಿ ಎಂದರೆ ಕರ್ನಾಟಕ ಪೌರ ನಿಯಮಗಳ ಅಧಿನಿಯಮ 1976 ಅಥವಾ ಕರ್ನಾಟಕ ಪೌರ ಸಭೆಗಳ ಅಧಿನಿಯಮ 1964 ರಡಿಯಲ್ಲಿ ನಿರ್ದಿಷ್ಟಪಡಿಸಿದ ಒಂದು ದೊಡ್ಡ ಪ್ರದೇಶ, ಸಣ್ಣ ನಗರ ಪ್ರದೇಶ ಅಥವಾ ಪರಿವರ್ತನೆ ಹಂತದಲ್ಲಿರುವ ಪ್ರದೇಶ ಹೊರತಾಗಿ ಇತರೆ ಯಾವುದೇ ಪ್ರದೇಶದಲ್ಲಿರುವ ಶಾಲೆಯಲ್ಲಿ 1 ನೇ ತರಗತಿಯಿಂದ 10 ನೇ ತರಗತಿಯವರೆಗೆ ವ್ಯಾಸಂಗ ಮಾಡಿದ ಅಭ್ಯರ್ಥಿ.

ಗ್ರಾಮೀಣ ಅಭ್ಯರ್ಥಿಗಳ ಮೀಸಲಾತಿ ಅಡಿಯಲ್ಲಿ ಅರ್ಜಿ ಸಲ್ಲಿಸುವ ಅಭ್ಯರ್ಥಿಗಳು ಸಂಬಂಧಿಸಿದ ಪ್ರಮಾಣ ಪತ್ರಗಳನ್ನು **ಸರಕಾರದ ಆದೇಶ ಸಂಖ್ಯೆ: ಡಿಪಿಎಆರ್ 96 ಸೇನೆನಿ 2005 ದಿನಾಂಕ 10–08–2005** ರಲ್ಲಿ ನೀಡಿರುವ ನಿಗದಿತ ನಮೂನೆಯಲ್ಲಿ ಮಾತ್ರ ಸಲ್ಲಿಸಬೇಕು.

**ಊ) ಗ್ರಾಮೀಣ ಅಭ್ಯರ್ಥಿ ಮೀಸಲಾತಿ ಬಯಸುವ ಅಭ್ಯರ್ಥಿಗಳಿಗೆ ಸೂಚನೆಗಳು:–**

**ಗ್ರಾಮೀಣ ಅಭ್ಯರ್ಥಿ ಎಂದರೆ ಕರ್ನಾಟಕ ಪೌರ ನಿಯಮಗಳ ಅಧಿನಿಯಮ 1976 ಅಥವಾ ಕರ್ನಾಟಕ ಪೌರ ಸಭೆಗಳ ಅಧಿನಿಯಮ 1964ರಡಿಯಲ್ಲಿ ನಿರ್ದಿಷ್ಠ ಪಡಿಸಿದ ಒಂದು ದೊಡ್ಡ ಪ್ರದೇಶ, ಸಣ್ಣ ನಗರ ಪ್ರದೇಶ ಅಥವಾ ಪರಿವರ್ತನಾ ಹಂತದಲ್ಲಿರುವ ಪ್ರದೇಶಗಳ (ಮಹಾನಗರ ಪಾಲಿಕೆ / ನಗರ ಸಭೆ / ಪುರಸಭೆ / ಪಟ್ಟಣ ಪಂಚಾಯತ್) ಹೊರತಾದ ಪ್ರದೇಶವಾಗಿರುತ್ತದೆ. ಅಂದರೆ ಕೇವಲ ಗ್ರಾಮ ಪಂಚಾಯತ್/ಮಂಡಲ್ ಪಂಚಾಯತ್ ವ್ಯಾಪ್ತಿಗೆ ಒಳಪಡುವ ಶಾಲೆಯಲ್ಲಿ ಒಂದನೇ ತರಗತಿಯಿಂದ ಹತ್ತನೇ ತರಗತಿಯವರೆಗೆ ವ್ಯಾಸಂಗ ಮಾಡಿ ಉತ್ತೀರ್ಣರಾಗಿರುವ ಅಭ್ಯರ್ಥಿಗಳು ಮಾತ್ರ ಗ್ರಾಮೀಣ ಮೀಸಲಾತಿ ಸೌಲಭ್ಯ ಪಡೆಯಲು ಅರ್ಹರಿರುತ್ತಾರೆ.**

ಸದರಿ ಅಧಿನಿಯಮದಲ್ಲಿ **"ಗ್ರಾಮೀಣ ಅಭ್ಯರ್ಥಿಯನ್ನು"** ಈ ಕೆಳಗೆ ಉದ್ಧರಿಸಿದಂತೆ ಪರಿಭಾಷಿಸಲಾಗಿದೆ.

1) ಗ್ರಾಮೀಣ ಅಭ್ಯರ್ಥಿ ಎಂದರೆ ಒಂದು ಹುದ್ದೆಗಾಗಿ ನಿಯಮಿಸಲಾದ ಅರ್ಹತಾ ಪರೀಕ್ಷೆಯ ಎಸ್.ಎಸ್.ಎಲ್.ಸಿ. ಅಥವಾ ಉನ್ನತ ಪರೀಕ್ಷೆಯಾಗಿದ್ದಲ್ಲಿ 1ನೇ ತರಗತಿಯಿಂದ 10ನೇ ತರಗತಿಯವರೆಗೆ.

2) ಒಂದು ಹುದ್ದೆಗೆ ನಿಗದಿ ಪಡಿಸಲಾದ ಅರ್ಹತಾ ಪರೀಕ್ಷೆಯು ಎಸ್.ಎಸ್.ಎಲ್.ಸಿ.ಗಿಂತ ಕಡಿಮೆಯಾಗಿದ್ದಲ್ಲಿ 1ನೇ ತರಗತಿಯಿಂದ ಅರ್ಹತಾ ಪರೀಕ್ಷೆಯವರೆಗೆ:

3) ಸಾಮಾನ್ಯ ವರ್ಗದ ಅಭ್ಯರ್ಥಿಗಳು ನಮೂನೆ–1 ರಲ್ಲಿ ಅಂದರೆ, ಮೇಲುಸ್ಥರದಲ್ಲಿ (creamy layer) ಬರುವದಿಲ್ಲವೆಂದು ಸಂಬಂಧಿಸಿದ ತಹಸೀಲ್ದಾರರವರಿಂದ ಪಡೆದ ಪ್ರಮಾಣ ಪತ್ರದ ಜೊತೆಗೆ ಸರಕಾರದ ಆದೇಶ ದಿನಾಂಕ 10–08–2005ರಲ್ಲಿ ನಿಗದಿಪಡಿಸಲಾದ ನಮೂನೆ–2 ರಲ್ಲಿ ಗ್ರಾಮೀಣ ವ್ಯಾಸಂಗ ಪ್ರಮಾಣ ಪತ್ರವನ್ನು ಸಲ್ಲಿಸತಕ್ಕದ್ದು.

4) ಪ್ರವರ್ಗ–1, 2ಎ, 2ಬಿ, 3ಎ, 3ಬಿ, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಸೇರಿದ ಅಭ್ಯರ್ಥಿಗಳು ತಮ್ಮ ಮೀಸಲಾತಿ ಪ್ರಮಾಣ ಪತ್ರದ ಜೊತೆಗೆ ಸರಕಾರದ ಆದೇಶ ದಿನಾಂಕ 10–08–2005ರಲ್ಲಿ ನಿಗದಿ ಪಡಿಸಲಾದ ನಮೂನೆ–2ರಲ್ಲಿ ಗ್ರಾಮೀಣ ವ್ಯಾಸಂಗ ಪ್ರಮಾಣ ಪತ್ರವನ್ನು ಸಲ್ಲಿಸತಕ್ಕದ್ದು.

**ಸರ್ಕಾರದ ಆದೇಶ ಸಂಖ್ಯೆ: ಡಿಪಿಎಆರ್. 96 ಸೇ.ನೇ.ನಿ.2005 ದಿನಾಂಕ: 10–08–2005ರ ಪ್ರಕಾರ ಅಭ್ಯರ್ಥಿಯು 1 ರಿಂದ 10ನೆಯ ತರಗತಿಯವರೆಗೆ ವ್ಯಾಸಂಗ ಮಾಡುತ್ತಿದ್ದ ಅವಧಿಯಲ್ಲಿ ಸದರಿ ಪ್ರದೇಶಗಳು ಮಹಾನಗರ ಪಾಲಿಕೆಗಳು, ನಗರಸಭೆಗಳು, ಪುರಸಭೆಗಳು, ಪಟ್ಟಣ ಪಂಚಾಯಿತಿಗಳು ಮತ್ತು ಪರಿವರ್ತನಾ ಹಂತದಲ್ಲಿರುವ ಪ್ರದೇಶಗಳಾಗಿರಬಾರದು. ವಿವರ ಈ ಕೆಳಗೆ ನೀಡಲಾಗಿದೆ.**

| ಮಹಾನಗರ ಪಾಲಿಕೆಗಳು | | ನಗರ ಸಭೆಗಳು | | ಪುರ ಸಭೆಗಳು | | ಪಟ್ಟಣ ಪಂಚಾಯಿತ್ತಿಗಳು | |
|---|---|---|---|---|---|---|---|
| | | ಬೆಂಗಳೂರು ನಗರ ಜಿಲ್ಲೆ | | ಬೆಂಗಳೂರು ನಗರ ಜಿಲ್ಲೆ | | | |
| 1 | ಬೆಂಗಳೂರು | 1 | ಯಲಹಂಕ | 1 | ಆನೇಕಲ್ | | |
| | | 2 | ಬ್ಯಾಟರಾಯನಪೂರ | 2 | ಕೆಂಗೇರಿ | | |
| | | 3 | ಕೆ.ಆರ್.ಪುರಂ | | | | |
| | | 4 | ಬೊಮ್ಮನಹಳ್ಳಿ | | | | |
| | | 5 | ದಾಸರಹಳ್ಳಿ | | | | |
| | | 6 | ಪಟ್ಟಣಗೆರೆ | | | | |
| | | 7 | ಮಹದೇವಪುರ | | | | |
| ಬೆಂಗಳೂರು ಗ್ರಾಮಾಂತರ ಜಿಲ್ಲೆ | | | | | | | |
| | | 1 | ರಾಮನಗರ | 1 | ಮಾಗಡಿ | 1 | ನೆಲಮಂಗಲ |
| | | | | | | | |
| | | 2 | ದೊಡ್ಡಬಳ್ಳಾಪುರ | 2 | ದೇವನ ಹಳ್ಳಿ | | |
| | | 3 | ಚೆನ್ನಪಟ್ಟಣ | 3 | ಹೊಸಕೋಟೆ | | |
| | | | | 4 | ಕನಕಪುರ | | |
| | | | | 5 | ವಿಜಯಪುರ | | |
| ಮೈಸೂರು ಜಿಲ್ಲೆ | | | | | | | |
| 2 | ಮೈಸೂರು | | ಮೈಸೂರು | 1 | ನಂಜನಗೂಡು | 1 | ಪರಿಯಾಪಟ್ಟಣ |
| | | | | 2 | ಹುಣಸೂರು | 2 | ಹೆಚ್.ಡಿ.ಕೋಟೆ |
| | | | | 3 | ಕೆ.ಆರ್.ನಗರ | 3 | ಟಿ.ನರಸೀಪುರ |
| | | | | | | 4 | ಬನ್ನೂರು |
| ಬೆಳಗಾಂವ ಜಿಲ್ಲೆ | | | | | | | |
| 3 | ಬೆಳಗಾಂವ | 1 | ನಿಪ್ಪಾಣಿ | 1 | ಅಥಣಿ | 1 | ಹುಕ್ಕೇರಿ |
| | | 2 | ಗೋಕಾಕ | 2 | ಬೈಲಹೊಂಗಲ | 2 | ಖಾನಾಪೂರ |
| | | | | 3 | ಚಿಕ್ಕೋಡಿ | 3 | ಕೊಣ್ಣೂರು |
| | | | | 4 | ಮೂಡಲಗಿ | 4 | ಕುಡಚಿ |
| | | | | 5 | ರಾಮದುರ್ಗ | 5 | ರಾಯಭಾಗ |
| | | | | 6 | ಸಂಕೇಶ್ವರ | 6 | ಸದಲಗಾ |
| | | | | 7 | ಸವದತ್ತಿ | | |
| 4 | ಹುಬ್ಬಳ್ಳಿ / ಧಾರವಾಡ | | | | | | |
| ಗುಲಬರ್ಗಾ ಜಿಲ್ಲೆ | | | | | | | |
| 5 | ಗುಲಬರ್ಗಾ | | | 1 | ಆಳಂದ | 1 | ಅಫಜಲಪೂರ |
| | | | | 2 | ಚಿತ್ತಾಪೂರ | 2 | ಚಿಂಚೋಳಿ |
| | | | | 3 | ಸೇಡಂ | 3 | ಜೇವರ್ಗಿ |
| | | | | 4 | ಶಹಾಬಾದ | 4 | ಗುರುಮಿಠಕಲ್ |
| | | | | 5 | ಶಹಾಪೂರ | 5 | ವಾಡಿ |
| | | | | 6 | ಸುರಪೂರ | | |
| | | | | 7 | ಯಾದಗಿರಿ | | |
| ತುಮಕೂರು ಜಿಲ್ಲೆ | | | | | | | |
| | | 1 | ತುಮಕೂರು | 1 | ತಿಪಟೂರು | 1 | ಪಾವಗಡ |
| | | | | 2 | ಚಿಕ್ಕನಾಯ್ಕನ ಹಳ್ಳಿ | 2 | ಕೊರಟಗೆರೆ |
| | | | | 3 | ಸಿರಾ | 3 | ತುರುವೇಕೆರೆ |
| | | | | 4 | ಮಧುಗಿರಿ | 4 | ಗುಬ್ಬಿ |
| | | | | 5 | ಕುಣಿಗಲ್ | | |
| ಕೋಲಾರ ಜಿಲ್ಲೆ | | | | | | | |
| | | 1 | ಕೋಲಾರ | 1 | ಮುಳಬಾಗಿಲು | 1 | ಗುಡಿಬಂಡ |
| | | 2 | ಚಿಂತಾಮಣಿ | 2 | ಮಾಲೂರು | 2 | ಶ್ರೀನಿವಾಸಪುರ |
| | | 3 | ರಾಬರ್ಟಸನ್‌ಪೇಟೆ | 3 | ಬಂಗಾರಪೇಟೆ | 3 | ಬಾಗೇಪಲ್ಲಿ |

| | | | | | | | |
|---|---|---|---|---|---|---|---|
| | | 4 | ಚಿಕ್ಕಬಳ್ಳಾಪೂರ | 4 | ಗೌರಿ ಬಿದನೂರು | | |
| | | | | 5 | ಶಿಡ್ಲಘಟ್ಟ | | |
| **ಚಿತ್ರದುರ್ಗ ಜಿಲ್ಲೆ** | | | | | | | |
| | | 1 | ಚಿತ್ರದುರ್ಗ | 1 | ಚೆಳ್ಳಕೆರೆ | 1 | ಹೊಸದುರ್ಗ |
| | | | | 2 | ಹಿರಿಯೂರು | 2 | ಹೊಳಲ್ಕೆರೆ |
| | | | | | | 3 | ಮೊಳಕಾಲ್ಮೂರು |
| | **ದಾವಣಗೆರೆ ಜಿಲ್ಲೆ** | | | | | | |
| | | 1 | ದಾವಣಗೆರೆ | | | 1 | ಹರಪನಹಳ್ಳಿ |
| | | 2 | ಹರಿಹರ | | | 2 | ಚೆನ್ನಗಿರಿ |
| | | | | | | 3 | ಹೊನ್ನಾಳಿ |
| | | | | | | 4 | ಜಗಳೂರು |
| | **ಶಿವಮೊಗ್ಗ ಜಿಲ್ಲೆ** | | | | | | |
| | | 1 | ಶಿವಮೊಗ್ಗ | 1 | ಸಾಗರ | 1 | ಸೊರಬ |
| | | 2 | ಭದ್ರಾವತಿ | 2 | ಶಿಕಾರಿಪುರ | 2 | ಹೊಸನಗರ |
| | | | | | | 3 | ಶಿರಾಳಕೊಪ್ಪ |
| | | | | | | 4 | ತೀರ್ಥಹಳ್ಳಿ |
| | **ಚಾಮರಾಜ ನಗರ ಜಿಲ್ಲೆ** | | | | | | |
| | | 1 | ಚಾಮರಾಜನಗರ | 1 | ಕೊಳ್ಳೇಗಾಲ | 1 | ಯಳಂದೂರು |
| | | | | 2 | ಗುಂಡ್ಲುಪೇಟೆ | 2 | ಹನೂರು |
| | **ಮಂಡ್ಯ ಜಿಲ್ಲೆ** | | | | | | |
| | | 1 | ಮಂಡ್ಯ | 1 | ಮದ್ದೂರು | 1 | ಪಾಂಡವಪುರ |
| | | | | 2 | ಮಳವಳ್ಳಿ | 2 | ನಾಗಮಂಗಲ |
| | | | | 3 | ಶ್ರೀರಂಗಪಟ್ಟಣ | 3 | ಕೆ.ಆರ್.ಪೇಟೆ |
| | **ಹಾಸನ ಜಿಲ್ಲೆ** | | | | | | |
| | | 1 | ಹಾಸನ | 1 | ಹೊಳೇನರಸಿಪುರ | 1 | ಬೇಲೂರು |
| | | | | 2 | ಚೆನ್ನರಾಯಪಟ್ಟಣ | 2 | ಆರಕಲಗೂಡು |
| | | | | 3 | ಸಕಲೇಶಪುರ | 3 | ಆಲೂರು |
| | | | | 4 | ಅರಸೀಕೇರೆ | | |
| | **ಚಿಕ್ಕಮಗಳೂರು ಜಿಲ್ಲೆ** | | | | | | |
| | | 1 | ಚಿಕ್ಕಮಗಳೂರು | 1 | ಕಡೂರು | 1 | ತರೀಕೆರೆ |
| | | | | 2 | ಬೀರೂರು | 2 | ಕೊಪ್ಪ |
| | | | | | | 3 | ನರಸಿಂಹರಾಜಪುರ |
| | | | | | | 4 | ಶೃಂಗೇರಿ |
| | | | | | | 5 | ಮೂಡಿಗೆರೆ |
| | **ಉಡುಪಿ ಜಿಲ್ಲೆ** | | | | | | |
| | | 1 | ಉಡುಪಿ | 1 | ಕಾರ್ಕಳ | | |
| | | | | 2 | ಕುಂದಾಪುರ | | |
| | | | | 3 | ಸಾಲಿಗ್ರಾಮ | | |
| | **ದಕ್ಷಿಣ ಕನ್ನಡ ಜಿಲ್ಲೆ** | | | | | | |
| 1 | ಮಂಗಳೂರು | 1 | ಮಂಗಳೂರು | 1 | ಮೂಡಬಿದ್ರೆ | 1 | ಉಳ್ಳಾಲ |
| | | | | 2 | ಪುತ್ತೂರು | 2 | ಬಂಟ್ವಾಳ |
| | | | | | | 3 | ಬೆಳ್ತಂಗಡಿ |
| | | | | | | 4 | ಸುಳ್ಯ |
| | | | | | | 5 | ಮುಲ್ಕಿ |
| **ಬಿಜಾಪುರ ಜಿಲ್ಲೆ** | | | | | | | |
| | | 1 | ಬಿಜಾಪೂರ | 1 | ಇಂಡಿ | 1 | ಬಸವನಬಾಗೇವಾಡಿ |
| | | | | 2 | ಮುದ್ದೇಬಿಹಾಳ | | |

| | | | | | | | | | | | | | | | | | | | | | | | | | | | |
|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|
| ಮಾಜಿ ಸೈನಿಕ | | | | | | | | | | | | | | | | | | | | | | | | | | 0 | 0 |
| ಕನ್ನಡ ಮಾಧ್ಯಮ ಅಭ್ಯರ್ಥಿ | | | | | | | | | | | | | | | | | | | | | | | | | | 0 | 0 |
| ಯೋಜನೆಯಿಂದ ನಿರಾಶ್ರಿತರಾದವರ ಕುಟುಂಬದ ಅಭ್ಯರ್ಥಿ | | 1 | 1 | | | | | | | | | | | | | | | | | | | | | | | 1 | 1 |
| ಅಂಗವಿಕಲ ಅಭ್ಯರ್ಥಿ | | | | | | | | | | | | | | | | | | | | | | | | | | 0 | 0 |
| ಇತರರು | | | | | | | | | | | | | | | | | | | | | | | | | | 0 | 0 |
| **ಒಟ್ಟು** | | **2** | **2** | | **1** | **1** | | | | | | | | | | | | | | | **1** | **1** | | | | | **4** | **4** |

| | | | |
|---|---|---|---|
| **ಜಿಲ್ಲೆ:** | **ಕೊಡಗು** | 1. ಕಳೆದ ಸಾಲಿನ ನೇಮಕಾತಿಯ ರೋಸ್ಟರಿನ ಅಂತಿಮ ಬಿಂದು | 25 |
| **ವಿಷಯ:** | **ದೈಹಿಕ ಶಿಕ್ಷಕ ಶಿಕ್ಷಕರು, ಗ್ರೇಡ್-1** | 2. ಪ್ರಸಕ್ತ 2009-10ನೇ ಸಾಲಿನಲ್ಲಿ ನೇಮಕಾತಿಗೆ ಅಧಿಸೂಚಿಸಿರುವ ಹುದ್ದೆಗಳು | 2 |
| | | 3. ಪ್ರಸಕ್ತ ಸಾಲಿನ ನೇಮಕಾತಿಯ ರೋಸ್ಟರಿನ ಪ್ರಾರಂಭದ ಮತ್ತು ಅಂತಿಮ ಬಿಂದು | 26-27 |

| ವರ್ಗೀಕರಣ | ಸಾಮಾನ್ಯ ಅರ್ಹತೆ | | | ಪ್ರವರ್ಗ-1 | | | ಪ್ರವರ್ಗ-2ಎ | | | ಪ್ರವರ್ಗ-2ಬಿ | | | ಪ್ರವರ್ಗ-3ಎ | | | ಪ್ರವರ್ಗ-3ಬಿ | | | ಪರಿಶಿಷ್ಟ ಜಾತಿ | | | ಪರಿಶಿಷ್ಟ ಪಂಗಡ | | | ಒಟ್ಟು | | |
|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|
| | ಬ್ಯಾಕ್‌ಲಾಗ್ | ಪ್ರಸಕ್ತ ಸಾಲಿನ ಹುದ್ದೆಗಳು | ಒಟ್ಟು | ಬ್ಯಾಕ್‌ಲಾಗ್ | ಪ್ರಸಕ್ತ ಸಾಲಿನ ಹುದ್ದೆಗಳು | ಒಟ್ಟು | ಬ್ಯಾಕ್‌ಲಾಗ್ | ಪ್ರಸಕ್ತ ಸಾಲಿನ ಹುದ್ದೆಗಳು | ಒಟ್ಟು | ಬ್ಯಾಕ್‌ಲಾಗ್ | ಪ್ರಸಕ್ತ ಸಾಲಿನ ಹುದ್ದೆಗಳು | ಒಟ್ಟು | ಬ್ಯಾಕ್‌ಲಾಗ್ | ಪ್ರಸಕ್ತ ಸಾಲಿನ ಹುದ್ದೆಗಳು | ಒಟ್ಟು | ಬ್ಯಾಕ್‌ಲಾಗ್ | ಪ್ರಸಕ್ತ ಸಾಲಿನ ಹುದ್ದೆಗಳು | ಒಟ್ಟು | ಬ್ಯಾಕ್‌ಲಾಗ್ | ಪ್ರಸಕ್ತ ಸಾಲಿನ ಹುದ್ದೆಗಳು | ಒಟ್ಟು | ಬ್ಯಾಕ್‌ಲಾಗ್ | ಪ್ರಸಕ್ತ ಸಾಲಿನ ಹುದ್ದೆಗಳು | ಒಟ್ಟು | ಬ್ಯಾಕ್‌ಲಾಗ್ | ಪ್ರಸಕ್ತ ಸಾಲಿನ ಹುದ್ದೆಗಳು | ಒಟ್ಟು |
| ಮಹಿಳಾ ಅಭ್ಯರ್ಥಿ | | | | | | | | | | | | | | | | | | | | 1 | 1 | | | | | 1 | 1 |
| ಗ್ರಾಮೀಣ ಅಭ್ಯರ್ಥಿ | | 1 | 1 | | | | | | | | | | | | | | | | | | | | | | | 1 | 1 |
| ಮಾಜಿ ಸೈನಿಕ | | | | | | | | | | | | | | | | | | | | | | | | | | 0 | 0 |
| ಕನ್ನಡ ಮಾಧ್ಯಮ ಅಭ್ಯರ್ಥಿ | | | | | | | | | | | | | | | | | | | | | | | | | | 0 | 0 |
| ಯೋಜನೆಯಿಂದ ನಿರಾಶ್ರಿತರಾದವರ ಕುಟುಂಬದ ಅಭ್ಯರ್ಥಿ | | | | | | | | | | | | | | | | | | | | | | | | | | 0 | 0 |
| ಅಂಗವಿಕಲ ಅಭ್ಯರ್ಥಿ | | | | | | | | | | | | | | | | | | | | | | | | | | 0 | 0 |
| ಇತರರು | | | | | | | | | | | | | | | | | | | | | | | | | | 0 | 0 |
| **ಒಟ್ಟು** | | **1** | **1** | | | | | | | | | | | | | | | | | | **1** | **1** | | | | | **2** | **2** |

| ಜಿಲ್ಲೆ: | ದಕ್ಷಿಣ ಕನ್ನಡ | 1. ಕಳೆದ ಸಾಲಿನ ನೇಮಕಾತಿಯ ರೋಸ್ಟರಿನ ಅಂತಿಮ ಬಿಂದು | 275 |
|---|---|---|---|
| ವಿಷಯ: | ಭೌತವಿಜ್ಞಾನ ಶಿಕ್ಷಕರು-ಕನ್ನಡ ಮಾಧ್ಯಮ | 2. ಪ್ರಸಕ್ತ 2009-10ನೇ ಸಾಲಿನಲ್ಲಿ ನೇಮಕಾತಿಗೆ ಅಧಿಸೂಚಿಸಿರುವ ಹುದ್ದೆಗಳು | 23 |
| | | 3. ಪ್ರಸಕ್ತ ಸಾಲಿನ ನೇಮಕಾತಿಯ ರೋಸ್ಟರಿನ ಪ್ರಾರಂಭದ ಮತ್ತು ಅಂತಿಮ ಬಿಂದು | 276-298 |

| ವರ್ಗೀಕರಣ | ಸಾಮಾನ್ಯ ಅರ್ಹತೆ | | | ಪ್ರವರ್ಗ-1 | | | ಪ್ರವರ್ಗ-2ಎ | | | ಪ್ರವರ್ಗ-2ಬಿ | | | ಪ್ರವರ್ಗ-3ಎ | | | ಪ್ರವರ್ಗ-3ಬಿ | | | ಪರಿಶಿಷ್ಟ ಜಾತಿ | | | ಪರಿಶಿಷ್ಟ ಪಂಗಡ | | | ಒಟ್ಟು | | |
|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|
| | ಬ್ಯಾಕ್‌ಲಾಗ್ | ಪ್ರಸಕ್ತ ಸಾಲಿನ ಹುದ್ದೆಗಳು (ಹೊಸ) | ಒಟ್ಟು | ಬ್ಯಾಕ್‌ಲಾಗ್ | ಪ್ರಸಕ್ತ ಸಾಲಿನ ಹುದ್ದೆಗಳು (ಹೊಸ) | ಒಟ್ಟು | ಬ್ಯಾಕ್‌ಲಾಗ್ | ಪ್ರಸಕ್ತ ಸಾಲಿನ ಹುದ್ದೆಗಳು (ಹೊಸ) | ಒಟ್ಟು | ಬ್ಯಾಕ್‌ಲಾಗ್ | ಪ್ರಸಕ್ತ ಸಾಲಿನ ಹುದ್ದೆಗಳು (ಹೊಸ) | ಒಟ್ಟು | ಬ್ಯಾಕ್‌ಲಾಗ್ | ಪ್ರಸಕ್ತ ಸಾಲಿನ ಹುದ್ದೆಗಳು (ಹೊಸ) | ಒಟ್ಟು | ಬ್ಯಾಕ್‌ಲಾಗ್ | ಪ್ರಸಕ್ತ ಸಾಲಿನ ಹುದ್ದೆಗಳು (ಹೊಸ) | ಒಟ್ಟು | ಬ್ಯಾಕ್‌ಲಾಗ್ | ಪ್ರಸಕ್ತ ಸಾಲಿನ ಹುದ್ದೆಗಳು (ಹೊಸ) | ಒಟ್ಟು | ಬ್ಯಾಕ್‌ಲಾಗ್ | ಪ್ರಸಕ್ತ ಸಾಲಿನ ಹುದ್ದೆಗಳು (ಹೊಸ) | ಒಟ್ಟು | ಬ್ಯಾಕ್‌ಲಾಗ್ | ಪ್ರಸಕ್ತ ಸಾಲಿನ ಹುದ್ದೆಗಳು (ಹೊಸ) | ಒಟ್ಟು |
| ಮಹಿಳಾ ಅಭ್ಯರ್ಥಿ | | 4 | 4 | | | | | 2 | 2 | | | | | | | | | | | 1 | 1 | | | | | 7 | 7 |
| ಗ್ರಾಮೀಣ ಅಭ್ಯರ್ಥಿ | | 3 | 3 | | | | | 1 | 1 | | | | | | | | | | | 1 | 1 | | | | | 5 | 5 |
| ಮಾಜಿ ಸೈನಿಕ | | 1 | 1 | | | | | | | | | | | | | | | | | | | | | | | 1 | 1 |
| ಕನ್ನಡ ಮಾಧ್ಯಮ ಅಭ್ಯರ್ಥಿ | | | | | | | | 1 | 1 | | | | | | | | | | | 1 | 1 | | | | | 2 | 2 |
| ಯೋಜನೆಯಿಂದ ನಿರಾಶ್ರಿತರಾದವರ ಕುಟುಂಬದ ಅಭ್ಯರ್ಥಿ | | | | | | | | | | | | | | | | | | | | | | | | | | 0 | 0 |
| ಅಂಗವಿಕಲ ಅಭ್ಯರ್ಥಿ | | 2 | 2 | | | | | | | | | | | | | | | | | | | | | | | 2 | 2 |
| ಇತರರು | | 2 | 2 | | 1 | 1 | | | | | 1 | 1 | | 1 | 1 | | 1 | 1 | | | | | | | | 6 | 6 |
| **ಒಟ್ಟು** | | **12** | **12** | | **1** | **1** | | **4** | **4** | | **1** | **1** | | **1** | **1** | | **1** | **1** | | **3** | **3** | | | | | **23** | **23** |

| ಜಿಲ್ಲೆ: | ಉಡುಪಿ | 1. ಕಳೆದ ಸಾಲಿನ ನೇಮಕಾತಿಯ ರೋಸ್ಟರಿನ ಅಂತಿಮ ಬಿಂದು | 31 |
|---|---|---|---|
| ವಿಷಯ: | ಕಲಾ ಶಿಕ್ಷಕರು -ಕನ್ನಡ ಮಾಧ್ಯಮ | 2. ಪ್ರಸಕ್ತ 2009-10ನೇ ಸಾಲಿನಲ್ಲಿ ನೇಮಕಾತಿಗೆ ಅಧಿಸೂಚಿಸಿರುವ ಹುದ್ದೆಗಳು | 12 |
| | | 3. ಪ್ರಸಕ್ತ ಸಾಲಿನ ನೇಮಕಾತಿಯ ರೋಸ್ಟರಿನ ಪ್ರಾರಂಭದ ಮತ್ತು ಅಂತಿಮ ಬಿಂದು | 32-43 |

| ವರ್ಗೀಕರಣ | ಸಾಮಾನ್ಯ ಅರ್ಹತೆ | | | ಪ್ರವರ್ಗ-1 | | | ಪ್ರವರ್ಗ-2ಎ | | | ಪ್ರವರ್ಗ-2ಬಿ | | | ಪ್ರವರ್ಗ-3ಎ | | | ಪ್ರವರ್ಗ-3ಬಿ | | | ಪರಿಶಿಷ್ಟ ಜಾತಿ | | | ಪರಿಶಿಷ್ಟ ಪಂಗಡ | | | ಒಟ್ಟು | | |
|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|
| | ಬ್ಯಾಕ್‌ಲಾಗ್ | ಪ್ರಸಕ್ತ ಸಾಲಿನ ಅಧಿಸೂಚಿತ ಹುದ್ದೆಗಳು | ಒಟ್ಟು | ಬ್ಯಾಕ್‌ಲಾಗ್ | ಪ್ರಸಕ್ತ ಸಾಲಿನ ಅಧಿಸೂಚಿತ ಹುದ್ದೆಗಳು | ಒಟ್ಟು | ಬ್ಯಾಕ್‌ಲಾಗ್ | ಪ್ರಸಕ್ತ ಸಾಲಿನ ಅಧಿಸೂಚಿತ ಹುದ್ದೆಗಳು | ಒಟ್ಟು | ಬ್ಯಾಕ್‌ಲಾಗ್ | ಪ್ರಸಕ್ತ ಸಾಲಿನ ಅಧಿಸೂಚಿತ ಹುದ್ದೆಗಳು | ಒಟ್ಟು | ಬ್ಯಾಕ್‌ಲಾಗ್ | ಪ್ರಸಕ್ತ ಸಾಲಿನ ಅಧಿಸೂಚಿತ ಹುದ್ದೆಗಳು | ಒಟ್ಟು | ಬ್ಯಾಕ್‌ಲಾಗ್ | ಪ್ರಸಕ್ತ ಸಾಲಿನ ಅಧಿಸೂಚಿತ ಹುದ್ದೆಗಳು | ಒಟ್ಟು | ಬ್ಯಾಕ್‌ಲಾಗ್ | ಪ್ರಸಕ್ತ ಸಾಲಿನ ಅಧಿಸೂಚಿತ ಹುದ್ದೆಗಳು | ಒಟ್ಟು | ಬ್ಯಾಕ್‌ಲಾಗ್ | ಪ್ರಸಕ್ತ ಸಾಲಿನ ಅಧಿಸೂಚಿತ ಹುದ್ದೆಗಳು | ಒಟ್ಟು | ಬ್ಯಾಕ್‌ಲಾಗ್ | ಪ್ರಸಕ್ತ ಸಾಲಿನ ಅಧಿಸೂಚಿತ ಹುದ್ದೆಗಳು | ಒಟ್ಟು |
| ಮಹಿಳಾ ಅಭ್ಯರ್ಥಿ | | 1 | 1 | | | | | | | | 1 | 1 | | | | | 1 | 1 | | | | | 1 | 1 | | 4 | 4 |
| ಗ್ರಾಮೀಣ ಅಭ್ಯರ್ಥಿ | | 1 | 1 | | | | | 1 | 1 | | | | | | | | | | | 1 | 1 | | | | | 3 | 3 |
| ಮಾಜಿ ಸೈನಿಕ | | 1 | 1 | | | | | | | | | | | | | | | | | | | | | | | 1 | 1 |
| ಕನ್ನಡ ಮಾಧ್ಯಮ ಅಭ್ಯರ್ಥಿ | | | | | | | | | | | | | | | | | | | | | | | | | | 0 | 0 |
| ಯೋಜನೆಯಿಂದ ನಿರಾಶ್ರಿತರಾದವರ ಕುಟುಂಬದ ಅಭ್ಯರ್ಥಿ | | 1 | 1 | | | | | | | | | | | | | | | | | | | | | | | 1 | 1 |
| ಅಂಗವಿಕಲ ಅಭ್ಯರ್ಥಿ | | 1 | 1 | | | | | | | | | | | | | | | | | | | | | | | 1 | 1 |
| ಇತರರು | | 1 | 1 | | | | | | | | | | | | | | | | | 1 | 1 | | | | | 2 | 2 |
| **ಒಟ್ಟು** | | **6** | **6** | | | | | **1** | **1** | | **1** | **1** | | | | | **1** | **1** | | **2** | **2** | | **1** | **1** | | **12** | **12** |

| ಜಿಲ್ಲೆ: | ಉಡುಪಿ | 1. ಕಳೆದ ಸಾಲಿನ ನೇಮಕಾತಿಯ ರೋಸ್ಟರಿನ ಅಂತಿಮ ಬಿಂದು (26 ರಿಂದ 34) | 125 |
|---|---|---|---|
| ವಿಷಯ: | ಭೌತವಿಜ್ಞಾನ ಶಿಕ್ಷಕರು(ಕನ್ನಡ ಮಾಧ್ಯಮ) | 2. ಪ್ರಸಕ್ತ 2009-10ನೇ ಸಾಲಿನಲ್ಲಿ ನೇಮಕಾತಿಗೆ ಅಧಿಸೂಚಿಸಿರುವ ಹುದ್ದೆಗಳು | 9 |
| | | 3. ಪ್ರಸಕ್ತ ಸಾಲಿನ ನೇಮಕಾತಿಯ ರೋಸ್ಟರಿನ ಪ್ರಾರಂಭದ ಮತ್ತು ಅಂತಿಮ ಬಿಂದು | 126-134 (26 ರಿಂದ 34) |

| ವರ್ಗೀಕರಣ | ಸಾಮಾನ್ಯ ಅರ್ಹತೆ | | | ಪ್ರವರ್ಗ-1 | | | ಪ್ರವರ್ಗ-2ಎ | | | ಪ್ರವರ್ಗ-2ಬಿ | | | ಪ್ರವರ್ಗ-3ಎ | | | ಪ್ರವರ್ಗ-3ಬಿ | | | ಪರಿಶಿಷ್ಟ ಜಾತಿ | | | ಪರಿಶಿಷ್ಟ ಪಂಗಡ | | | | ಒಟ್ಟು | |
|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|
| | ಬ್ಯಾಕ್‌ಲಾಗ್ | ಪ್ರಸಕ್ತ ಸಾಲಿನ ಅಧಿಸೂಚಿತ ಹುದ್ದೆಗಳು | ಒಟ್ಟು | ಬ್ಯಾಕ್‌ಲಾಗ್ | ಪ್ರಸಕ್ತ ಸಾಲಿನ ಅಧಿಸೂಚಿತ ಹುದ್ದೆಗಳು | ಒಟ್ಟು | ಬ್ಯಾಕ್‌ಲಾಗ್ | ಪ್ರಸಕ್ತ ಸಾಲಿನ ಅಧಿಸೂಚಿತ ಹುದ್ದೆಗಳು | ಒಟ್ಟು | ಬ್ಯಾಕ್‌ಲಾಗ್ | ಪ್ರಸಕ್ತ ಸಾಲಿನ ಅಧಿಸೂಚಿತ ಹುದ್ದೆಗಳು | ಒಟ್ಟು | ಬ್ಯಾಕ್‌ಲಾಗ್ | ಪ್ರಸಕ್ತ ಸಾಲಿನ ಅಧಿಸೂಚಿತ ಹುದ್ದೆಗಳು | ಒಟ್ಟು | ಬ್ಯಾಕ್‌ಲಾಗ್ | ಪ್ರಸಕ್ತ ಸಾಲಿನ ಅಧಿಸೂಚಿತ ಹುದ್ದೆಗಳು | ಒಟ್ಟು | ಬ್ಯಾಕ್‌ಲಾಗ್ | ಪ್ರಸಕ್ತ ಸಾಲಿನ ಅಧಿಸೂಚಿತ ಹುದ್ದೆಗಳು | ಒಟ್ಟು | ಬ್ಯಾಕ್‌ಲಾಗ್ | ಪ್ರಸಕ್ತ ಸಾಲಿನ ಅಧಿಸೂಚಿತ ಹುದ್ದೆಗಳು | ಒಟ್ಟು | ಬ್ಯಾಕ್‌ಲಾಗ್ | ಪ್ರಸಕ್ತ ಸಾಲಿನ ಅಧಿಸೂಚಿತ ಹುದ್ದೆಗಳು | ಒಟ್ಟು |
| ಮಹಿಳಾ ಅಭ್ಯರ್ಥಿ | | 1 | 1 | | | | | | | | | | | | | | | | | | | | | | | 1 | 1 |
| ಗ್ರಾಮೀಣ ಅಭ್ಯರ್ಥಿ | | 2 | 2 | | 1 | 1 | | | | | | | | | | | | | | | | | | | | 3 | 3 |

| ಮಾಜಿ ಸೈನಿಕ |  |  |  |  |  |  | 1 | 1 |  |  |  |  |  |  |  |  |  |  | 1 | 1 |  |  |  |  | 2 | 2 |
|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|
| ಕನ್ನಡ ಮಾಧ್ಯಮ ಅಭ್ಯರ್ಥಿ |  |  |  |  |  |  |  |  |  |  |  |  |  |  |  |  |  |  |  |  |  |  |  |  | 0 | 0 |
| ಯೋಜನೆಯಿಂದ ನಿರಾಶ್ರಿತರಾದವರ ಕುಟುಂಬದ ಅಭ್ಯರ್ಥಿ |  |  |  |  |  |  |  |  |  |  |  |  |  |  |  |  |  |  |  |  |  |  |  |  | 0 | 0 |
| ಅಂಗವಿಕಲ ಅಭ್ಯರ್ಥಿ |  |  |  |  |  |  |  |  |  |  |  |  |  |  |  |  |  |  |  |  |  |  |  |  |  |  |
| ಇತರರು |  | 2 | 2 |  |  |  |  |  |  |  |  |  |  |  |  |  |  |  |  | 1 | 1 |  |  |  |  | 3 | 3 |
| **ಒಟ್ಟು** |  | **5** | **5** |  | **1** | **1** |  | **1** | **1** |  |  |  |  |  |  |  |  |  |  | **2** | **2** |  |  |  |  | **9** | **9** |

| ಜಿಲ್ಲೆ: | ಉಡುಪಿ | 1. ಕಳೆದ ಸಾಲಿನ ನೇಮಕಾತಿಯ ರೋಸ್ಟರಿನ ಅಂತಿಮ ಬಿಂದು | 22 |
|---|---|---|---|
| ವಿಷಯ: | ಜೀವವಿಜ್ಞಾನ ಶಿಕ್ಷಕರು-ಕನ್ನಡ ಮಾಧ್ಯಮ | 2. ಪ್ರಸಕ್ತ 2009-10ನೇ ಸಾಲಿನಲ್ಲಿ ನೇಮಕಾತಿಗೆ ಅಧಿಸೂಚಿಸಿರುವ ಹುದ್ದೆಗಳು | 6 |
|  |  | 3. ಪ್ರಸಕ್ತ ಸಾಲಿನ ನೇಮಕಾತಿಯ ರೋಸ್ಟರಿನ ಪ್ರಾರಂಭದ ಮತ್ತು ಅಂತಿಮ ಬಿಂದು | 23-28 |

| ವರ್ಗೀಕರಣ | ಸಾಮಾನ್ಯ ಅರ್ಹತೆ |  |  | ಪ್ರವರ್ಗ-1 |  |  | ಪ್ರವರ್ಗ-2ಎ |  |  | ಪ್ರವರ್ಗ-2ಬಿ |  |  | ಪ್ರವರ್ಗ-3ಎ |  |  | ಪ್ರವರ್ಗ-3ಬಿ |  |  | ಪರಿಶಿಷ್ಟ ಜಾತಿ |  |  | ಪರಿಶಿಷ್ಟ ಪಂಗಡ |  |  |  | ಒಟ್ಟು |  |
|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|
|  | ಬ್ಯಾಕ್‌ಲಾಗ್ | ಪ್ರಸಕ್ತ ಸಾಲಿನ ಹುದ್ದೆಗಳು | ಒಟ್ಟು | ಬ್ಯಾಕ್‌ಲಾಗ್ | ಪ್ರಸಕ್ತ ಸಾಲಿನ ಹುದ್ದೆಗಳು | ಒಟ್ಟು | ಬ್ಯಾಕ್‌ಲಾಗ್ | ಪ್ರಸಕ್ತ ಸಾಲಿನ ಹುದ್ದೆಗಳು | ಒಟ್ಟು | ಬ್ಯಾಕ್‌ಲಾಗ್ | ಪ್ರಸಕ್ತ ಸಾಲಿನ ಹುದ್ದೆಗಳು | ಒಟ್ಟು | ಬ್ಯಾಕ್‌ಲಾಗ್ | ಪ್ರಸಕ್ತ ಸಾಲಿನ ಹುದ್ದೆಗಳು | ಒಟ್ಟು | ಬ್ಯಾಕ್‌ಲಾಗ್ | ಪ್ರಸಕ್ತ ಸಾಲಿನ ಹುದ್ದೆಗಳು | ಒಟ್ಟು | ಬ್ಯಾಕ್‌ಲಾಗ್ | ಪ್ರಸಕ್ತ ಸಾಲಿನ ಹುದ್ದೆಗಳು | ಒಟ್ಟು | ಬ್ಯಾಕ್‌ಲಾಗ್ | ಪ್ರಸಕ್ತ ಸಾಲಿನ ಹುದ್ದೆಗಳು | ಒಟ್ಟು | ಬ್ಯಾಕ್‌ಲಾಗ್ | ಪ್ರಸಕ್ತ ಸಾಲಿನ ಹುದ್ದೆಗಳು | ಒಟ್ಟು |
| ಮಹಿಳಾ ಅಭ್ಯರ್ಥಿ |  | 1 | 1 |  |  |  |  |  |  |  |  |  |  |  |  |  |  |  |  | 1 | 1 |  |  |  |  | 2 | 2 |
| ಗ್ರಾಮೀಣ ಅಭ್ಯರ್ಥಿ |  | 1 | 1 |  |  |  |  |  |  |  |  |  |  |  |  |  |  |  |  |  |  |  |  |  |  | 1 | 1 |
| ಮಾಜಿ ಸೈನಿಕ |  |  |  |  |  |  |  |  |  |  |  |  |  |  |  |  |  |  |  |  |  |  |  |  |  | 0 | 0 |
| ಕನ್ನಡ ಮಾಧ್ಯಮ ಅಭ್ಯರ್ಥಿ |  | 1 | 1 |  |  |  |  |  |  |  |  |  |  |  |  |  |  |  |  |  |  |  |  |  |  | 1 | 1 |
| ಯೋಜನೆಯಿಂದ ನಿರಾಶ್ರಿತರಾದವರ ಕುಟುಂಬದ ಅಭ್ಯರ್ಥಿ |  |  |  |  |  |  |  |  |  |  |  |  |  |  |  |  |  |  |  |  |  |  |  |  |  | 0 | 0 |

| | | | | | | | | | | | | | | | | | | | | | | | | | | | |
|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|
| ಅಂಗವಿಕಲ ಅಭ್ಯರ್ಥಿ | | | | | | | | | | | | | | | | | | | | | | | | | | | |
| ಇತರರು | | | | | | | | 1 | 1 | | | | | | | | | | | 1 | 1 | | | | | 2 | 2 |
| **ಒಟ್ಟು** | | **3** | **3** | | | | | **1** | **1** | | | | | | | | | | | **2** | **2** | | | | | **6** | **6** |

| ಜಿಲ್ಲೆ: | ಉಡುಪಿ | 1. ಕಳೆದ ಸಾಲಿನ ನೇಮಕಾತಿಯ ರೋಸ್ಟರಿನ ಅಂತಿಮ ಬಿಂದು | 14 |
|---|---|---|---|
| ವಿಷಯ: | ಕನ್ನಡ ಭಾಷಾ ಶಿಕ್ಷಕರು | 2. ಪ್ರಸಕ್ತ 2009-10ನೇ ಸಾಲಿನಲ್ಲಿ ನೇಮಕಾತಿಗೆ ಅಧಿಸೂಚಿಸಿರುವ ಹುದ್ದೆಗಳು | 4 |
| | | 3. ಪ್ರಸಕ್ತ ಸಾಲಿನ ನೇಮಕಾತಿಯ ರೋಸ್ಟರಿನ ಪ್ರಾರಂಭದ ಮತ್ತು ಅಂತಿಮ ಬಿಂದು | 15-18 |

| ವರ್ಗೀಕರಣ | ಸಾಮಾನ್ಯ ಅರ್ಹತೆ | | | ಪ್ರವರ್ಗ-1 | | | ಪ್ರವರ್ಗ-2ಎ | | | ಪ್ರವರ್ಗ-2ಬಿ | | | ಪ್ರವರ್ಗ-3ಎ | | | ಪ್ರವರ್ಗ-3ಬಿ | | | ಪರಿಶಿಷ್ಟ ಜಾತಿ | | | ಪರಿಶಿಷ್ಟ ಪಂಗಡ | | | | ಒಟ್ಟು | |
|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|
| | ಬ್ಯಾಕ್‌ಲಾಗ್ | ಪ್ರಸಕ್ತ ಸಾಲಿನ ಅಧಿಸೂಚಿತ ಹುದ್ದೆಗಳು | ಒಟ್ಟು | ಬ್ಯಾಕ್‌ಲಾಗ್ | ಪ್ರಸಕ್ತ ಸಾಲಿನ ಅಧಿಸೂಚಿತ ಹುದ್ದೆಗಳು | ಒಟ್ಟು | ಬ್ಯಾಕ್‌ಲಾಗ್ | ಪ್ರಸಕ್ತ ಸಾಲಿನ ಅಧಿಸೂಚಿತ ಹುದ್ದೆಗಳು | ಒಟ್ಟು | ಬ್ಯಾಕ್‌ಲಾಗ್ | ಪ್ರಸಕ್ತ ಸಾಲಿನ ಅಧಿಸೂಚಿತ ಹುದ್ದೆಗಳು | ಒಟ್ಟು | ಬ್ಯಾಕ್‌ಲಾಗ್ | ಪ್ರಸಕ್ತ ಸಾಲಿನ ಅಧಿಸೂಚಿತ ಹುದ್ದೆಗಳು | ಒಟ್ಟು | ಬ್ಯಾಕ್‌ಲಾಗ್ | ಪ್ರಸಕ್ತ ಸಾಲಿನ ಅಧಿಸೂಚಿತ ಹುದ್ದೆಗಳು | ಒಟ್ಟು | ಬ್ಯಾಕ್‌ಲಾಗ್ | ಪ್ರಸಕ್ತ ಸಾಲಿನ ಅಧಿಸೂಚಿತ ಹುದ್ದೆಗಳು | ಒಟ್ಟು | ಬ್ಯಾಕ್‌ಲಾಗ್ | ಪ್ರಸಕ್ತ ಸಾಲಿನ ಅಧಿಸೂಚಿತ ಹುದ್ದೆಗಳು | ಒಟ್ಟು | ಬ್ಯಾಕ್‌ಲಾಗ್ | ಪ್ರಸಕ್ತ ಸಾಲಿನ ಅಧಿಸೂಚಿತ ಹುದ್ದೆಗಳು | ಒಟ್ಟು |
| ಮಹಿಳಾ ಅಭ್ಯರ್ಥಿ | | 1 | 1 | | | | | | | | | | | | | | | | | | | | | | | 1 | 1 |
| ಗ್ರಾಮೀಣ ಅಭ್ಯರ್ಥಿ | | 1 | 1 | | | | | | | | | | | | | | | | | 1 | 1 | | | | | 2 | 2 |
| ಮಾಜಿ ಸೈನಿಕ | | | | | | | | | | | | | | | | | | | | | | | | | | 0 | 0 |
| ಕನ್ನಡ ಮಾಧ್ಯಮ ಅಭ್ಯರ್ಥಿ | | | | | | | | | | | | | | | | | | | | | | | | | | 0 | 0 |
| ಯೋಜನೆಯಿಂದ ನಿರಾಶ್ರಿತರಾದವರ ಕುಟುಂಬದ ಅಭ್ಯರ್ಥಿ | | | | | | | | | | | | | | | | | | | | | | | | | | 0 | 0 |
| ಅಂಗವಿಕಲ ಅಭ್ಯರ್ಥಿ | | | | | | | | | | | | | | | | | | | | | | | | | | 0 | 0 |
| ಇತರರು | | | | | | | | | | | | | | 1 | 1 | | | | | | | | | | | 1 | 1 |
| **ಒಟ್ಟು** | | **2** | **2** | | | | | | | | | | | **1** | **1** | | | | | **1** | **1** | | | | | **4** | **4** |

| ಜಿಲ್ಲೆ: | ಉಡುಪಿ | 1. ಕಳೆದ ಸಾಲಿನ ನೇಮಕಾತಿಯ ರೋಸ್ಟರಿನ ಅಂತಿಮ ಬಿಂದು | 13 |
|---|---|---|---|
| ವಿಷಯ: | ಆಂಗ್ಲ ಭಾಷಾ ಶಿಕ್ಷಕರು | 2. ಪ್ರಸಕ್ತ 2009-10ನೇ ಸಾಲಿನಲ್ಲಿ ನೇಮಕಾತಿಗೆ ಅಧಿಸೂಚಿಸಿರುವ ಹುದ್ದೆಗಳು | 20 |
| | | 3. ಪ್ರಸಕ್ತ ಸಾಲಿನ ನೇಮಕಾತಿಯ ರೋಸ್ಟರಿನ ಪ್ರಾರಂಭದ ಮತ್ತು ಅಂತಿಮ ಬಿಂದು | 14-33 |

| ವರ್ಗೀಕರಣ | ಸಾಮಾನ್ಯ ಅರ್ಹತೆ | | | ಪ್ರವರ್ಗ-1 | | | ಪ್ರವರ್ಗ-2ಎ | | | ಪ್ರವರ್ಗ-2ಬಿ | | | ಪ್ರವರ್ಗ-3ಎ | | | ಪ್ರವರ್ಗ-3ಬಿ | | | ಪರಿಶಿಷ್ಟ ಜಾತಿ | | | ಪರಿಶಿಷ್ಟ ಪಂಗಡ | | | | ಒಟ್ಟು | |
|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|
| | ಬ್ಯಾಕ್‌ಲಾಗ್ | ಪ್ರಸಕ್ತ ಸಾಲಿನ ಅಧಿಸೂಚಿತ ಹುದ್ದೆಗಳು | ಒಟ್ಟು | ಬ್ಯಾಕ್‌ಲಾಗ್ | ಪ್ರಸಕ್ತ ಸಾಲಿನ ಅಧಿಸೂಚಿತ ಹುದ್ದೆಗಳು | ಒಟ್ಟು | ಬ್ಯಾಕ್‌ಲಾಗ್ | ಪ್ರಸಕ್ತ ಸಾಲಿನ ಅಧಿಸೂಚಿತ ಹುದ್ದೆಗಳು | ಒಟ್ಟು | ಬ್ಯಾಕ್‌ಲಾಗ್ | ಪ್ರಸಕ್ತ ಸಾಲಿನ ಅಧಿಸೂಚಿತ ಹುದ್ದೆಗಳು | ಒಟ್ಟು | ಬ್ಯಾಕ್‌ಲಾಗ್ | ಪ್ರಸಕ್ತ ಸಾಲಿನ ಅಧಿಸೂಚಿತ ಹುದ್ದೆಗಳು | ಒಟ್ಟು | ಬ್ಯಾಕ್‌ಲಾಗ್ | ಪ್ರಸಕ್ತ ಸಾಲಿನ ಅಧಿಸೂಚಿತ ಹುದ್ದೆಗಳು | ಒಟ್ಟು | ಬ್ಯಾಕ್‌ಲಾಗ್ | ಪ್ರಸಕ್ತ ಸಾಲಿನ ಅಧಿಸೂಚಿತ ಹುದ್ದೆಗಳು | ಒಟ್ಟು | ಬ್ಯಾಕ್‌ಲಾಗ್ | ಪ್ರಸಕ್ತ ಸಾಲಿನ ಅಧಿಸೂಚಿತ ಹುದ್ದೆಗಳು | ಒಟ್ಟು | ಬ್ಯಾಕ್‌ಲಾಗ್ | ಪ್ರಸಕ್ತ ಸಾಲಿನ ಅಧಿಸೂಚಿತ ಹುದ್ದೆಗಳು | ಒಟ್ಟು |
| ಮಹಿಳಾ ಅಭ್ಯರ್ಥಿ | | 3 | 3 | | 1 | 1 | | 1 | 1 | | | | | | | | | | | 1 | 1 | | | | | 6 | 6 |
| ಗ್ರಾಮೀಣ ಅಭ್ಯರ್ಥಿ | | 3 | 3 | | | | | 1 | 1 | | | | | | | | | | | 2 | 2 | | | | | 6 | 6 |
| ಮಾಜಿ ಸೈನಿಕ | | 1 | 1 | | | | | | | | | | | | | | | | | | | | | | | 1 | 1 |
| ಕನ್ನಡ ಮಾಧ್ಯಮ ಅಭ್ಯರ್ಥಿ | | 1 | 1 | | | | | | | | | | | | | | | | | | | | | | | 1 | 1 |
| ಯೋಜನೆಯಿಂದ ನಿರಾಶ್ರಿತರಾದವರ ಕುಟುಂಬದ ಅಭ್ಯರ್ಥಿ | | | | | | | | | | | | | | | | | | | | | | | | | | 0 | 0 |
| ಅಂಗವಿಕಲ ಅಭ್ಯರ್ಥಿ | | | | | | | | | | | | | | | | | | | | | | | | | | | |
| ಇತರರು | | 2 | 2 | | | | | 1 | 1 | | | | | 1 | 1 | | 1 | 1 | | 1 | 1 | | | | | 6 | 6 |
| **ಒಟ್ಟು** | | **10** | **10** | | **1** | **1** | | **3** | **3** | | | | | **1** | **1** | | **1** | **1** | | **4** | **4** | | | | | **20** | **20** |

| ಜಿಲ್ಲೆ: | ಉಡುಪಿ | 1. ಕಳೆದ ಸಾಲಿನ ನೇಮಕಾತಿಯ ರೋಸ್ಟರಿನ ಅಂತಿಮ ಬಿಂದು | 39 |
|---|---|---|---|
| ವಿಷಯ: | ಹಿಂದಿ ಭಾಷಾ ಶಿಕ್ಷಕರು | 2. ಪ್ರಸಕ್ತ 2009-10ನೇ ಸಾಲಿನಲ್ಲಿ ನೇಮಕಾತಿಗೆ ಅಧಿಸೂಚಿಸಿರುವ ಹುದ್ದೆಗಳು | 10 |
| | | 3. ಪ್ರಸಕ್ತ ಸಾಲಿನ ನೇಮಕಾತಿಯ ರೋಸ್ಟರಿನ ಪ್ರಾರಂಭದ ಮತ್ತು ಅಂತಿಮ ಬಿಂದು | 40-49 |

| ವರ್ಗೀಕರಣ | ಸಾಮಾನ್ಯ ಅರ್ಹತೆ | | | ಪ್ರವರ್ಗ-1 | | | ಪ್ರವರ್ಗ-2ಎ | | | ಪ್ರವರ್ಗ-2ಬಿ | | | ಪ್ರವರ್ಗ-3ಎ | | | ಪ್ರವರ್ಗ-3ಬಿ | | | ಪರಿಶಿಷ್ಟ ಜಾತಿ | | | ಪರಿಶಿಷ್ಟ ಪಂಗಡ | | | | ಒಟ್ಟು | |
|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|
| | ಬ್ಯಾಕ್‌ಲಾಗ್ | ಪ್ರಸಕ್ತ ಸಾಲಿನ ಅಧಿಸೂಚಿತ ಹುದ್ದೆಗಳು | ಒಟ್ಟು | ಬ್ಯಾಕ್‌ಲಾಗ್ | ಪ್ರಸಕ್ತ ಸಾಲಿನ ಅಧಿಸೂಚಿತ ಹುದ್ದೆಗಳು | ಒಟ್ಟು | ಬ್ಯಾಕ್‌ಲಾಗ್ | ಪ್ರಸಕ್ತ ಸಾಲಿನ ಅಧಿಸೂಚಿತ ಹುದ್ದೆಗಳು | ಒಟ್ಟು | ಬ್ಯಾಕ್‌ಲಾಗ್ | ಪ್ರಸಕ್ತ ಸಾಲಿನ ಅಧಿಸೂಚಿತ ಹುದ್ದೆಗಳು | ಒಟ್ಟು | ಬ್ಯಾಕ್‌ಲಾಗ್ | ಪ್ರಸಕ್ತ ಸಾಲಿನ ಅಧಿಸೂಚಿತ ಹುದ್ದೆಗಳು | ಒಟ್ಟು | ಬ್ಯಾಕ್‌ಲಾಗ್ | ಪ್ರಸಕ್ತ ಸಾಲಿನ ಅಧಿಸೂಚಿತ ಹುದ್ದೆಗಳು | ಒಟ್ಟು | ಬ್ಯಾಕ್‌ಲಾಗ್ | ಪ್ರಸಕ್ತ ಸಾಲಿನ ಅಧಿಸೂಚಿತ ಹುದ್ದೆಗಳು | ಒಟ್ಟು | ಬ್ಯಾಕ್‌ಲಾಗ್ | ಪ್ರಸಕ್ತ ಸಾಲಿನ ಅಧಿಸೂಚಿತ ಹುದ್ದೆಗಳು | ಒಟ್ಟು | ಬ್ಯಾಕ್‌ಲಾಗ್ | ಪ್ರಸಕ್ತ ಸಾಲಿನ ಅಧಿಸೂಚಿತ ಹುದ್ದೆಗಳು | ಒಟ್ಟು |
| ಮಹಿಳಾ ಅಭ್ಯರ್ಥಿ | | 1 | 1 | | | | | | | | | | | 1 | 1 | | 1 | 1 | | 1 | 1 | | | | | 4 | 4 |
| ಗ್ರಾಮೀಣ ಅಭ್ಯರ್ಥಿ | | 1 | 1 | | | | | | | | | | | | | | | | | | | | | | | 1 | 1 |
| ಮಾಜಿ ಸೈನಿಕ | | 1 | 1 | | | | | | | | | | | | | | | | | | | | | | | 1 | 1 |
| ಕನ್ನಡ ಮಾಧ್ಯಮ ಅಭ್ಯರ್ಥಿ | | | | | | | | | | | | | | | | | | | | | | | | | | 0 | 0 |
| ಯೋಜನೆಯಿಂದ ನಿರಾಶ್ರಿತರಾದವರ ಕುಟುಂಬದ ಅಭ್ಯರ್ಥಿ | | | | | | | | | | | | | | | | | | | | | | | | | | 0 | 0 |
| ಅಂಗವಿಕಲ ಅಭ್ಯರ್ಥಿ | | 1 | 1 | | | | | | | | | | | | | | | | | | | | | | | 1 | 1 |
| ಇತರರು | | 1 | 1 | | | | | 1 | 1 | | | | | | | | | | | 1 | 1 | | | | | 3 | 3 |
| **ಒಟ್ಟು** | | **5** | **5** | | | | | **1** | **1** | | | | | **1** | **1** | | **1** | **1** | | **2** | **2** | | | | | **10** | **10** |

| ಜಿಲ್ಲೆ: | ಉಡುಪಿ | 1. ಕಳೆದ ಸಾಲಿನ ನೇಮಕಾತಿಯ ರೋಸ್ಟರಿನ ಅಂತಿಮ ಬಿಂದು | 19 |
|---|---|---|---|
| ವಿಷಯ: | ದೈಹಿಕ ಶಿಕ್ಷಣ ಶಿಕ್ಷಕ-ಗ್ರೇಡ್-1 | 2. ಪ್ರಸಕ್ತ 2009-10ನೇ ಸಾಲಿನಲ್ಲಿ ನೇಮಕಾತಿಗೆ ಅಧಿಸೂಚಿಸಿರುವ ಹುದ್ದೆಗಳು | 4 |
| | | 3. ಪ್ರಸಕ್ತ ಸಾಲಿನ ನೇಮಕಾತಿಯ ರೋಸ್ಟರಿನ ಪ್ರಾರಂಭದ ಮತ್ತು ಅಂತಿಮ ಬಿಂದು | 20-23 |

| ವರ್ಗೀಕರಣ | ಸಾಮಾನ್ಯ ಅರ್ಹತೆ | | | ಪ್ರವರ್ಗ-1 | | | ಪ್ರವರ್ಗ-2ಎ | | | ಪ್ರವರ್ಗ-2ಬಿ | | | ಪ್ರವರ್ಗ-3ಎ | | | ಪ್ರವರ್ಗ-3ಬಿ | | | ಪರಿಶಿಷ್ಟ ಜಾತಿ | | | ಪರಿಶಿಷ್ಟ ಪಂಗಡ | | | | ಒಟ್ಟು | |
|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|
| | ಬ್ಯಾಕ್‌ಲಾಗ್ | ಪ್ರಸಕ್ತ ಸಾಲಿನ ಅಧಿಸೂಚಿತ ಹುದ್ದೆಗಳು | ಒಟ್ಟು | ಬ್ಯಾಕ್‌ಲಾಗ್ | ಪ್ರಸಕ್ತ ಸಾಲಿನ ಅಧಿಸೂಚಿತ ಹುದ್ದೆಗಳು | ಒಟ್ಟು | ಬ್ಯಾಕ್‌ಲಾಗ್ | ಪ್ರಸಕ್ತ ಸಾಲಿನ ಅಧಿಸೂಚಿತ ಹುದ್ದೆಗಳು | ಒಟ್ಟು | ಬ್ಯಾಕ್‌ಲಾಗ್ | ಪ್ರಸಕ್ತ ಸಾಲಿನ ಅಧಿಸೂಚಿತ ಹುದ್ದೆಗಳು | ಒಟ್ಟು | ಬ್ಯಾಕ್‌ಲಾಗ್ | ಪ್ರಸಕ್ತ ಸಾಲಿನ ಅಧಿಸೂಚಿತ ಹುದ್ದೆಗಳು | ಒಟ್ಟು | ಬ್ಯಾಕ್‌ಲಾಗ್ | ಪ್ರಸಕ್ತ ಸಾಲಿನ ಅಧಿಸೂಚಿತ ಹುದ್ದೆಗಳು | ಒಟ್ಟು | ಬ್ಯಾಕ್‌ಲಾಗ್ | ಪ್ರಸಕ್ತ ಸಾಲಿನ ಅಧಿಸೂಚಿತ ಹುದ್ದೆಗಳು | ಒಟ್ಟು | ಬ್ಯಾಕ್‌ಲಾಗ್ | ಪ್ರಸಕ್ತ ಸಾಲಿನ ಅಧಿಸೂಚಿತ ಹುದ್ದೆಗಳು | ಒಟ್ಟು | ಬ್ಯಾಕ್‌ಲಾಗ್ | ಪ್ರಸಕ್ತ ಸಾಲಿನ ಅಧಿಸೂಚಿತ ಹುದ್ದೆಗಳು | ಒಟ್ಟು |
| ಮಹಿಳಾ ಅಭ್ಯರ್ಥಿ | | | | | | | | | | | | | | | | | | | | | | | | | | 0 | 0 |
| ಗ್ರಾಮೀಣ ಅಭ್ಯರ್ಥಿ | | | | | | | | 1 | 1 | | | | | | | | | | | | | | | | | 1 | 1 |
| ಮಾಜಿ ಸೈನಿಕ | | 1 | 1 | | | | | | | | | | | | | | | | | | | | | | | 1 | 1 |
| ಕನ್ನಡ ಮಾಧ್ಯಮ ಅಭ್ಯರ್ಥಿ | | | | | | | | | | | | | | | | | | | | | | | | | | 0 | 0 |
| ಯೋಜನೆಯಿಂದ ನಿರಾಶ್ರಿತರಾದವರ ಕುಟುಂಬದ ಅಭ್ಯರ್ಥಿ | | | | | | | | | | | | | | | | | | | | | | | | | | 0 | 0 |
| ಅಂಗವಿಕಲ ಅಭ್ಯರ್ಥಿ | | | | | | | | | | | | | | | | | | | | | | | | | | | |
| ಇತರರು | | 1 | 1 | | | | | | | | | | | | | | | | | 1 | 1 | | | | | 2 | 2 |
| **ಒಟ್ಟು** | | **2** | **2** | | | | | **1** | **1** | | | | | | | | | | | **1** | **1** | | | | | **4** | **4** |

**ಎನ್. ಕುಮಾರಸ್ವಾಮಿ**
**ಆಯ್ಕೆಪ್ರಾಧಿಕಾರಿ ಹಾಗೂ ವಿಭಾಗೀಯ ಕಾರ್ಯದರ್ಶಿಗಳು**
**ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ ಮತ್ತು**
**ಪದನಿಮಿತ್ತ ಸಹ ನಿರ್ದೇಶಕರು, ಮೈಸೂರು ವಿಭಾಗ,**
**ಮೈಸೂರು.**

| ಭಾಗ – V | ಬೆಂಗಳೂರು, ಸೋಮವಾರ, ಮೇ ೧೮, ೨೦೦೯ (ವೈಶಾಖ ೨೮, ಶಕ ವರ್ಷ ೧೯೩೧) | ನಂ. ೩೦೮ |
|---|---|---|

**ಸಾರ್ವಜನಿಕ ಶಿಕ್ಷಣ ಇಲಾಖೆ**

**ಆಯ್ಕೆ ಪ್ರಾಧಿಕಾರಿ ಹಾಗೂ ವಿಭಾಗೀಯ ಕಾರ್ಯದರ್ಶಿಗಳು, ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ ಮತ್ತು ಪದನಿಮಿತ್ತ ಸಹನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಮೈಸೂರು ವಿಭಾಗ, ಮೈಸೂರು ಇವರ ಕಾರ್ಯಾಲಯ**

**ನೇಮಕಾತಿ ಅಧಿಸೂಚನೆ**

**ಸಂಖ್ಯೆ: ಎ–10 /ಸಂಗೀತ ಶಿಕ್ಷಕರು/ನೇಮಕಾತಿ/01/2009–10, ದಿನಾಂಕ: 18ನೇ ಮೇ, 2009**

**(ಅರ್ಜಿ ಸ್ವೀಕರಿಸಲು ಕೊನೆಯ ದಿನಾಂಕ: 08–07–2009)**

**ವಿಷಯ :–** 2009–10 ನೇ ಸಾಲಿನಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆ ಮೈಸೂರು ವಿಭಾಗದಲ್ಲಿನ ಸರ್ಕಾರಿ ಪ್ರೌಢ ಶಾಲೆ/ಸರ್ಕಾರಿ ಸಂಯಕ್ತ ಪದವಿ ಪೂರ್ವ ಕಾಲೇಜು (ಪ್ರೌಢ ಶಾಲೆ ವಿಭಾಗ) ಗಳಲ್ಲಿರುವ ಸಂಗೀತ ಶಿಕ್ಷಕರು ಗ್ರೇಡ್–2(ಹಾಡುಗಾರಿಕೆ ಮಾತ್ರ) ಹುದ್ದೆಗಳಿಗೆ ನೇರ ನೇಮಕಾತಿ ಮೂಲಕ ಆಯ್ಕೆ ಮಾಡುವ ಕುರಿತು.

**ಉಲ್ಲೇಖ :–**

1) ದಿನಾಂಕ 22/02/1967, 21/05/1998 ಹಾಗೂ 24/06/2003 ಮತ್ತು 17/06/2006ರ ಇಲಾಖಾ ನೇಮಕಾತಿ ನಿಯಮಗಳು.
2) ಸರ್ಕಾರದ ಆದೇಶ ಸಂಖ್ಯೆ:ಸಿಅಸುಇ.08.ಸಹಿಮ.95 ದಿನಾಂಕ:20/6/1995 (ಅನುಬಂಧ 1 ಮತ್ತು 2).
3) ಸರ್ಕಾರದ ಆದೇಶ ಸಂಖ್ಯೆ:ಡಿಪಿಎಆರ್.34.ಎಸ್‌ಆರ್‌ಆರ್.95 ದಿನಾಂಕ 06/03/1996.
4) ಸರ್ಕಾರದ ಅಧಿಸೂಚನೆ ಸಂಖ್ಯೆ: ಎಸ್‌ಡಬ್ಲ್ಯೂಡಿ.132.ಎಸ್‌ಎಡಿ.97 ದಿನಾಂಕ08/02/2000.
5) ಸರ್ಕಾರದ ಅಧಿಸೂಚನೆ ಸಂಖ್ಯೆ: ಎಸ್‌ಡಬ್ಲ್ಯೂಡಿ.126. ಬಿಸಿಎ.2002 ದಿನಾಂಕ 13/2/2003.
6) ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್.23.ಎಸ್‌ಆರ್‌ಆರ್.99 ದಿ.23/11/2000.
7) ಸರ್ಕಾರದ ಸುತ್ತೋಲೆ ಸಂಖ್ಯೆ:ಸಿಅಸುಇ.44.ಸೇನೇನಿ.2001 ದಿನಾಂಕ: 27/07/2001.
8) ಸರ್ಕಾರದ ಆದೇಶ ಸಂಖ್ಯೆ:ಸಿಅಸುಇ.08.ಸೇನೇನಿ.2001 ದಿನಾಂಕ: 13/02/2001.
9) ಸರ್ಕಾರದ ಆದೇಶ ಸಂಖ್ಯೆ:ಸಿಅಸುಇ.96.ಸೇನೇನಿ.2005 ದಿನಾಂಕ: 10/08/2005.
10) ಸರ್ಕಾರದ ಆದೇಶ ಸಂಖ್ಯೆ:ಸಿಅಸುಇ.53.ಸೇನೇನಿ.2007 ದಿನಾಂಕ: 04/01/2008.
11) ಸರ್ಕಾರದ ಆದೇಶ ಸಂಖ್ಯೆ:ಸಿಅಸುಇ.26.ಸಹಿಮ.2002 ದಿನಾಂಕ: 11/04/2003.
12) ಈ ಕಛೇರಿಯ ಅಧಿಸೂಚನೆ ಸಂಖ್ಯೆ:ಎ.10. ವಿಶೇಷ ಶಿಕ್ಷಕರು.ನೇಮಕಾತಿ/01/2004–05. ದಿ:18/04/2005 ಮತ್ತು ದಿ:23/12/2006.
13) ಸರ್ಕಾರದ ಅಧಿಸೂಚನೆ ಸಂಖ್ಯೆ:ಡಿಪಿಎಆರ್.31.ಎಸ್‌ಆರ್‌ಇ.94. ದಿ:21/05/1998.
14) ಸರ್ಕಾರದ ಅಧಿಸೂಚನೆ ಸಂಖ್ಯೆ:ಡಿಪಿಎಆರ್.59.ಎಸ್‌ಆರ್‌ಇ.2002. ದಿ:24/06/2003.
15) ಸರ್ಕಾರದ ಅಧಿಸೂಚನೆ ಸಂಖ್ಯೆ:ಇಡಿ.82.ಎಸ್‌ಎಲ್‌ಬಿ.2003(ಪಾರ್ಟ್). ದಿ:17/06/2006.
16) ಆಯುಕ್ತರು, ಸಾ.ಶಿ.ಇ, ಬೆಂಗಳೂರು ರವರ ಪತ್ರ ಸಂಖ್ಯೆ:ಸಿ4 (5)/ಸಂ.ಶಿ.ನೇ/30/2008–09, ದಿ. 5.5.2009.
17) ಸರ್ಕಾರದ ಅಧಿಸೂಚನೆ ಸಂಖ್ಯೆ.ಡಿ.ಪಿ.ಎ.ಆರ್.50.ಎಸ್.ಆರ್.ಆರ್.2000 ದಿ.03–09–2008.
18) ಸರ್ಕಾರದ ಅಧಿಸೂಚನೆ ಸಂಖ್ಯೆ.ಡಿ.ಪಿ.ಎ.ಆರ್.52.ಎಸ್.ಆರ್.ಆರ್.99. ದಿ.29–11–2002
19) ಸರ್ಕಾರದ ಪತ್ರ ಸಂಖ್ಯೆ. ಇಡಿ 04 ಎಸ್‌ಟಿಬಿ 2009, ದಿ. 13–3–2009.
20) ಸರ್ಕಾರದ ಆದೇಶ ಸಂಖ್ಯೆ. ಇಡಿ 310 ಎಸ್‌ಎಲ್‌ಬಿ 91, ದಿ. 16.3.1992.
21) ಸರ್ಕಾರದ ಸುತ್ತೋಲೆ ಸಂಖ್ಯೆ: ಸಿಆಸುಇ 16 ಸೇನೆನಿ 2008, ದಿ. 1.9.2008.

ಸಾರ್ವಜನಿಕ ಶಿಕ್ಷಣ ಇಲಾಖೆ ಮೈಸೂರು ವಿಭಾಗದ ಎಂಟು ಜಿಲ್ಲೆಗಳಲ್ಲಿರುವ ಸರ್ಕಾರಿ ಪ್ರೌಢ ಶಾಲೆ/ ಸಂಯುಕ್ತ ಪದವಿ ಪೂರ್ವ ಕಾಲೇಜು(ಪ್ರೌಢ ಶಾಲಾ ವಿಭಾಗ)ಗಳಲ್ಲಿರುವ **"ಪ್ರೌಢಶಾಲಾ ಸಂಗೀತ ಶಿಕ್ಷಕರು ಗ್ರೇಡ್–2" (ಹಾಡುಗಾರಿಕೆ ಮಾತ್ರ)** ಹುದ್ದೆಗಳಿಗೆ ಉಲ್ಲೇಖಿತದಲ್ಲಿ ನಮೂದಿಸಿರುವ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳು ಮತ್ತು ಕಾಲದಿಂದ ಕಾಲಕ್ಕೆ ಹೊರಡಿಸಲಾದ ಸರ್ಕಾರದ ಆದೇಶಗಳ ಪ್ರಕಾರ ಹಾಗೂ ಪ್ರಚಲಿತ ನಿಯಮಗಳನ್ನು ಅನುಸರಿಸಿ ನೇರ ನೇಮಕಾತಿಗಾಗಿ ಅರ್ಹ ಅಭ್ಯರ್ಥಿಗಳನ್ನು ಆಯ್ಕೆ

ಮಾಡಲು, ಅಧಿಸೂಚನಾ ದಿನಾಂಕವಾದ 18/05/2009ರಂದು ಸಂಗೀತ ಶಿಕ್ಷಕರು ಗ್ರೇಡ್–2 ಹುದ್ದೆಗೆ ನಿಗಧಿಪಡಿಸಿರುವ ಎಲ್ಲಾ ವಿದ್ಯಾರ್ಹತೆಗಳನ್ನು ಹೊಂದಿರುವ ಮತ್ತು ನಿಗಧಿತ ವಯೋಮಿತಿಯೊಳಗಿರುವ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಿ ಈ ಅಧಿಸೂಚನೆಯನ್ನು ಹೊರಡಿಸಿದೆ.

**1. ನೇಮಕಾತಿಗಾಗಿ ಅಧಿಸೂಚಿಸಿರುವ ಹುದ್ದೆಗಳು:–**

ಪ್ರೌಢ ಶಾಲಾ ಸಂಗೀತ ಶಿಕ್ಷಕರು ಗ್ರೇಡ್–2 (ಹಾಡುಗಾರಿಕೆ ಮಾತ್ರ)

**2. ಆಯ್ಕೆಗೆ ಅರ್ಹತೆ:–**

ಅಭ್ಯರ್ಥಿಗಳು ನೇಮಕಾತಿ ಅಧಿಸೂಚನೆ ದಿನಾಂಕವಾದ 18/05/2009ರಂದು **"ಸಂಗೀತ ಶಿಕ್ಷಕರು ಗ್ರೇಡ್–2" (ಹಾಡುಗಾರಿಕೆ ಮಾತ್ರ)** ಹುದ್ದೆಗಳಿಗೆ ಆಯ್ಕೆ ಹೊಂದಲು **"ದಿ ಕರ್ನಾಟಕ ಎಜುಕೇಶನ್ ಡಿಪಾರ್ಟಮೆಂಟ್ ಸರ್ವಿಸಸ್ (ಡಿಪಾರ್ಟಮೆಂಟ್ ಆಫ ಪಬ್ಲಿಕ್ ಇನ್ಸಟ್ರಕ್ಷನ್) (ರಿಕ್ರೂಟಮೆಂಟ್) ರೂಲ್ಸ್ 1967, ಇದಕ್ಕೆ ದಿನಾಂಕ:21–05–1998, 24–06–2003 ಮತ್ತು 17–06–2006ರಂದು ತಿದ್ದುಪಡಿ ಮಾಡಿ ಹಾಲಿ ಜಾರಿಯಲ್ಲಿರುವ ನೇಮಕಾತಿ ನಿಯಮಗಳ ಪ್ರಕಾರ,** ನಿಗಧಿಪಡಿಸಿರುವ ಎಲ್ಲಾ ಶೈಕ್ಷಣಿಕ ವಿದ್ಯಾರ್ಹತೆಗಳನ್ನು ಹೊಂದಿದ್ದು, ನಿಗಧಿತ ವಯೋಮಿತಿಯೊಳಗಿರಬೇಕು. **ದಿನಾಂಕ: 18/05/2009ರ ನಂತರ ಈ ವಿದ್ಯಾರ್ಹತೆಗಳನ್ನು ಹೊಂದಿರುವ ಅಭ್ಯರ್ಥಿಗಳು ನೇಮಕಾತಿಗೆ ಪರಿಗಣಿಸಲು ಅರ್ಹತೆ ಪಡೆಯುವುದಿಲ್ಲ.**

**3. ಆಯ್ಕೆ ಮತ್ತು ನೇಮಕಾತಿ:**

ಅರ್ಹ ಅಭ್ಯರ್ಥಿಗಳನ್ನು ವಿಭಾಗ ಮಟ್ಟದಲ್ಲಿ ಆಯ್ಕೆ ಪ್ರಾಧಿಕಾರಿಯಾದ ವಿಭಾಗೀಯ ಕಾರ್ಯದರ್ಶಿಗಳು, **"ದಿ ಕರ್ನಾಟಕ ಎಜುಕೇಶನ್ ಡಿಪಾರ್ಟಮೆಂಟ್ ಸರ್ವಿಸಸ್ (ಡಿಪಾರ್ಟಮೆಂಟ್ ಆಫ ಪಬ್ಲಿಕ್ ಇನ್ಸಟ್ರಕ್ಷನ್) (ರಿಕ್ರೂಟಮೆಂಟ್) ರೂಲ್ಸ್ 1967, ಇದಕ್ಕೆ ದಿನಾಂಕ:21–05–1998, 24–06–2003 ಮತ್ತು 17–06–2006ರಂದು ತಿದ್ದುಪಡಿ ಮಾಡಿ ಹಾಲಿ ಜಾರಿಯಲ್ಲಿರುವ ನೇಮಕಾತಿ ನಿಯಮಗಳ ಪ್ರಕಾರ,** ಹಾಗೂ ಪ್ರಚಲಿತದಲ್ಲಿರುವ ಸರ್ಕಾರದ ಮೀಸಲಾತಿ ನಿಯಮಗಳನ್ನು ಅನುಸರಿಸಿ ಆಯ್ಕೆ ಮಾಡುತ್ತಾರೆ. ಆಯ್ಕೆಗೊಂಡ ಅಭ್ಯರ್ಥಿಗಳನ್ನು ಈ ಹುದ್ದೆಗಳ ನೇಮಕಾತಿ ಪ್ರಾಧಿಕಾರಿಯಾದ ಆಯಾ ಜಿಲ್ಲಾ ಉಪನಿರ್ದೇಶಕರು (ಆಡಳಿತ) ರವರು ನೇಮಕಾತಿಯನ್ನು ಜಿಲ್ಲಾ ಮಟ್ಟದಲ್ಲಿ ಮಾಡುತ್ತಾರೆ.

**4. ನಿಗದಿತ ಅರ್ಜಿ ನಮೂನೆ ಮತ್ತು ದೊರೆಯುವ ಸ್ಥಳ:**

ನಿಗದಿತ ಅರ್ಜಿ ನಮೂನೆಯನ್ನು ಆಯ್ಕೆಗಾಗಿ ಪ್ರಕಟಿಸಲಾಗಿರುವ **ಅರ್ಜಿ–ಸಹಿತ–ಮಾಹಿತಿ ಪುಸ್ತಕದಲ್ಲಿ** ಲಗತ್ತಿಸಲಾಗಿದೆ. **ಅರ್ಜಿ–ಸಹಿತ–ಮಾಹಿತಿ ಪುಸ್ತಕ** ಮೈಸೂರು ವಿಭಾಗದ ವ್ಯಾಪ್ತಿಯಲ್ಲಿರುವ ಎಲ್ಲಾ ಜಿಲ್ಲೆಗಳ ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪ ನಿರ್ದೇಶಕರು (ಆಡಳಿತ) ಇವರ ಕಛೇರಿಯಲ್ಲಿ **ದಿನಾಂಕ:08–06–2009ರಿಂದ** ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕವಾದ **08–07–2009**ರವರೆಗೆ ಎಲ್ಲಾ ಕೆಲಸದ ದಿನಗಳಂದು ಬೆಳಿಗ್ಗೆ 10.00 ರಿಂದ ಸಂಜೆ 5.30 ರವರೆಗೆ ದೊರೆಯುತ್ತದೆ. ಈ ನಿಗಧಿತ **ಅರ್ಜಿ–ಸಹಿತ–ಮಾಹಿತಿ ಪುಸ್ತಕವನ್ನು** ಅರ್ಹ ಅಭ್ಯರ್ಥಿಗಳು ನಿಗದಿತ ಶುಲ್ಕವನ್ನು **"ವಿಶೇಷಾಧಿಕಾರಿ, ಕೇಂದ್ರೀಕೃತ ದಾಖಲಾತಿ ಘಟಕ, ಬೆಂಗಳೂರು" ಇವರಿಗೆ (Special officer, centrelised admission cell, Bangalore)** ಪಾವತಿಯಾಗುವ ರೀತಿ ಸ್ಟೇಟ್ ಬ್ಯಾಂಕ್ ಆಫ್ ಮೈಸೂರ್‌ನ ಯಾವುದೇ ಶಾಖೆಯಲ್ಲಿ ಖರೀದಿಸಿದ ಬ್ಯಾಂಕ್ ಹುಂಡಿ (Demand Draft) ಯನ್ನು ಸಲ್ಲಿಸಿ ಪಡೆಯಬಹುದಾಗಿದೆ.

**5. ಅರ್ಜಿ–ಸಹಿತ–ಮಾಹಿತಿ ಪುಸ್ತಕದ ಶುಲ್ಕ:**

1. ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ ಮತ್ತು ಪ್ರವರ್ಗ–1 ಕ್ಕೆ ಸೇರಿದ ಅಭ್ಯರ್ಥಿಗಳಿಗೆ ರೂ. 100/–
2. ಸಾಮಾನ್ಯ ಮತ್ತು ಇತರೆ ಪ್ರವರ್ಗಗಳ ಎಲ್ಲಾ ಅಭ್ಯರ್ಥಿಗಳಿಗೆ ರೂ. 200/–

**ಟಿಪ್ಪಣಿ:** ಅಂಗವಿಕಲ ಅಭ್ಯರ್ಥಿಗಳಿಗೆ ಸರ್ಕಾರದ ಪತ್ರ ಸಂಖ್ಯೆ: ಇಡಿ 04 ಎಸ್‌ಟಿಬಿ 2009, ದಿ. 13.3.2009ರ ಪ್ರಕಾರ ಅರ್ಜಿ–ಸಹಿತ–ಮಾಹಿತಿ ಪುಸ್ತಕದ ಶುಲ್ಕ ವಿನಾಯಿತಿ ನೀಡಲಾಗಿದ್ದು, ವಿನಾಯಿತಿ ಪಡೆಯುವ ಅಂಗವಿಕಲ ಅಭ್ಯರ್ಥಿಗಳು ಅರ್ಜಿ ಪಡೆಯುವ ಸಂಧರ್ಭದಲ್ಲಿ ನಿಗಧಿತ ನಮೂನೆಯಲ್ಲಿ ಅಂಗವಿಕಲ ಅಭ್ಯರ್ಥಿ ಎನ್ನುವ ಬಗ್ಗೆ ಪ್ರಮಾಣ ಪತ್ರವನ್ನು ಹಾಜರು ಪಡಿಸಬೇಕು

**ವಿಶೇಷ ಸೂಚನೆ:** ಈ ಹಿಂದೆ ದಿನಾಂಕ: 18–04–2005ರಂದು ಹೊರಡಿಸಲಾಗಿದ್ದ ನೇಮಕಾತಿ ಅಧಿಸೂಚನೆಯನ್ನು ರದ್ದುಗೊಳಿಸಿ, 2004–05ರ ವಿಶೇಷ ಶಿಕ್ಷಕರ ನೇಮಕಾತಿ ಪ್ರಕ್ರಿಯೆಯನ್ನು ಅಂತ್ಯಗೊಳಿಸಿ, ದಿನಾಂಕ: 23–12–2006ರಂದು ಅಧಿಸೂಚನೆಯನ್ನು ಹೊರಡಿಸಿದೆ. ಹಾಗೂ ಈ ಸೂಚನೆಯು ದಿ:30–12–2006ರಂದು ಕರ್ನಾಟಕ ರಾಜ್ಯ ಪತ್ರದ ವಿಶೇಷ ಪತ್ರಿಕೆಯಲ್ಲಿ ಪ್ರಕಟವಾಗಿದೆ. ಆದುದರಿಂದ ಮೇಲೆ ಉಲ್ಲೇಖಿಸಿದ 18–04–2005ರ ನೇಮಕಾತಿ ಅಧಿಸೂಚನೆ ಅನ್ವಯ ಆಯಾ ಜಿಲ್ಲಾ ಉಪನಿರ್ದೇಶಕರ ಕಛೇರಿಗೆ ಹಿಂದೆ ಅರ್ಜಿ ಸಲ್ಲಿಸಿರುವ ಅಭ್ಯರ್ಥಿಗಳು ಈಗ ಅರ್ಜಿ ಸಲ್ಲಿಸಬಯಸಿದಲ್ಲಿ, ಅರ್ಜಿ ಸಲ್ಲಿಸಿರುವ ಬಗ್ಗೆ ಯಾವುದೇ ದಾಖಲೆ ನೀಡಿದಲ್ಲಿ ಅಂತಹ ಅಭ್ಯರ್ಥಿಗಳಿಗೆ ಮಾತ್ರ "ಅರ್ಜಿ–ಸಹಿತ–ಮಾಹಿತಿ" ಪುಸ್ತಕದ ಈಗ ನಿಗಧಿಪಡಿಸಿರುವ ಶುಲ್ಕದ ವ್ಯತ್ಯಾಸವನ್ನು ಕಂಡಿಕೆ(4) ರಲ್ಲಿ ತಿಳಿಸಿರುವ ರೀತ್ಯಾ ಬ್ಯಾಂಕ್ ಹುಂಡಿ ಮೂಲಕ ಸಲ್ಲಿಸಿ ಈ ನೇಮಕಾತಿ ಅಧಿಸೂಚನೆಯ "ಅರ್ಜಿ–ಸಹಿತ–ಮಾಹಿತಿ" ಪುಸ್ತಕವನ್ನು ಪಡೆಯಬಹುದು.

**ಶುಲ್ಕ ವ್ಯತ್ಯಾಸ:** 1. ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡ ಮತ್ತು ಪ್ರವರ್ಗ–1 ಕ್ಕೆ ಸೇರಿದ ಅಭ್ಯರ್ಥಿಗಳಿಗೆ ರೂ. 25/–

2. ಸಾಮಾನ್ಯ ಅರ್ಹತೆ ಮತ್ತು ಇತರೆ ಪ್ರವರ್ಗಗಳ ಅಭ್ಯರ್ಥಿಗಳಿಗೆ ರೂ. 50/–

**6. ಅರ್ಜಿ ಸಲ್ಲಿಸುವ ವಿಧಾನ, ಕೊನೆಯ ದಿನಾಂಕ, ಸ್ಥಳ :**

1. **ಅರ್ಜಿ–ಸಹಿತ–ಮಾಹಿತಿ ಪುಸ್ತಿಕೆಯು** ಒಂದು ಮೂಲ ಅರ್ಜಿ ನಮೂನೆಯನ್ನು (O.M.R Sheet) ಒಳಗೊಂಡಿದೆ. ಮೂಲ ಅರ್ಜಿಯನ್ನು ಭರ್ತಿ ಮಾಡಿದ ನಂತರ, ಅದರ ಮೂರು ಯಥಾ ಪ್ರತಿಗಳನ್ನು (ಜೆರಾಕ್ಸ್) ಮಾಡಿಸಿಕೊಂಡು ನಿಗಧಿತ

ಸ್ಥಳದಲ್ಲಿ ಪಾಸ್‌ಪೋರ್ಟ್ ಅಳತೆಯ ಭಾವಚಿತ್ರಗಳನ್ನು ಅಂಟಿಸಿ (ಈ ಭಾವ ಚಿತ್ರಗಳನ್ನು ನೇಮಕಾತಿ ಅಧಿಸೂಚನೆ ದಿನಾಂಕದ ನಂತರ ಒಂದೇ ದಿನ ತೆಗೆಸಿದ್ದಾಗಿರಬೇಕು ಮತ್ತು ಅವುಗಳನ್ನು ಜಿಲ್ಲಾ ಉಪನಿರ್ದೇಶಕರ ಕಛೇರಿಯ ನೋಡೆಲ್ ಅಧಿಕಾರಿಗಳಿಂದ ದೃಢೀಕರಿಸಿಕೊಳ್ಳುವುದು) ಅರ್ಜಿಯ ನಿಗಧಿತ ಸ್ಥಳದಲ್ಲಿ ಸಹಿಮಾಡಿ, ಎಡಗೈ ಹೆಬ್ಬೆರಳ ಗುರುತನ್ನು ಹಾಕುವುದು. **ಮೊದಲನೆಯ ಯಥಾ ಪ್ರತಿಯನ್ನು** (ಜೆರಾಕ್ಸ್) ಸಹನಿರ್ದೇಶಕರ ಪ್ರತಿಗಳನ್ನಾಗಿಯೂ, **ಎರಡನೇ ಯಥಾ ಪ್ರತಿಯನ್ನು**(ಜೆರಾಕ್ಸ್) ಉಪನಿರ್ದೇಶಕರ ಪ್ರತಿಯನ್ನಾಗಿ ಮತ್ತು **ಮೂರನೇ ಯಥಾ ಪ್ರತಿಯನ್ನು** (ಜೆರಾಕ್ಸ್) ಮಾತ್ರ ಅಭ್ಯರ್ಥಿಯ ಪ್ರತಿಯನ್ನಾಗಿ ಅಭ್ಯರ್ಥಿ ಉಳಿಸಿಕೊಂಡು ಅರ್ಜಿ ಸಲ್ಲಿಸಲು ನಿಗಧಿಪಡಿಸಿರುವ ದಿನಾಂಕ:08/07/2009ರ ಸಂಜೆ 5.30 ಗಂಟೆಯೊಳಗೆ ಅಥವಾ ಅದಕ್ಕೂ ಮುಂಚಿತವಾಗಿ ಅಭ್ಯರ್ಥಿಯು **ಅರ್ಜಿ–ಸಹಿತ–ಮಾಹಿತಿ ಪುಸ್ತಕೆಯನ್ನು** ಖರೀದಿಸಿದ ಈ ವಿಭಾಗದ ಜಿಲ್ಲೆಯ ಉಪನಿರ್ದೇಶಕರು (ಆಡಳಿತ) ಅವರ ಕಛೇರಿಗೆ ಖುದ್ದಾಗಿ **ಮೂಲ ಅರ್ಜಿ** (O.M.R Sheet) ಮತ್ತು ಮೊದಲನೇ ಯಥಾ ಪ್ರತಿ (ಸಹನಿರ್ದೇಶಕರ ಪ್ರತಿ) ಹಾಗೂ ಎರಡನೇ ಯಥಾ ಪ್ರತಿ (ಉಪನಿರ್ದೇಶಕರ ಪ್ರತಿ) ಯನ್ನು ಸಲ್ಲಿಸಿ ಸ್ವೀಕೃತಿಯನ್ನು ಖುದ್ದಾಗಿ ಪಡೆಯತಕ್ಕದ್ದು. ಉಳಿದ ಮೂರನೇ ಯಥಾ ಪ್ರತಿಯನ್ನು ಅಭ್ಯರ್ಥಿಯು ತನ್ನ ಪ್ರತಿಯನ್ನಾಗಿ ಉಳಿಸಿಕೊಳ್ಳುವುದು. ಅಂಚೆ ಮೂಲಕ ಸಲ್ಲಿಸಿದ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ. ನಿಗಧಿಪಡಿಸಿದ ಕೊನೆಯ ದಿನಾಂಕದ ನಂತರ ಯಾವುದೇ ಅರ್ಜಿಗಳನ್ನು ಯಾವುದೇ ಕಾರಣಕ್ಕೂ ಸ್ವೀಕರಿಸಲಾಗುವುದಿಲ್ಲ.

2. ಅಭ್ಯರ್ಥಿಯು ಅರ್ಜಿಯಲ್ಲಿ ನಮೂದಿಸಿರುವ ವಿವರಗಳಿಗೆ ಸಂಬಂಧಪಟ್ಟಂತೆ ವಿದ್ಯಾರ್ಹತೆಗಳ ಎಲ್ಲಾ ವರ್ಷಗಳ, ಎಲ್ಲಾ ಪ್ರಯತ್ನಗಳ ಅಂಕಪಟ್ಟಿಗಳು ಮತ್ತು ತೇರ್ಗಡೆಹೊಂದಿದ ಪ್ರಮಾಣ ಪತ್ರಗಳು ಹಾಗೂ ಅಭ್ಯರ್ಥಿಗೆ ಅನ್ವಯವಾಗುವ ಮೀಸಲಾತಿ ಪ್ರವರ್ಗ (ನೇರ ಮತ್ತು ಸಮತಲ ಮೀಸಲಾತಿ), ಗ್ರಾಮೀಣ ಪ್ರದೇಶದ, ಯೋಜನಾ ಪ್ರದೇಶ ನಿರಾಶ್ರಿತ ಅಭ್ಯರ್ಥಿ, ಕನ್ನಡ ಮಾಧ್ಯಮ, ಮಾಜಿ ಸೈನಿಕ, ಮಾಜಿ ಸೈನಿಕ ಅವಲಂಬಿತ, ಅಂಗವಿಕಲ ಅಭ್ಯರ್ಥಿ ಎನ್ನುವ ಬಗ್ಗೆ ಪ್ರಚಲಿತದಲ್ಲಿರುವ ಪ್ರಮಾಣ ಪತ್ರಗಳ ಸ್ವಯಂ ದೃಢೀಕರಿಸಿದ ಪ್ರತಿಗಳನ್ನು ಸಹನಿರ್ದೇಶಕರು ಹಾಗೂ ಉಪನಿರ್ದೇಶಕರ ಅರ್ಜಿ ಪ್ರತಿಯೊಂದಿಗೆ ತಪ್ಪದೇ ಲಗತ್ತಿಸುವುದು.

3. ಭರ್ತಿಮಾಡಿದ ಅರ್ಜಿಗಳನ್ನು ಸಲ್ಲಿಸಲು ಕೊನೆಯ ದಿನಾಂಕ: 08/07/2009 ಸಂಜೆ 05–30 ರೊಳಗೆ ಅಥವಾ ಮುಂಚಿತವಾಗಿ.

4. ಭರ್ತಿ ಮಾಡಿದ ಮೂಲ ಅರ್ಜಿ (O.M.R Sheet), ಸಹನಿರ್ದೇಶಕರ ಪ್ರತಿ ಮತ್ತು ಉಪನಿರ್ದೇಶಕರ ಪ್ರತಿಯನ್ನು ಅಭ್ಯರ್ಥಿಯು **ಅರ್ಜಿ–ಸಹಿತ–ಮಾಹಿತಿ ಪುಸ್ತಕವನ್ನು** ಮೈಸೂರು ವಿಭಾಗದ ಯಾವ ಜಿಲ್ಲೆಯ ಉಪನಿರ್ದೇಶಕರ (ಆಡಳಿತ) ಕಛೇರಿಯಿಂದ ಖರೀಸಿದರೋ ಅದೇ ಕಛೇರಿಗೆ ಖುದ್ದಾಗಿ ಸಲ್ಲಿಸಿ ಸ್ವೀಕೃತಿ ಪಡೆಯುವುದು.

5. ಹಾಲಿ ರಾಜ್ಯ ಸರ್ಕಾರದ ಸೇವೆಯಲ್ಲಿರುವ ಖಾಯಂ ನೌಕರರು ತಮ್ಮ ಹುದ್ದೆಯ ನೇಮಕಾತಿ ಪ್ರಾಧಿಕಾರಿಯಿಂದ ಎನ್.ಓ.ಸಿ ಪಡೆದು, ಅವರ ಮೂಲಕವೇ ಕರ್ನಾಟಕ ಸಿವಿಲ್ ಸರ್ವಿಸಸ್ (ಜನರಲ್ ರಿಕ್ರೂಟ್‌ಮೆಂಟ್) ರೂಲ್ಸ್ 1977 ನಿಯಮ (11) ರೀತ್ಯಾ ಸಂಬಂಧಿಸಿದ ಉಪನಿರ್ದೇಶಕರ ಕಛೇರಿಗೆ ಅರ್ಜಿ ಸಲ್ಲಿಸಲು ಕೊನೆಯ ದಿನಾಂಕವಾದ **08/07/2009ರ** ಸಂಜೆ 05–30 ರೊಳಗೆ ಅಥವಾ ಅದಕ್ಕೂ ಮುಂಚಿತವಾಗಿ ತಲುಪುವಂತೆ ಸಲ್ಲಿಸುವುದು. ಕೊನೆಯ ದಿನಾಂಕದ ನಂತರ ಬರುವ ಅರ್ಜಿಗಳನ್ನು ಯಾವ ಕಾರಣಕ್ಕೂ ಸ್ವೀಕರಿಸಲಾಗುವುದಿಲ್ಲ.

6. ಅರ್ಜಿಯನ್ನು ಸ್ವೀಕರಿಸುವ ಕೊನೆಯ ದಿನಾಂಕವು ಸರ್ಕಾರದ ರಜಾ ದಿನವಾಗಿದ್ದಲ್ಲಿ, ನಂತರದ ಕಛೇರಿಯ ಕೆಲಸದ ದಿನವು ಅರ್ಜಿ ಸ್ವೀಕರಿಸಲು ಕೊನೆಯ ದಿನಾಂಕವಾಗಿರುತ್ತದೆ.

ಅರ್ಜಿಯನ್ನು ಒಳಗೊಂಡ ಲಕೋಟೆಯ ಮೇಲೆ **"ಮೈಸೂರು ವಿಭಾಗದಲ್ಲಿ 2009–10ನೇ ಸಾಲಿನ "ಪ್ರೌಢ ಶಾಲಾ ಸಂಗೀತ ಶಿಕ್ಷಕರು ಗ್ರೇಡ್–2" (ಹಾಡುಗಾರಿಕೆ ಮಾತ್ರ) ಹುದ್ದೆಗಾಗಿ ಅರ್ಜಿ"** ಎಂದು ದಪ್ಪ ಅಕ್ಷರಗಳಲ್ಲಿ ಬರೆದು ಲಕೋಟೆ ಹಿಂಬದಿಯಲ್ಲಿ ಅರ್ಜಿದಾರರ ಪೂರ್ಣ ವಿಳಾಸವನ್ನು ನಮೂದಿಸಬೇಕು.

**7. ಅರ್ಜಿ ಜೊತೆ ಲಗತ್ತಿಸಬೇಕಾದ ಲಗತ್ತುಗಳು:–**

1. ಎಸ್.ಎಸ್.ಎಲ್.ಸಿ ದೃಢೀಕೃತ ಅಂಕಪಟ್ಟಿ (ಒಂದಕ್ಕಿಂತ ಹೆಚ್ಚಿನ ಪ್ರಯತ್ನಗಳಲ್ಲಿ ಉತ್ತೀರ್ಣರಾದವರು ಕ್ರೋಢೀಕೃತ ಅಂಕಪಟ್ಟಿ ಸಲ್ಲಿಸುವುದು)
2. ಮೀಸಲಾತಿ ಕೋರಿರುವ ಪ್ರವರ್ಗದ ದೃಢೀಕರಿಸಿದ ಪ್ರಮಾಣ ಪತ್ರದ ಪ್ರತಿ.
3. ಮಾಜಿ ಸೈನಿಕನಾಗಿ ಕಾರ್ಯನಿರ್ವಹಿಸಿರುವ / ಕುಟುಂಬದ ಸದಸ್ಯ [ಕೆ.ಸಿ.ಎಸ್ (ಜನರಲ್ ರಿಕ್ರೂಟ್‌ಮೆಂಟ್) ರೂಲ್ಸ್ 1977ರಲ್ಲಿ ನಿರ್ಧಿಷ್ಠಪಡಿಸಿರುವಂತಹ)] ಅಭ್ಯರ್ಥಿ ಎನ್ನುವ ಬಗ್ಗೆ ಮಾತ್ರ ಪ್ರಮಾಣ ಪತ್ರದ ಪ್ರತಿ (ಮಾದರಿ ಅರ್ಜಿ–ಸಹಿತ–ಮಾಹಿತಿ–ಪುಸ್ತಕದಲ್ಲಿ ನೀಡಿದೆ.).
4. ಗ್ರಾಮೀಣ ಪ್ರದೇಶದ ಶಾಲೆಗಳಲ್ಲಿ 01 ರಿಂದ 10 ನೇ ತರಗತಿಯವರೆಗೆ ವ್ಯಾಸಂಗ ಮಾಡಿರುವ ಬಗ್ಗೆ ದೃಢೀಕೃತ ಪ್ರಮಾಣ ಪತ್ರದ ಪ್ರತಿ. (ವ್ಯಾಸಂಗ ಮತ್ತು ಸಿಂಧುತ್ವ ಪ್ರಮಾಣ ಪತ್ರದ ಮಾದರಿಯನ್ನು ಅರ್ಜಿ–ಸಹಿತ–ಮಾಹಿತಿ– ಪುಸ್ತಕದಲ್ಲಿ ನೀಡಿದೆ).

5. ಅಂಗವಿಕಲ ಅಭ್ಯರ್ಥಿ ಎಂಬ ಬಗ್ಗೆ ಪ್ರಮಾಣ ಪತ್ರದ ದೃಢೀಕರಿಸಿದ ಪ್ರತಿ (ಮಾದರಿ ಪ್ರತಿಯನ್ನು ಅರ್ಜಿ–ಸಹಿತ–ಮಾಹಿತಿ–ಪುಸ್ತಕದಲ್ಲಿ ನೀಡಿದೆ).

6. ಕನ್ನಡ ಮಾಧ್ಯಮದಲ್ಲಿ 01 ರಿಂದ 10ನೇ ತರಗತಿಯವರೆಗೆ ವ್ಯಾಸಂಗ ಮಾಡಿರುವ ಬಗ್ಗೆ ಪ್ರಮಾಣ ಪತ್ರದ ದೃಢೀಕೃತ ಪ್ರತಿ (ಮಾದರಿ ಪ್ರತಿಯನ್ನು ಅರ್ಜಿ–ಸಹಿತ–ಮಾಹಿತಿ–ಪುಸ್ತಕದಲ್ಲಿ ನೀಡಿದೆ).

7. ಯೋಜನೆಗಳಿಂದ ನಿರಾಶ್ರಿತರಾದ ಅಭ್ಯರ್ಥಿ ಅಥವಾ ನಿರಾಶ್ರಿತ ಕುಟುಂಬದ ಸದಸ್ಯ ಎಂಬ ಬಗ್ಗೆ ಪಡೆದಿರುವ ಪ್ರಮಾಣ ಪತ್ರದ ದೃಢೀಕರಿಸಿದ ಪ್ರತಿ. (ಸರ್ಕಾರದ ಅಧಿಸೂಚನೆ ಸಂಖ್ಯೆ:ಡಿಪಿಎಆರ್ /23/ಎಸ್ಆರ್ಆರ್/99. ದಿ:23/11/2000 ಮತ್ತು ಸುತ್ತೋಲೆ ಸಂಖ್ಯೆ:ಸಿಆಸುಇ. 44/ಸೆನೇನಿ/2001 ದಿ:27/07/2001ರ ಪ್ರಕಾರ) ಮಾದರಿ ಪ್ರತಿಯನ್ನು ಅರ್ಜಿ–ಸಹಿತ–ಮಾಹಿತಿ–ಪುಸ್ತಕದಲ್ಲಿ ನೀಡಿದೆ).

8. ಗೌರವ ಶಿಕ್ಷಕರಾಗಿ ಸೇವೆ ಸಲ್ಲಿಸಿದ ಬಗ್ಗೆ ಪಡೆದಿರುವ ಪ್ರಮಾಣ ಪತ್ರದ ದೃಢೀಕೃತ ಪ್ರತಿ. (ಮಾದರಿ ಪ್ರತಿಯನ್ನು ಅರ್ಜಿ–ಸಹಿತ–ಮಾಹಿತಿ–ಪುಸ್ತಕ ದಲ್ಲಿ ನೀಡಿದೆ).

9. ಅರೆಕಾಲಿಕ ಶಿಕ್ಷಕರಾಗಿ ಸೇವೆ ಸಲ್ಲಿಸಿದ ಬಗ್ಗೆ ಪಡೆದಿರುವ ಪ್ರಮಾಣ ಪತ್ರದ ದೃಢೀಕರಿಸಿದ ಪ್ರತಿ. (ಮಾದರಿ ಪ್ರತಿಯನ್ನು ಅರ್ಜಿ–ಸಹಿತ–ಮಾಹಿತಿ–ಪುಸ್ತಕ ದಲ್ಲಿ ನೀಡಿದೆ).

10. ಭಾರತೀಯ ಜನಗಣತಿ ಸಂಸ್ಥೆಯಲ್ಲಿ ಗುತ್ತಿಗೆ ಆಧಾರದ ಮೇಲೆ ನೇಮಕಾತಿ ಹೊಂದಿ, ಒಂದು ವರ್ಷಕ್ಕಿಂತ ಕಡಿಮೆ ಇಲ್ಲದಂತೆ ಸೇವೆ ಸಲ್ಲಿಸಿರುವ ಬಗ್ಗೆ ಸಕ್ಷಮ ಪ್ರಾಧಿಕಾರದಿಂದ ಪಡೆದಿರುವ ಪ್ರಮಾಣ ಪತ್ರದ ದೃಢೀಕರಿಸಿದ ಪ್ರತಿ.

11. ಎಸ್.ಎಸ್.ಎಲ್.ಸಿ ಮತ್ತು ಅಭ್ಯರ್ಥಿ ಅರ್ಜಿ ಸಲ್ಲಿಸಿರುವ ಹುದ್ದೆಗೆ ನಿಗಧಿಪಡಿಸಿರುವ ವಿದ್ಯಾರ್ಹತೆ ಪರೀಕ್ಷೆಯ ಎಲ್ಲಾ ವರ್ಷಗಳ ಮತ್ತು ಎಲ್ಲಾ ಪ್ರಯತ್ನಗಳ ಅಂಕಪಟ್ಟಿಗಳು ಮತ್ತು ತೇರ್ಗಡೆ ಹೊಂದಿರುವ ಬಗ್ಗೆ ಪಡೆದುಕೊಂಡಿರುವ ಪ್ರಮಾಣ ಪತ್ರದ ದೃಢೀಕರಿಸಿದ ಪ್ರತಿ.

12. ಅರ್ಜಿಯಲ್ಲಿ ಕೋರಿರುವ ಮಾಹಿತಿಗಳಿಗೆ ಸಂಬಂಧಿಸಿದಂತೆ ಅವಶ್ಯವೆಂದು ಕಂಡು ಬರುವ ದಾಖಲೆಗಳ ದೃಢೀಕರಿಸಿದ ಪ್ರತಿಗಳು.

**ವಿಶೇಷ ಸೂಚನೆ:–** ಅಭ್ಯರ್ಥಿಗೆ ಅನ್ವಯಿಸುವ ಮೇಲ್ಕಂಡ ಎಲ್ಲಾ ದಾಖಲೆಗಳ ದೃಢೀಕರಿಸಿದ ಪ್ರತಿಗಳನ್ನು ಅಭ್ಯರ್ಥಿಯು ಉಪನಿರ್ದೇಶಕರ ಕಛೇರಿಯಲ್ಲಿ ತನ್ನ ಅರ್ಜಿಯನ್ನು ಸಲ್ಲಿಸುವಾಗಲೇ ಲಗತ್ತಿಸಿ ಸಲ್ಲಿಸುವುದು. ನಂತರ ಯಾವುದೇ ಹೊಸ ದಾಖಲೆಗಳ ಪ್ರತಿಗಳನ್ನಾಗಲೀ ಅಥವಾ ಅರ್ಜಿ ಸಲ್ಲಿಸುವಾಗ ಕೈಬಿಟ್ಟುಹೋದ ದಾಖಲೆಯನ್ನಾಗಿ ಸಲ್ಲಿಸಲು ಅವಕಾಶವಿಲ್ಲ ಮತ್ತು ಯಾವುದೇ ಹಂತದಲ್ಲಿ ಸ್ವೀಕರಿಸಲಾಗುವುದಿಲ್ಲ.

**8. ವಿದ್ಯಾರ್ಹತೆಗಳು ಹಾಗೂ ವೇತನ ಶ್ರೇಣಿಗಳು:–**

**"ದಿ ಕರ್ನಾಟಕ ಎಜುಕೇಶನ್ ಡಿಪಾರ್ಟಮೆಂಟ್ ಸರ್ವಿಸಸ್ (ಡಿಪಾರ್ಟಮೆಂಟ್ ಆಫ ಪಬ್ಲಿಕ್ ಇನ್ಸಟ್ರಕ್ಷನ್) (ರಿಕ್ರೂಟ್‌ಮೆಂಟ್) ರೂಲ್ಸ್ 1967, ಇದಕ್ಕೆ ದಿನಾಂಕ:21–05–1998, 24–06–2003 ಮತ್ತು 17/06/2006ರಂದು ತಿದ್ದುಪಡಿ ಮಾಡಿ ಹಾಲಿ ಜಾರಿಯಲ್ಲಿರುವ ನೇಮಕಾತಿ ನಿಯಮಗಳ ಪ್ರಕಾರ,** ಹಾಗೂ ಪ್ರಚಲಿತದಲ್ಲಿರುವ ಇಲಾಖಾ ಆದೇಶಗಳನ್ವಯ ನಿಗಧಿಪಡಿಸಿರುವಂತೆ, ಅಧಿಸೂಚನೆಯ ದಿನಾಂಕವಾದ 18/05/2009 ರಂದು ಈ ಹುದ್ದೆಗೆ ಹೊಂದಿರಬೇಕಾದ ವಿದ್ಯಾರ್ಹತೆ ವಿವರಗಳು ಈ ರೀತಿ ಇದೆ.

**ಪ್ರೌಢ ಶಾಲಾ ಸಂಗೀತ ಶಿಕ್ಷಕರು ಗ್ರೇಡ್–2 (ಹಾಡುಗಾರಿಕೆ)**

(1) ಸರ್ಕಾರದಿಂದ ನಡೆಸಲ್ಪಟ್ಟಿರುವ ಎಸ್.ಎಸ್.ಎಲ್.ಸಿ ಪರೀಕ್ಷೆ ಅಥವಾ ಈ ಪರೀಕ್ಷೆಗೆ ತತ್ಸಮಾನ ಪರೀಕ್ಷೆ ಎಂದು ಸರ್ಕಾರವು ಮಾನ್ಯತೆ ನೀಡಿರುವ ಪರೀಕ್ಷೆಯನ್ನು ಪಾಸು ಮಾಡಿರಬೇಕು.

**ಮತ್ತು**

(2) ಸರ್ಕಾರದಿಂದ ನಡೆಸಲ್ಪಡುವ ಸಂಗೀತ ವಿಷಯದಲ್ಲಿ ಪ್ರೋಫೆಸಿಯನ್ಸಿ/ಪ್ರವೀಣ/ವಿದ್ವತ್/ವಿದ್ವಾನ್ ಪರೀಕ್ಷೆ ಅಥವಾ ಈ ಪರೀಕ್ಷೆಗಳಿಗೆ ತತ್ಸಮಾನ ಪರೀಕ್ಷೆ ಎಂದು ಸರ್ಕಾರವು ಮಾನ್ಯತೆ ನೀಡಿರುವ ಪರೀಕ್ಷೆಯನ್ನು ಪಾಸು ಮಾಡಿರಬೇಕು.

**(3) ತತ್ಸಮಾನ ಪರೀಕ್ಷೆಗಳು :** ಸರ್ಕಾರದ ಆದೇಶ ಸಂಖ್ಯೆ: ಇಡಿ/310/ಎಸ್ಎಲ್‌ಬಿ/91, ದಿ. 16.3.1992 ರ ಪ್ರಕಾರ;

**(ಅ)** ತಮಿಳನಾಡು ಸರ್ಕಾರದ ಸಂಗೀತ ವಿದ್ವಾನ್ 3 ವರ್ಷದ ಪರೀಕ್ಷೆಗಳು (ಇರೈತಲ್ಯೆಮಣಿ) (ಹಾಡುಗಾರಿಕೆ ಮಾತ್ರ)

**(ಆ)** ಸೆಂಟ್ರಲ್ ಕಾಲೇಜ್ ಆಫ್ ಕರ್ನಾಟಕ ಮ್ಯೂಸಿಕ್, ಮದ್ರಾಸ್ ಇವರು ನೀಡುವ 2 ವರ್ಷಗಳ ಸಂಗೀತ ವಿದ್ವಾನ್ ಕೋರ್ಸ್.

**(ಇ)** ವಿಶ್ವ ವಿದ್ಯಾಲಯದ ಧನಸಹಯೋಗ ಆಯೋಗದಿಂದ ಮನ್ನಣೆ ಪಡೆದಿರುವ ಒಂದು ಅಧಿಕೃತ ವಿಶ್ವವಿದ್ಯಾನಿಲಯದಿಂದ (ಬೆಂಗಳೂರು ವಿಶ್ವವಿದ್ಯಾಲಯವು ಸೇರಿದಂತೆ) ಸಂಗೀತ (ಹಾಡುಗಾರಿಕೆ) ದಲ್ಲಿ ಸ್ನಾತಕೋತ್ತರ ಪದವಿ. (ಮಾಸ್ಟರ್ ಡಿಗ್ರಿ ಇನ್ ಮ್ಯೂಸಿಕ್ (ಹಾಡುಗಾರಿಕೆ).

**ಟಿಪ್ಪಣಿ: ನೇರ ನೇಮಕಾತಿಯಲ್ಲಿ ಎಲ್ಲ ಅಂಶಗಳು ಸರಿ ಸಮಾನವಿದ್ದಲ್ಲಿ ಅಂಥ ಅಭ್ಯರ್ಥಿಗಳಿಗೆ ಮೊದಲ ಆದ್ಯತೆ ನೀಡಲಾಗುವುದು.**

**ವೇತನ ಶ್ರೇಣಿ: ರೂ. 7275–175–7800–200–8600–225–9500–250–10500–300–12300–350–13350**

**9. ವಯೋಮಿತಿ:–**

ಅಭ್ಯರ್ಥಿಗಳು ನೇಮಕಾತಿ ಅಧಿಸೂಚನೆ ದಿನಾಂಕವಾದ 18/05/2009 ರಂದು ಮುಂದೆ ತಿಳಿಸಿರುವ ಕನಿಷ್ಠ ಮತ್ತು ಗರಿಷ್ಠ ವಯೋಮಿತಿ ಹೊಂದಿರಬೇಕು.

**ಕನಿಷ್ಠ :** 20 ವರ್ಷಗಳು ತುಂಬಿರಬೇಕು.

**ಗರಿಷ್ಠ :**

| ಸಾಮಾನ್ಯ ವರ್ಗ | 40 ವರ್ಷಗಳನ್ನು ಮೀರಿರಬಾರದು |
|---|---|
| 2ಎ, 2ಬಿ, 3ಎ, 3ಬಿ | 43 ವರ್ಷಗಳನ್ನು ಮೀರಿರಬಾರದು |
| ಪ.ಜಾ/ಪ.ಪಂ/ಪ್ರವರ್ಗ-1 | 45 ವರ್ಷಗಳನ್ನು ಮೀರಿರಬಾರದು |

**10. ಆಯ್ಕೆ ವಿಧಾನ ಮತ್ತು ಅರ್ಹತೆ ನಿರ್ಧರಿಸುವುದು :-**

**ಅ) ಆಯ್ಕೆ ವಿಧಾನ:-**

ಅಭ್ಯರ್ಥಿಗಳನ್ನು **"ದಿ ಕರ್ನಾಟಕ ಎಜುಕೇಶನ್ ಡಿಪಾರ್ಟಮೆಂಟ್ ಸರ್ವಿಸಸ್ (ಡಿಪಾರ್ಟಮೆಂಟ್ ಆಫ ಪಬ್ಲಿಕ್ ಇನ್ಸಟ್ರಕ್ಷನ್) (ರಿಕ್ರೂಟಮೆಂಟ್) ರೂಲ್ಸ್ 1967, ಇದಕ್ಕೆ ದಿನಾಂಕ:21-05-1998, 24-06-2003 ಮತ್ತು 17-06-2006 ರಂದು ತಿದ್ದುಪಡಿ ಮಾಡಿ ಹಾಲಿ ಜಾರಿಯಲ್ಲಿರುವ ನೇಮಕಾತಿ ನಿಯಮಗಳ ಪ್ರಕಾರ,** ಈ ಹುದ್ದೆಗೆ ನಿಗಧಿ ಪಡಿಸಿರುವ ವಿದ್ಯಾರ್ಹತೆಗಳ ಎಲ್ಲಾ ಪಬ್ಲಿಕ್ ಪರೀಕ್ಷೆಗಳಲ್ಲಿ ಗಳಿಸಿದ ಅಂಕಗಳ ಸರಾಸರಿ ತೆಗೆದು ಮೆರಿಟ್ ಮತ್ತು ಸರ್ಕಾರದ ಪ್ರಚಲಿತ ಮೀಸಲಾತಿ ನಿಯಮಗಳನ್ವಯ (ನೇರ ಮತ್ತು ಸಮತಲ ಮೀಸಲಾತಿ) ಆಯ್ಕೆ ಮಾಡಲಾಗುವುದು.

**ಆ) ಅರ್ಹತೆ ನಿರ್ಧರಿಸುವುದು :-**

1. ಎಸ್.ಎಸ್.ಎಲ್.ಸಿ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಗಳಿಸಿದ ಒಟ್ಟು ಅಂಕಗಳ ಸರಾಸರಿ ಶೇಕಡಾ 50. ಮತ್ತು
2. ಈ ಹುದ್ದೆಗೆ ನಿಗಧಿಪಡಿಸಿರುವ ವೃತ್ತಿ (ಪ್ರೋಫೆಷನಲ್) ವಿದ್ಯಾರ್ಹತೆಯ ಪಬ್ಲಿಕ್ ಪರೀಕ್ಷೆಗಳಲ್ಲಿ ಗಳಿಸಿರುವ ಒಟ್ಟು ಅಂಕಗಳ ಶೇ.50.
3. ಮೇಲಿನ ಎರಡು ಪರೀಕ್ಷೆಗಳಲಿ ಗಳಿಸಿದ ಶೇಕಡಾ ಅಂಕಗಳ ಸರಾಸರಿ ಅಂಕಗಳನ್ನು ಅರ್ಹತಾ ಅಂಕಗಳೆಂದು ಪರಿಗಣಿಸಲಾಗುವುದು.
4. ಈ ಮೇಲಿನ ಒಟ್ಟು ಶೇಕಡಾ ಅಂಕಗಳಿಂದ ತಯಾರಿಸಲಾದ ಮೆರಿಟ್ ಲಿಸ್ಟ್‌ಗೆ ಅಭ್ಯರ್ಥಿಯು ಸರ್ಕಾರಿ ಪ್ರೌಢ ಶಾಲೆಗಳಲ್ಲಿ ಅಥವಾ ಸಂಯುಕ್ತ ಸರ್ಕಾರಿ ಪದವಿ ಪೂರ್ವ ಕಾಲೇಜುಗಳ (ಪ್ರೌಢ ಶಾಲಾ ವಿಭಾಗದಲ್ಲಿ) 'ಅರೆಕಾಲಿಕಾ' ಅಥವಾ 'ಗೌರವ ಶಿಕ್ಷಕರಾಗಿ' (ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರು/ ಸಹನಿರ್ದೇಶಕರಿಂದ ನೇಮಕಾತಿ ಹೊಂದಿರಬೇಕು) ಅಥವಾ ಭಾರತೀಯ ಜನಗಣತಿ ಸಂಸ್ಥೆಯಲ್ಲಿ ಗುತ್ತಿಗೆ ಆಧಾರದ ಮೇಲೆ ನೇಮಕಾತಿ ಹೊಂದಿ ಸೇವೆ ಸಲ್ಲಿಸುತ್ತಿರುವ / ಸೇವೆ ಸಲ್ಲಿಸಿದ್ದಲ್ಲಿ, ಹಾಗೇ ಸೇವೆ ಸಲ್ಲಿಸಿದ ಪ್ರತಿ ಪೂರ್ಣಗೊಂಡ ಒಂದು ವರ್ಷದ ಸೇವೆಗೆ, ಶೇಕಡಾ 2% ರಷ್ಟು ಕೃಪಾಂಕಗಳನ್ನು ನೇಮಕಾತಿ ನಿಯಮಗಳ ಪ್ರಕಾರ ಎಲ್ಲಾ ವಿದ್ಯಾರ್ಹತೆಗಳನ್ನು ಹೊಂದಿದ್ದಲ್ಲಿ ಅಂತಹ ಅಭ್ಯರ್ಥಿಗಳ ಸರಾಸರಿ ಶೇಕಡಾ ಅಂಕಗಳಿಗೆ ಸೇರಿಸಲಾಗುವುದು.

**11. ಮೀಸಲಾತಿ ಅವಕಾಶಗಳು:-**

ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ/08/ಸಹಿಮ/95 ದಿ:20/06/1995 ಮತ್ತು ಸಿಆಸುಇ/53/ಸೇನೇನಿ/2007. ದಿ:04/01/2008 ರ ಮೀಸಲಾತಿ (ನೇರ ಮತ್ತು ಸಮತಲ) ನಿಯಮಗಳ ಪ್ರಕಾರ ಹುದ್ದೆಗಳನ್ನು ವರ್ಗೀಕರಿಸಿ ಭರ್ತಿಸಲಾಗುವುದು.

ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ/08/ಸಹಿಮ/95 ದಿನಾಂಕ 20-06-1995 ರನ್ವಯ ಜಾರಿಯಲ್ಲಿರುವ ಮೀಸಲಾತಿ ನಿಯಮಗಳ ಪ್ರಕಾರ ಲಭ್ಯವಿರುವ ರಿಕ್ತ ಸ್ಥಾನಗಳನ್ನು ಈ ಕೆಳಕಂಡ ಪ್ರಮಾಣದಲ್ಲಿ ನಿಯಮಾನುಸಾರ ಮೀಸಲಿರಿಸಲಾಗಿದೆ.

| 1 | ಸಾಮಾನ್ಯ ಅರ್ಹತೆ | ಶೇ 50 |
|---|---|---|
| 2 | ಪರಿಶಿಷ್ಠ ಜಾತಿ | ಶೇ 15 |
| 3 | ಪರಿಶಿಷ್ಠ ಪಂಗಡ | ಶೇ 03 |
| 4 | ಪ್ರವರ್ಗ-1 | ಶೇ 04 |
| 5 | ಪ್ರವರ್ಗ-2ಎ | ಶೇ 15 |
| 6 | ಪ್ರವರ್ಗ-2ಬಿ | ಶೇ 04 |
| 7 | ಪ್ರವರ್ಗ-3ಎ | ಶೇ 04 |
| 8 | ಪ್ರವರ್ಗ-3ಬಿ | ಶೇ 05 |
| | **ಒಟ್ಟು** | **ಶೇ 100** |

ಮೇಲೆ ವಿವರಿಸಿದ ಸಾಮಾನ್ಯ ಅರ್ಹತೆ ಸೇರಿದಂತೆ ಪ್ರತಿ ಮೀಸಲಾತಿ ಪ್ರವರ್ಗಗಳಿಗೆ ಈ ಕೆಳಕಂಡ ಆದೇಶಗಳ ಪ್ರಕಾರ **"ಸಮತಲ ಮೀಸಲಾತಿ"** ಅನ್ವಯ (Horizontal reservation) ಹುದ್ದೆಗಳನ್ನು ವರ್ಗೀಕರಿಸಲಾಗಿದೆ.

| | | |
|---|---|---|
| 1. ಮಾಜಿ ಸೈನಿಕರಿಗೆ | ಶೇ 10 | ಕರ್ನಾಟಕ ಸಿವಿಲ್ ಸರ್ವಿಸಸ್ (ಜನರಲ್ ರೆಕ್ರೂಟಮೆಂಟ್)ರೂಲ್ಸ್ 1977 ರ ನಿಯಮ 9(1)ರ ಅನ್ವಯ ಹಾಗೂ ಸರಕಾರದ ಆದೇಶಸಂಖ್ಯೆ:ಸಿಆಸುಇ 53 ಸೇನೆನಿ 2007 ದಿನಾಂಕ 04/01/2008 |
| 2. ಅಂಗವಿಕಲರಿಗೆ | ಶೇ. 5 | ಕರ್ನಾಟಕ ಸಿವಿಲ್ ಸರ್ವಿಸಸ್ (ಜನರಲ್ ರೆಕ್ರೂಟಮೆಂಟ್) ರೂಲ್ಸ್ 1977 ರ ನಿಯಮ 9(1) ರ ಅನ್ವಯ ಹಾಗೂ ಸರಕಾರದ ಆದೇಶಸಂಖ್ಯೆ ಸಿಆಸುಇ 53 ಸೇನೆನಿ 2007 ದಿನಾಂಕ 04/01/2008 |
| 3. ಮಹಿಳಾ ಅಭ್ಯರ್ಥಿಗಳಿಗೆ | ಶೇ.30 | ಕರ್ನಾಟಕ ಸಿವಿಲ್ ಸರ್ವಿಸಸ್ (ಜನರಲ್ ರೆಕ್ರೂಟಮೆಂಟ್) ರೂಲ್ಸ್ 1977 ರ ನಿಯಮ 9(1) ರ ಅನ್ವಯ ಹಾಗೂ ಸರಕಾರದ ಆದೇಶಸಂಖ್ಯೆ ಸಿಆಸುಇ 53 ಸೇನೆನಿ 2007 ದಿನಾಂಕ 04/01/2008 ಹಾಗೂ ಸರ್ಕಾರದ ಸುತ್ತೋಲೆ ಸಂಖ್ಯೆ. ಸಿ.ಆ.ಸು.ಇ.16. ಸೇ. ನೇ. ನಿ.2008 ದಿನಾಂಕ.01-09-2008 ರ ಪ್ರಕಾರ ಪರಿಗಣಿಸಲಾಗುವುದು. |
| 4. ಯೋಜನೆಗಳಿಂದ ನಿರಾಶ್ರಿತ ಅಭ್ಯರ್ಥಿ/ "ಕುಟುಂಬ"ದ ಅಭ್ಯರ್ಥಿಗಳಿಗಾಗಿ | ಶೇ.5 | ಸರಕಾರದ ಅಧಿಸೂಚನೆ ಸಂಖ್ಯೆ ಡಿಪಿಎಆರ್/23 ಎಸ್.ಆರ್.ಆರ್.99 ದಿನಾಂಕ 23-11-2000 ಮತ್ತು ಸರಕಾರದ ಆದೇಶ ಸಂಖ್ಯೆ:ಸಿಆಸುಇ 53 ಸೇನೆನಿ 2007 ದಿನಾಂಕ 04/01/2008 |
| 5. ಗ್ರಾಮೀಣ ಅಭ್ಯರ್ಥಿ | ಶೇ.25 | ಕರ್ನಾಟಕ ಗ್ರಾಮೀಣ ಅಭ್ಯರ್ಥಿಗಳಿಗಾಗಿ (ರಾಜ್ಯ ಸಿವಿಲ್ ಸೇವೆಗಳಲ್ಲಿ) ನೇಮಕಾತಿಗಳ ಅಥವಾ ಹುದ್ದೆಗಳ ಮೀಸಲಾತಿ ಅಧಿನಿಯಮ 2000 ಇದರ ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ08ಸೇನೆನಿ2001 ದಿನಾಂಕ:13/02/2001. ಹಾಗೂ ಸರಕಾರದ ಆದೇಶ ಸಂಖ್ಯೆ:ಸಿಆಸುಇ 53 ಸೇನೆನಿ 2007 ದಿನಾಂಕ 04/01/2008 |
| 6. ಕನ್ನಡ ಮಾಧ್ಯಮದ ಅಭ್ಯರ್ಥಿಗಳಿಗಾಗಿ | ಶೇ. 5 | ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್-71ಎಸ್.ಆರ್.ಆರ್. 2001 ದಿನಾಂಕ 24/10/2002 ಮತ್ತು ಸರ್ಕಾರದ ಆದೇಶಸಂಖ್ಯೆ ಸಿಆಸುಇ 53 ಸೇನೆನಿ 2007 ದಿನಾಂಕ 04/01/2008 |

ಮಹಿಳಾ ಅಭ್ಯರ್ಥಿಗಳಿಗಾಗಿ ಮೀಸಲಿರಿಸಿರುವ ರಿಕ್ತ ಸ್ಥಾನಗಳಿಗೆ ಅರ್ಹ ಮಹಿಳಾ ಅಭ್ಯರ್ಥಿಗಳು ದೊರೆಯದಿದ್ದಲ್ಲಿ ಅಂತಹ ರಿಕ್ತ ಸ್ಥಾನಗಳನ್ನು ಆಯಾ ವರ್ಗಕ್ಕೆ ಸೇರಿದ ಪುರುಷ ಅಭ್ಯರ್ಥಿಗಳಿಂದ ಭರ್ತಿ ಮಾಡಲಾಗುವುದು.

ಮುಂದುವರೆದು, ಆಯ್ಕೆಪಟ್ಟಿಯನ್ನು ಸಿದ್ಧಪಡಿಸುವಾಗ ಸಮತಳ ಮೀಸಲಾತಿಗೆ ಸಂಬಂಧಿಸಿದಂತೆ ಗೌರವಾನ್ವಿತ ಸರ್ವೋಚ್ಚ ನ್ಯಾಯಾಲಯವು ವಿವರಿಸಿರುವ ಕಾರ್ಯವಿಧಾನವನ್ನು ಸರ್ಕಾರವು ಸುತ್ತೋಲೆ ಸಂಖ್ಯೆ: ಸಿಆಸುಇ 16 ಸೇನೆನಿ 2008, ದಿ. 1.9.2008ರಲ್ಲಿ ಆದೇಶಿರುವಂತೆ ಅಳವಡಿಸಿಕೊಳ್ಳಲಾಗುವುದು.

ಮಾಜಿ ಸೈನಿಕ, ಯೋಜನಾ ನಿರಾಶ್ರಿತ, ಗ್ರಾಮೀಣ ಅಭ್ಯರ್ಥಿ, ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಅಭ್ಯರ್ಥಿಗಳಿಗೆ ಮೀಸಲಿರಿಸಿದ ರಿಕ್ತ ಸ್ಥಾನಗಳಿಗೆ ಅರ್ಹ ಅಭ್ಯರ್ಥಿಗಳು ಲಭ್ಯವಾಗದಿದ್ದಲ್ಲಿ ಅಂತಹ ರಿಕ್ತ ಸ್ಥಾನಗಳನ್ನು ಆಯಾ ವರ್ಗಕ್ಕೆ ಸೇರಿದ ಇತರೆ ಅರ್ಹ ಅಭ್ಯರ್ಥಿಗಳಿಂದ ಭರ್ತಿ ಮಾಡಲಾಗುವುದು.

ಅರ್ಹ ಅಂಗವಿಕಲ ಅಭ್ಯರ್ಥಿಗಳು ದೊರೆಯದಿದ್ದಲ್ಲಿ ಅಂತಹ ರಿಕ್ತ ಸ್ಥಾನಗಳನ್ನು ಭರ್ತಿ ಮಾಡದೇ ಬ್ಯಾಕ್ ಲಾಗ್ ಹುದ್ದೆಗಳೆಂದು ಪರಿಗಣಿಸಲಾಗುವುದು.

**12. ಹುದ್ದೆಗಳ ವರ್ಗೀಕರಣ;**

ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 08 ಸಹಿಮ 95 ದಿನಾಂಕ 20-06-1995 ಮತ್ತು ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 53 ಸೇ.ನೇ.ನಿ.2007 ದಿನಾಂಕ 04-01-2008 ಪ್ರಕಾರ ವಿಷಯವಾರು ಹುದ್ದೆಗಳನ್ನು ಅನುಬಂಧ-1 ರಲ್ಲಿ ವರ್ಗೀಕರಿಸಿದೆ.

**ಸೂಚನೆ: ಈಗ ಅಧಿಸೂಚಿಸಿರುವ ಹುದ್ದೆಗಳ ಸಂಖ್ಯೆ ಮತ್ತು ವರ್ಗೀಕರಣವು ಅವಶ್ಯವಿದ್ದಲ್ಲಿ ವ್ಯತ್ಯಾಸಕ್ಕೆ ಒಳಪಟ್ಟಿರುತ್ತದೆ.**

**ಮೀಸಲಾತಿ ಸೌಲಭ್ಯ ಪಡೆಯಲು ಅಭ್ಯರ್ಥಿಗಳು ಸಲ್ಲಿಸಬೇಕಾದ ಪ್ರಮಾಣ ಪತ್ರಗಳು:**

ಅ) ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ ಮತ್ತು ಹಿಂದುಳಿದ ಪ್ರವರ್ಗ -1 ಕ್ಕೆ ಸೇರಿದ ಅಭ್ಯರ್ಥಿಗಳು ಸರ್ಕಾರದ ಅಧಿಸೂಚನೆ ಸಂಖ್ಯೆ ಎಸ್‌ಡಬ್ಲ್ಯೂಡಿ 132 ಎಸ್‌ಎಡಿ 97 ದಿನಾಂಕ 08-02-2000 ಮತ್ತು ಹಿಂದುಳಿದ ಪ್ರವರ್ಗಗಳಾದ ಪ್ರವರ್ಗ -2 ಎ , 2ಬಿ, 3 ಎ, ಮತ್ತು 3ಬಿ ಗೆ ಸೇರಿದ ಅಭ್ಯರ್ಥಿಗಳು ಸರ್ಕಾರದ ಆದೇಶ ಸಂಖ್ಯೆ: ಎಸ್‌ಡಬ್ಲ್ಯೂಡಿ 126 ಬಿಸಿಎ ದಿನಾಂಕ 13-02-2003 ರಂದು ಹೊರಡಿಸಿದ **"ಕರ್ನಾಟಕ ಅನುಸೂಚಿತ ಜಾತಿಗಳು, ಅನುಸೂಚಿತ ಬುಡಕಟ್ಟುಗಳು, ಮತ್ತು ಇತರೆ ಹಿಂದುಳಿದ ವರ್ಗಗಳ (ನೇಮಕಾತಿ ಮುಂತಾದ ಮೀಸಲಾತಿ) (ತಿದ್ದುಪಡಿ) ನಿಯಮಗಳು 2000"** ರನ್ವಯ ನಿಗದಿಪಡಿಸಿರುವ ಅಭ್ಯರ್ಥಿಗಳಿಗೆ ಅನ್ವಯಿಸುವ ಕೆಳಕಂಡ ನಮೂನೆಗಳಲ್ಲಿಯೇ ಸಂಬಂಧಿಸಿದ ವ್ಯಾಪ್ತಿಯ ತಹಸೀಲ್ದಾರರ ದರ್ಜೆಗಿಂತ ಕಡಿಮೆ ಇಲ್ಲದ ರೆವಿನ್ಯೂ ಪ್ರಾಧಿಕಾರಿಯಿಂದ ಪ್ರಮಾಣ ಪತ್ರವನ್ನು ಪಡೆದಿರಬೇಕು.

| 1 | ಅನುಸೂಚಿತ ಜಾತಿ ಅಥವಾ ಅನುಸೂಚಿತ ಪಂಗಡಕ್ಕೆ ಸೇರಿದ ಅಭ್ಯರ್ಥಿಗಳು | ನಮೂನೆ –ಡಿ (ನಿಯಮ 3ಎ(2)(3), ಸರ್ಕಾರದ ಆದೇಶ ಸಂಖ್ಯೆ: ಎಸ್.ಡಬ್ಲ್ಯೂಡಿ 132 ಎಸ್.ಎ.ಡಿ. 97 ದಿನಾಂಕ 08–02–2000. |
|---|---|---|
| 2 | ಹಿಂದುಳಿದ ಪ್ರವರ್ಗ 1ಕ್ಕೆ ಸೇರಿದ ಅಭ್ಯರ್ಥಿಗಳು | ನಮೂನೆ –ಇ (ನಿಯಮ 3ಎ(2)(3), ಸರ್ಕಾರದ ಆದೇಶ ಸಂಖ್ಯೆ: ಎಸ್.ಡಬ್ಲ್ಯೂಡಿ 132 ಎಸ್.ಎ.ಡಿ. 97 ದಿನಾಂಕ 08–02–2000. |
| 3 | ಹಿಂದುಳಿದ ಪ್ರವರ್ಗ 2ಎ, 2ಬಿ, 3ಎ, ಮತ್ತು 3ಬಿ ಗೆ ಸೇರಿದ ಅಭ್ಯರ್ಥಿಗಳು | ನಮೂನೆ : ಎಫ್. (ನಿಯಮ 3ಎ(2)(3), ಸರ್ಕಾರದ ಆದೇಶ ಸಂಖ್ಯೆ: ಎಸ್.ದಬ್ಲ್ಯೂಡಿ 126 ಬಿಸಿಎ ದಿನಾಂಕ 13–02–2003 |

**ಮೇಲ್ಕಂಡ ಮೀಸಲಾತಿ ಪ್ರಮಾಣ ಪತ್ರಗಳು ಉಲ್ಲೇಖಿಸಿರುವ ನಿಯಮಗಳ ಪ್ರಕಾರ ಚಾಲ್ತಿಯಲ್ಲಿರಬೇಕು. ಚಾಲ್ತಿಯಲ್ಲಿರದ ಮೀಸಲಾತಿ ಪ್ರಮಾಣ ಪತ್ರಗಳನ್ನು ತಿರಸ್ಕರಿಸಲಾಗುವುದು.**

**ಅ) ಗ್ರಾಮೀಣ ಅಭ್ಯರ್ಥಿಗಳು:**

ಗ್ರಾಮೀಣ ಅಭ್ಯರ್ಥಿ ಎಂದರೆ ಕರ್ನಾಟಕ ಪೌರನಿಯಮಗಳ ಅಧಿನಿಯಮ 1976 ಅಥವಾ ಕರ್ನಾಟಕ ಪೌರಸಭೆಗಳ ಆಧಿನಿಯಮ 1964 ರಡಿಯಲ್ಲಿ ನಿರ್ದಿಷ್ಟಪಡಿಸಿದ ಒಂದು ದೊಡ್ಡ ಪ್ರದೇಶ, ಸಣ್ಣನಗರ ಪ್ರದೇಶ ಅಥವಾ ಪರಿವರ್ತನೆ ಹಂತದಲ್ಲಿರುವ ಪ್ರದೇಶ ಹೊರತಾಗಿ ಇತರೆ ಯಾವುದೇ ಪ್ರದೇಶದಲ್ಲಿರುವ ಶಾಲೆಯಲ್ಲಿ 1ನೇ ತರಗತಿಯಿಂದ 10 ನೇ ತರಗತಿಯವರೆಗೆ ವ್ಯಾಸಂಗ ಮಾಡಿದ ಅಭ್ಯರ್ಥಿ.

**ಗ್ರಾಮೀಣ ಅಭ್ಯರ್ಥಿಗಳ ಮೀಸಲಾತಿ ಅಡಿಯಲ್ಲಿ ಅರ್ಜಿ ಸಲ್ಲಿಸುವ ಅಭ್ಯರ್ಥಿಗಳು ಸಂಬಂಧಿಸಿದ ಪ್ರಮಾಣ ಪತ್ರಗಳನ್ನ** ಸರಕಾರಿ ಆದೇಶ ಸಂಖ್ಯೆ: ಡಿಪಿಎಆರ್ 96 ಸೇನೆನಿ 2005 ದಿನಾಂಕ 10–08–2005 **ರಲ್ಲಿ ನೀಡಿದ ನಿಗದಿತ ನಮೂನೆಯಲ್ಲಿ ಮಾತ್ರ ಸಲ್ಲಿಸಬೇಕು.**

**ಸೂಚನೆಗಳು :**

ಸದರಿ ಅಧಿನಿಯಮದಲ್ಲಿ "**ಗ್ರಾಮೀಣ ಅಭ್ಯರ್ಥಿಯನ್ನು**" ಈ ಕೆಳಗೆ ಉದ್ಧರಿಸಿದಂತೆ ಪರಿಭಾಷಿಸಲಾಗಿದೆ.

1. ಗ್ರಾಮೀಣ ಅಭ್ಯರ್ಥಿ ಎಂದರೆ ಒಂದು ಹುದ್ದೆಗಾಗಿ ನಿಗಧಿಪಡಿಸಲಾದ ಅರ್ಹತಾ ಪರೀಕ್ಷೆಯು ಎಸ್.ಎಸ್.ಎಲ್.ಸಿ ಅಥವಾ ಉನ್ನತ ಪರೀಕ್ಷೆಯಾಗಿದ್ದಲ್ಲಿ 1ನೇ ತರಗತಿಯಿಂದ 10ನೇ ತರಗತಿಯವರೆಗೆ.
2. ಒಂದು ಹುದ್ದೆಗೆ ನಿಗಧಿ ಪಡಿಸಲಾದ ಅರ್ಹತಾ ಪರೀಕ್ಷೆಯು ಎಸ್.ಎಸ್.ಎಲ್.ಸಿಗಿಂತ ಕಡಿಮೆಯಾಗಿದ್ದಲ್ಲಿ 1ನೇ ತರಗತಿಯಿಂದ ಅರ್ಹತಾ ಪರೀಕ್ಷೆಯವರೆಗೆ:
3. ಸಾಮಾನ್ಯ ವರ್ಗದ ಅಭ್ಯರ್ಥಿಗಳು ನಮೂನೆ–1ರಲ್ಲಿ ಅಂದರೆ, ಮೇಲುಸ್ಥರದಲ್ಲಿ (Creamy layer) ಬರುವುದಿಲ್ಲವೆಂದು ಸಂಬಂಧಿಸಿದ ತಹಸೀಲ್ದಾರರವರಿಂದ ಪಡೆದ ಪ್ರಮಾಣ ಪತ್ರ ನಮೂನೆ–1ರಲ್ಲಿ ಪತ್ರವನ್ನು ಸಲ್ಲಿಸತಕ್ಕದ್ದು.
4. ಪ್ರವರ್ಗ–1, 2ಎ, 2ಬಿ, 3ಎ, 3ಬಿ, ಪರಿಶಿಷ್ಠ ಜಾತಿ ಮತ್ತು ಪರಿಶಿಷ್ಠ ಪಂಗಡಕ್ಕೆ ಸೇರಿದ ಅಭ್ಯರ್ಥಿಗಳು ತಮ್ಮ ಮೀಸಲಾತಿ ಪ್ರಮಾಣ ಪತ್ರದ ಜೊತೆಗೆ ಸರ್ಕಾರದ ಆದೇಶ ದಿನಾಂಕ:10/08/2005 ರಲ್ಲಿ ನಿಗಧಿ ಪಡೆಸಲಾದ ನಮೂನೆ–2ರಲ್ಲಿ ಗ್ರಾಮೀಣ ವ್ಯಾಸಂಗ ಪ್ರಮಾಣ ಪತ್ರವನ್ನು ಸಲ್ಲಿಸತಕ್ಕದ್ದು.

**ಈ ಬಗ್ಗೆ ನಿಖರ ಮಾಹಿತಿಗಾಗಿ ಸಂಬಂಧಪಟ್ಟ ಮಹಾನಗರಸಭೆ/ ನಗರ ಸಭೆ/ ಪುರಸಭೆ/ ಪಟ್ಟಣ ಪಂಚಾಯ್ತಿ/** ಮಂಡಲ **ಪಂಚಾಯ್ತಿ/ ಗ್ರಾಮ ಪಂಚಾಯ್ತಿಯ ಅಧಿಕಾರಿಗಳನ್ನು ಸಂಪರ್ಕಿಸಲು ತಿಳಿಸಿದೆ.**

**ವಿಶೇಷ ಸೂಚನೆ :– (1)** ಸರ್ಕಾರದ ಆದೇಶ ಸಂಖ್ಯೆ : ಡಿಪಿಎಆರ್ 96 ಸೇನೇನಿ 2005 ದಿನಾಂಕ : 10.8.2005ರ ನಮೂನೆ–2ರಲ್ಲಿ ನೀಡಿದ ವ್ಯಾಸಂಗ ಪ್ರಮಾಣ ಪತ್ರಗಳನ್ನು ನೇಮಕಾತಿ ಅಧಿಸೂಚನೆ ದಿನಾಂಕದ ನಂತರ, ಅರ್ಜಿ ಸಲ್ಲಿಸುವ ಕೊನೆಯ ದಿನಾಂಕದೊಳಗೆ ಪಡೆದು ಅರ್ಜಿಯೊಡನೆ ಲಗತ್ತಿಸತಕ್ಕದ್ದು. ಈ ಹಿಂದೆ ಪಡೆಯಲಾದ ಪ್ರಮಾಣ ಪತ್ರಗಳನ್ನು ಪರಿಗಣಿಸಲಾಗುವುದಿಲ್ಲ.

**(2)** 1995 ರಿಂದ ಅನೇಕ ಪ್ರದೇಶಗಳು ಪರಿವರ್ತಿತ ಪ್ರದೇಶಗಳೆಂದು ಗುರುತಿಸಲ್ಪಟ್ಟಿದ್ದು, ತದನಂತರ ಪುರಸಭೆ/ನಗರ ಸಭೆಗಳಾಗಿ ಅಧಿಸೂಚಿಸಲ್ಪಟ್ಟಿದೆ. ಅಭ್ಯರ್ಥಿಯು ವ್ಯಾಸಂಗ ಮಾಡುವ ಅವಧಿಯಲ್ಲಿ ಸದರಿ ಪ್ರದೇಶವು ಗ್ರಾಮೀಣ ಪ್ರದೇಶವೋ ಅಥವಾ ಪರಿವರ್ತಿತ ಪ್ರದೇಶ ಎಂದು ಗುರುತಿಸಲ್ಪಟ್ಟಿದೆಯೋ ಇಲ್ಲವೋ ಎಂಬ ಬಗ್ಗೆ ಸ್ಥಳೀಯ ಪುರಸಭೆ, ನಗರ ಸಭೆ ಅಥವಾ ಪಟ್ಟಣ ಪಂಚಾಯಿತಿಯ ಅಧಿಕಾರಿಗಳಿಂದ ನಿಖರ ಮಾಹಿತಿ (ಸರ್ಕಾರದ ಅಧಿಸೂಚನೆಯೊಂದಿಗೆ) ಪಡೆದ ನಂತರ ಪ್ರಮಾಣ ಪತ್ರ ನೀಡಲು, ಮೇಲು ಸಹಿ ಮಾಡಲು ಸಕ್ಷಮ ಪ್ರಾಧಿಕಾರಿಗಳು ಕ್ರಮ ತೆಗೆದುಕೊಳ್ಳುವುದು.

**ಆ) ಅಂಗವಿಕಲ ಅಭ್ಯರ್ಥಿಗಳು:**

ಸರ್ಕಾರದ ಆದೇಶ ಸಂಖ್ಯೆ: ಡಿಪಿಎಆರ್ 52 ಎಸ್.ಆರ್..ಆರ 99 ದಿನಾಂಕ; 29–11–2002 ರಲ್ಲಿ ನಿಗದಿಪಡಿಸಿರುವ ಅಂಗವಿಕಲ ಅಭ್ಯರ್ಥಿಗಳನ್ನು ಮಾತ್ರ ಪರಿಗಣಿಸಲಾಗುವುದು. ಸರ್ಕಾರಿ ಆದೇಶ ಸಂಖ್ಯೆ:ಎಂ.ಎಂ.ಇ.107. ಪಿ.ಹೆಚ್.ಪಿ/2003 ದಿನಾಂಕ 11/07/2003 ರಲ್ಲಿ ವೈದ್ಯಕೀಯ ಪ್ರಮಾಣ ಪತ್ರವನ್ನು ಸಕ್ಷಮ ವೈದ್ಯಾಧಿಕಾರಿಗಳಿಂದ ಪಡೆದಿರಬೇಕು. ಈ ಪ್ರಮಾಣ ಪತ್ರವನ್ನು ಅರ್ಜಿ

ಸ್ವೀಕರಿಸಲು ನಿಗದಿಪಡಿಸಿರುವ ಕಡೆಯ ದಿನಾಂಕದೊಳಗೆ ಅಭ್ಯರ್ಥಿಯು ಪಡೆದುಕೊಂಡಿರಬೇಕು. ಹಾಗೂ ನಿಯಮಾನುಸಾರ ಕನಿಷ್ಠ ಅಂಗವಿಕಲತೆ ಪ್ರಮಾಣವನ್ನು ಹೊಂದಿರಬೇಕು.

ಸರ್ಕಾರಿ ಅಧಿಸೂಚನೆ ಸಂಖ್ಯೆ: ಡಿಪಿಎಆರ್.52 ಎಸ್.ಆರ್ಆರ್99 ದಿನಾಂಕ: 29–11–2002 ರ ಪ್ರಕಾರ Persons with disabilities (equal opportunities, protection of rights & full participation) Act 1995 ಅಧಿನಿಯಮದ ಸೆಕ್ಷನ್ 32 ರ ಪ್ರಕಾರ ರಾಜ್ಯ ಸರ್ಕಾರವು ವಿವಿಧ ಇಲಾಖೆಗಳಲ್ಲಿ ಅಂಗವಿಕಲರು ನಿರ್ವಹಿಸಬಹುದಾದ ಹುದ್ದೆಗಳನ್ನು ಗುರುತಿಸಿದೆ. ಸದರಿ ಅಧಿಸೂಚನೆಯ ಪುಟ–21 ರಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆಗೆ ಸಂಬಂಧಿಸಿದಂತೆ ಅಂಗವಿಕಲ ಅಭ್ಯರ್ಥಿಗಳಿಗೆ ಗುರುತಿಸಿರುವ ಹುದ್ದೆಗಳ ಉದ್ಧೃತವನ್ನು ಈ ಕೆಳಗೆ ನೀಡಲಾಗಿದೆ.

| Sl.No. 68. | |
|---|---|
| Name of the Dept - Public Instruction | |
| Blind | Music Teacher Gr.1 & II (HS) |
| Low Vision | MusicTr Gr.1 & II (HS) Packer, Counter, Grp. D - Sweeper, Cleaner, Peon |
| Leprosy Cured | Pri School HM, Sr Librarian, Gr.1 & II Pry. School Teacher /Drawing, Music, Art Master (SSLC with Asst.Master Certi)Sec.sch Asst II,Tr-1, Asst. Agri. Teacher, Pri.Sch Tr, Trained & Untrained, FDA, SDA, Drama, Craft, Hindi Trs. Group-D Post: Lift Attender, Peon/Packer/Carrien Counter Cleaner, Pacher, Attender |
| Hearing Impaired | PriSchool HM, Sr Librarian, Pry. Schools Nursery school Tr Drawing, Art Master(SSLC with Asst.MasterCertificate) Sec School Assistant-II, Tr Gr-I , Asst Agricultural Teacher, Pry. School Tr, Trained & Untrained Drama Teacher, FDA, SDA, Craft, Hindi Tr, Group D Post. Attender/Lift Attender/ Packers/Caariern/Counter/Pacher/Peon/Cleaner,Sweeper |
| Locomotor Disability | Primary School HM, Nursery School Teacher / Mother, Librarian State education Library, FDA, Drawing Art master(SSLC with Asst Master cert) Secondary school Asst Gr II, Teacher, Gr-1, Asst.craft and Hindi teacher, Group D, Post Attender/Lift Attender, Packers / Carriern/Counter/Pacher, Peon/Cleaner |
| Mentally Ill | Pry.School HM, Sr.Librarian, Pry.Schools,Nursery school Teacher/Drawing Asst Master(SSLC with Asst Master Certificate), Sec.School Asst-II, Teacher-I, Asst.Agri. Teacher, Pry.Sch. Tr, Trained & Untrained, FDA, SDA, Craft & Hindi Teacher, Group D Post. Lift Attender/Pachers/Caarreon/ Counter / Pacher / Peon / Cleaner, Sweeper |
| Mentally Retarded | |

ಅಂಗವಿಕಲ ಅಭ್ಯರ್ಥಿಗಳು ಸರ್ಕಾರದ ಆದೇಶ ಸಂಖ್ಯೆ ಎಂ.ಎಂ.ಇ.107ಪಿಹೆಚ್.ಪಿ 2003 ದಿನಾಂಕ: 11–07–2003 ರನ್ವಯ ನಿಗದಿತ ನಮೂನೆಯಲ್ಲಿ ಅಂಗವಿಕಲತೆಯ ಬಗ್ಗೆ ಸಂಬಂಧಪಟ್ಟ ಜಿಲ್ಲಾ ವೈದ್ಯಕೀಯ ಮಂಡಳಿಯು ನೀಡುವ ಪ್ರಮಾಣ ಪತ್ರವನ್ನು ಪಡೆದು ಅದರ ಸ್ವದೃಢೀಕೃತ ಪ್ರತಿಯನ್ನು ಅರ್ಜಿಗೆ ಲಗತ್ತಿಸಬೇಕು. ಅವರು ಆಯ್ಕೆಯಾದ ಪಕ್ಷದಲ್ಲಿ ಅದರ ಮೂಲ ಪ್ರತಿಯನ್ನು ನೇಮಕಾತಿ ಪ್ರಾಧಿಕಾರಿಗಳಿಗೆ ಸಲ್ಲಿಸಬೇಕು. ಅಂಗವಿಕಲರೆಂದು ವೈದ್ಯಕೀಯ ಪ್ರಮಾಣ ಪತ್ರದ ಆಧಾರದ ಮೇಲೆ ಅಂಗವಿಕಲ ಮೀಸಲಾತಿ ಹುದ್ದೆಯಲ್ಲಿ ನೇಮಕಾತಿ ಹೊಂದಿ ಸೇವೆ ಸಲ್ಲಿಸುತ್ತಿದ್ದವರು ಬೇರೆ ಯಾವುದೇ ಹುದ್ದೆಗೆ ಕಛೇರಿ ಮುಖ್ಯಸ್ಥರ ಮುಖಾಂತರ ಅರ್ಜಿಯನ್ನು ಸಲ್ಲಿಸಿದಾಗ ಅವರು ಪುನಃ ವೈದ್ಯಕೀಯ ಪ್ರಮಾಣ ಪತ್ರವನ್ನು ಸಲ್ಲಿಸುವ ಅವಶ್ಯಕತೆ ಇರುವುದಿಲ್ಲ. ಅರ್ಜಿಯನ್ನು ಆಯ್ಕೆ ಪ್ರಾಧಿಕಾರಿಗೆ ಕಳುಹಿಸುವಾಗ, ಅರ್ಜಿದಾರನು ಅಂಗವಿಕಲ ಮೀಸಲಾತಿಯ ಹುದ್ದೆಗೆ ಆಯ್ಕೆಯಾದವನು ಎಂಬ ಪ್ರಮಾಣ ಪತ್ರದೊಡನೆ ಮೇಲಾಧಿಕಾರಿಗಳು ಅರ್ಜಿಯನ್ನು ಕಳುಹಿಸಿಕೊಡುವುದು.

ಇ) **ಮಾಜಿ ಸೈನಿಕರ ಗುಂಪಿನಲ್ಲಿ ಆಯ್ಕೆ ಬಯಸುವ ಅಭ್ಯರ್ಥಿಗಳಿಗೆ ಸೂಚನೆಗಳು:**

ಮಾಜಿ ಸೈನಿಕರ ಗುಂಪಿನಲ್ಲಿ ಆಯ್ಕೆಗೆ ಕೆಳಗಿನವರು ಅರ್ಹರು:–

(1) ಮಾಜಿ ಸೈನಿಕ ಎಂದರೆ ಸಶಸ್ತ್ರ ದಳಗಳಾದ ನಿಯಮಿತ ಭೂದಳ, ನೌಕಾದಳ ಮತ್ತು ವಾಯುದಳದಲ್ಲಿ ಯಾವುದೇ ಶ್ರೇಣಿಯಲ್ಲಿ (ಯೋಧ ಅಥವಾ ಅಯೋಧನಾಗಿ) ಸೇವೆ ಸಲ್ಲಿಸಿದ ವ್ಯಕ್ತಿ. ಅಂದರೆ:–

(ಅ) ಅಂತಹ ಸೇವೆಯಿಂದ ನಿವೃತ್ತಿ ಹೊಂದಿದ ನಂತರ ನಿವೃತ್ತಿ ವೇತನ ಪಡೆಯುತ್ತಿರುವ ವ್ಯಕ್ತಿ.

**ಅಥವಾ**

(ಆ) ವೈದ್ಯಕೀಯ ಕಾರಣಗಳಿಂದ ಮಿಲಿಟರಿ ಸೇವೆಗೆ ಅನರ್ಹನಾದವನೆಂದೋ ಅಥವಾ ವ್ಯಕ್ತಿಯ ಹಿಡಿತಕ್ಕೂ ಮೀರಿದ ಪರಿಸ್ಥಿತಿಗಳಿಂದ ಮತ್ತು ವೈದ್ಯಕೀಯ ಅಥವಾ ಅಸಾಮರ್ಥ್ಯದ ಪಿಂಚಣಿ ಪಡೆದು ಸೇವೆಯಿಂದ ಬಿಡುಗಡೆಯಾದ ವ್ಯಕ್ತಿ.

**ಅಥವಾ**

(ಇ) ಸ್ವಂತ ಕೋರಿಕೆ ಹೊರತುಪಡಿಸಿ ಸಿಬ್ಬಂದಿ ಕಡಿತದ ಪರಿಣಾಮದಿಂದ ಅಂತಹ ಸೇವೆಯಿಂದ ಬಿಡುಗಡೆ ಹೊಂದಿದ ವ್ಯಕ್ತಿ.

**ಅಥವಾ**

(ಈ) ತನ್ನ ಸ್ವಂತ ಕೋರಿಕೆಯ ಮೇರೆಗೆ ಅಥವಾ ದುರ್ನಡತೆ ಅಥವಾ ಅಸಾಮರ್ಥ್ಯದ ಕಾರಣದಿಂದಾಗಿ ತೆಗೆದು ಹಾಕಿರುವ ಅಥವಾ ಕರ್ತವ್ಯದಿಂದ ವಜಾ ಮಾಡಿದ ವ್ಯಕ್ತಿಗಳನ್ನು ಹೊರತುಪಡಿಸಿ, ನಿರ್ಧಿಷ್ಟ ಅವಧಿಯನ್ನು ಪೂರೈಸಿದ ತರುವಾಯ ಬಿಡುಗಡೆ ಹೊಂದಿದ ವ್ಯಕ್ತಿ ಮತ್ತು ಗ್ರಾಚ್ಯುಟಿ ಪಡೆಯುತ್ತಿರುವ ವ್ಯಕ್ತಿ.

**ಅಥವಾ**

(ಉ) ಪ್ರಾಂತೀಯ ಸೇವೆಯ ಈ ಕೆಳಗೆ ಹೆಸರಿಸಿದ ವರ್ಗದ ಸಿಬ್ಬಂದಿ.

1) ನಿರಂತರ ಸೇವೆ ಸಲ್ಲಿಸಿ ನಿವೃತ್ತಿ ಹೊಂದಿದ ಪಿಂಚಣಿದಾರರು.

2) ಮಿಲಿಟರಿ ಸೇವೆಯಿಂದ ಉಂಟಾದ ದೈಹಿಕ ಅಸಾಮರ್ಥ್ಯತೆ ಹೊಂದಿ ಬಿಡುಗಡೆಯಾದ ವ್ಯಕ್ತಿ.

3) ಗ್ಯಾಲಂಟ್ರಿ ಪ್ರಶಸ್ತಿ ವಿಜೇತರು.

(2) ಮಾಜಿ ಸೈನಿಕ ಅವಲಂಬಿತರ ಗುಂಪಿನಲ್ಲಿ ಆಯ್ಕೆ ಬಯಸುವ ಅಭ್ಯರ್ಥಿಗಳು ಅಂದರೆ:–

ಕೇಂದ್ರ ಸಶಸ್ತ್ರ ದಳದಲ್ಲಿ ಸೇವೆ ಸಲ್ಲಿಸುವಾಗ ಕೊಲ್ಲಲ್ಪಟ್ಟ ಅಥವಾ ಶಾಶ್ವತವಾಗಿ ದೈಹಿಕ ವಿಕಲತೆ ಹೊಂದಿದ ವ್ಯಕ್ತಿಗಳ ಕುಟುಂಬದವರು. (ಸಂಬಂಧಾನುಸಾರ ಹೆಂಡತಿ ಅಥವಾ ಗಂಡ ಮತ್ತು ಮಕ್ಕಳು ಮತ್ತು ಮಲ ಮಕ್ಕಳು ಮಾಜಿ ಸೈನಿಕರ ಅವಲಂಬಿತರಡಿಯಲ್ಲಿ ಮೀಸಲಾತಿಗೆ ಅರ್ಹರಾಗಿರುತ್ತಾರೆ. ಆದರೆ ಅಂತಹವರಿಗೆ ವಯೋಮಿತಿ ಸಡಿಲಿಕೆ ಇಲ್ಲ)

**ವಿವರಣೆ:**

1. ಈ ಸೌಲಭ್ಯಕ್ಕೆ ಡಿಫೆನ್ಸ್ ಸೆಕ್ಯುರಿಟಿ ಕೋರ್ಸ್, ಜನರಲ್ ರಿಸರ್ವ್ ಇಂಜಿನಿಯರಿಂಗ್ ಕೋರ್ಸ್ ಲೋಕ ಸಹಾಯಕ ಸೇವೆ ಮತ್ತು ಪ್ಯಾರಾ ಮಿಲಿಟರಿ ದಳದಲ್ಲಿ ಸೇವೆ ಸಲ್ಲಿಸಿದ ವ್ಯಕ್ತಿ ಅರ್ಹರಲ್ಲ.
2. ಕೇಂದ್ರ ಸಶಸ್ತ್ರದಳದ ಸೇವೆಯಲ್ಲಿ ವ್ಯಕ್ತಿಗಳು ಸೇವೆಯಿಂದ ನಿವೃತ್ತಿ ಹೊಂದಿದ ನಂತರ ಮಾಜಿ ಸೈನಿಕರ ವರ್ಗದಡಿ ಬರುವ ವ್ಯಕ್ತಿಗೆ ಒಪ್ಪಂದವು ಪೂರ್ಣವಾಗಲು ಒಂದು ವರ್ಷಕ್ಕೆ ಮುನ್ನ ಪುನರ್ ಉದ್ಯೋಗಕ್ಕೆ ಅರ್ಜಿ ಹಾಕಿಕೊಳ್ಳಲು ಹಾಗೂ ಅವರಿಗೆ ಮಾಜಿ ಸೈನಿಕರಿಗೆ ದೊರೆಯುವ ಎಲ್ಲಾ ಸೌಲಭ್ಯಗಳನ್ನು ಹೊಂದಲು ಅನುಮತಿ ನೀಡಲಾಗಿದ್ದು, ಆದರೆ, ಸಮವಸ್ತ್ರವನ್ನು ತ್ಯಜಿಸಲು ಅನುಮತಿ ನೀಡುವವರೆಗೆ ರಾಜ್ಯ ನಾಗರೀಕ ಸೇವೆ ಅಥವಾ ಹುದ್ದೆಗೆ ನೇಮಕ ಹೊಂದುವಂತಿಲ್ಲ.

**ಈ) ಯೋಜನಾ ನಿರಾಶ್ರಿತರ ಗುಂಪಿನಲ್ಲಿ ಆಯ್ಕೆ ಬಯಸುವ ಅಭ್ಯರ್ಥಿಗಳಿಗೆ ಸೂಚನೆಗಳು:–**

ಅಧಿಸೂಚನಾ ಸಂಖ್ಯೆ: ಡಿಪಿಎಆರ್ 23 ಎಸ್.ಆರ್.ಆರ್. 99 ದಿನಾಂಕ 23–11–2000 ದಲ್ಲಿ ಸರ್ಕಾರ ರಾಜ್ಯ ಸಿವಿಲ್ ಸೇವೆಗಳಲ್ಲಿನ "ಗ್ರೂಪ್ ಸಿ ಮತ್ತು ಡಿ" ಹುದ್ದೆಗಳ ನೇರ ನೇಮಕಾತಿಗಾಗಿ ಶೇಕಡ 5% ರಷ್ಟು ರಿಕ್ತ ಸ್ಥಾನಗಳನ್ನು "ಯೋಜನೆಗಳಿಂದ ನಿರಾಶ್ರಿತರಾದವರ ಕುಟುಂಬಗಳ" ಅಭ್ಯರ್ಥಿಗಳಿಂದ ಭರ್ತಿ ಮಾಡಲು ಆಸ್ಪದ ಕಲ್ಪಿಸಿದ್ದು, ಎಲ್ಲಾ ಅಂಶಗಳು (ಪಡೆದಿರುವ ಪ್ರತಿಶತ ಅಂಕಗಳು ಹಾಗೂ ಜನ್ಮ ದಿನಾಂಕ ಸರಿಸಮಾನ ಇದ್ದಲ್ಲಿ) (when all things are being equal) ಈ ಕೆಳಕಂಡ ಆದ್ಯತೆಯಾನುಸಾರ ಭರ್ತಿ ಮಾಡಲು ನಿಗದಿಪಡಿಸಿದೆ:–

(i) ಯೋಜನೆಗಾಗಿ ಯಾವುದೇ ವ್ಯಕ್ತಿಯು ತನಗೆ ಆಧಾರವಾಗಿದ್ದ ವಾಸದ ಮನೆಯನ್ನು ಮತ್ತು ಕೊನೆಪಕ್ಷ ಶೇಕಡ 50 ರಷ್ಟು ಕೃಷಿ ಜಮೀನನ್ನು ಯೋಜನೆಗಾಗಿ ಕಳೆದುಕೊಳ್ಳಲಾದ ಅವನ ಕುಟುಂಬದ ಸದಸ್ಯರು.

(ii) ಯೋಜನೆಯ ಪೂರ್ವದ ಅವಧಿಯಲ್ಲಿ ಯಾವುದೇ ವ್ಯಕ್ತಿಯು ಭೂರಹಿತನಾಗಿದ್ದು, ತದನಂತರ ತನ್ನ ವಾಸದ ಮನೆಯನ್ನು ಯೋಜನೆಗಾಗಿ ಕಳೆದುಕೊಂಡ ವ್ಯಕ್ತಿಯ ಕುಟುಂಬದ ಸದಸ್ಯರು.

(iii) ಯೋಜನೆಗಾಗಿ ಯಾವುದೇ ವ್ಯಕ್ತಿಯು ತನಗೆ ಆಧಾರವಾಗಿದ್ದ ಶೇಕಡ 50ರಷ್ಟು ಮಾತ್ರ ಅಥವಾ ಅದಕ್ಕಿಂತ ಕಡಿಮೆ ಬೇಸಾಯದ ಭೂಮಿಯನ್ನು ಕಳೆದುಕೊಂಡ ವ್ಯಕ್ತಿಯ ಕುಟುಂಬದ ಸದಸ್ಯರು.

(iv) ಯೋಜನೆಗಾಗಿ ಇನ್ನಾವುದೇ ಪ್ರಕರಣದಲ್ಲಿ ನಿರಾಶ್ರಿತರಾದವರ ಕುಟುಂಬದ ಸದಸ್ಯರು.

**ವಿವರಣೆ:–** ಈ ಮೇಲ್ಕಂಡ ಉಪ ನಿಯಮದ ಉದ್ದೇಶ:–

(1) "ಯೋಜನೆಗಳಿಂದ ನಿರಾಶ್ರಿತರಾದ ವ್ಯಕ್ತಿ" ಎಂದರೆ, ಬಾಡಿಗೆ ಆಧಾರದ ಮೇಲೆ, ಅನುಭೋಗದ ಅವಧಿಗೆ ಜಮೀನು ಪಡೆದ ವ್ಯಕ್ತಿ ಸರ್ಕಾರದಿಂದ ಗುತ್ತಿಗೆ ಪಡೆದ, ಅಥವಾ ಇತರೆ ಆಸ್ತಿಗಳನ್ನು ಹೊಂದಿದ ಮಾಲೀಕನಾಗಿದ್ದು, ಯೋಜನೆಗಾಗಿ ಭೂಮಿಯನ್ನು : ಜಮೀನನ್ನು ಸ್ವಾಧೀನ ಪಡಿಸಿಕೊಳ್ಳುವುದಕ್ಕಿಂತ ಪೂರ್ವಭಾವಿಯಾಗಿ ಅಧಿಸೂಚನೆ ಹೊರಡಿಸುವ 5 ವರ್ಷಗಳ ಮುಂಚಿತವಾಗಿ ಯಾವುದೇ ವ್ಯಕ್ತಿಯ ಸ್ವಾಧೀನದಲ್ಲಿರುವ ಗ್ರಾಮಠಾಣದಲ್ಲಿನ ಅಥವಾ ಯೋಜನೆಯ ಪರಿಣಾಮದಿಂದಾಗಿ ಅದರ ವ್ಯಾಪ್ತಿಯಲ್ಲಿ ಬರುವಂತಹ ಜಮೀನು ಅಥವಾ ಆಸ್ತಿಯನ್ನು ಯೋಜನೆಯ ಉದ್ದೇಶಕ್ಕಾಗಿ ಸ್ವಾಧೀನ ಪಡಿಸಿಕೊಳ್ಳಲಾದ ಕಾರಣದಿಂದಾಗಿ ನಿರಾಶ್ರಿತನಾದ ವ್ಯಕ್ತಿ.

(2) "ಕುಟುಂಬ ಸದಸ್ಯರು" ಯೋಜನೆಗಳಿಂದ ನಿರಾಶ್ರಿತರಾದ ವ್ಯಕ್ತಿಗಳ ಸಂಬಂಧವೇನೆಂದರೆ ಅಂತಹ ವ್ಯಕ್ತಿಯ ಕುಟುಂಬವು ಆತನೊಂದಿಗೆ ವಾಸವಾಗಿರುವ ಮತ್ತು ಅವನ / ಅವಳ ಮೇಲೆ ಪಾಲನೆ ಹಾಗೂ ಪೋಷಣೆಗಾಗಿ ಅವಲಂಬಿತರಾಗಿರುವ ಗಂಡ / ಹೆಂಡತಿ, ಗಂಡು ಮಕ್ಕಳು, ಅವಿವಾಹಿತ ಹೆಣ್ಣು ಮಕ್ಕಳು, ಸೋದರರು ಮತ್ತು ಸೋದರಿಯರು.

(3) "ಯೋಜನೆ" ಎಂದರೆ, ನಿರಾಶ್ರಿತ ವ್ಯಕ್ತಿಗಳಿಂದ ಪಡೆಯಲಾದ ಜಮೀನನ್ನು ನಿರ್ಮಾಣ ಅಥವಾ ನೀರಾವರಿಯ ಉದ್ದೇಶಕ್ಕಾಗಿ ಅಥವಾ ನೀರು ಸರಬರಾಜು ಮಾಡುವ ಅಭಿವೃದ್ಧಿ ಕಾರ್ಯದ ವಿಸ್ತರಣೆ ಅಥವಾ ವಿದ್ಯುಚ್ಛಕ್ತಿ ಉತ್ಪಾದನೆ ಮತ್ತು ಪೂರೈಕೆ

ಅಥವಾ ವಿದ್ಯುಚ್ಛಕ್ತಿ ಕಾರ್ಯಗಳ ಅನುಕೂಲಕರ ಅಭಿವೃದ್ಧಿಯೂ ಸೇರಿದಂತೆ ಸಾರ್ವಜನಿಕ ಉಪಯೋಗಗಳಿಗಾಗಿ ನಿರ್ಮಾಣ ಸುಧಾರಣೆ ಅಥವಾ ಅಭಿವೃದ್ಧಿ ಕಾರ್ಯಗಳ ಯೋಜನೆ.

**ವಿಶೇಷ ಸೂಚನೆ:–**

ಈ ಮೇಲ್ಕಂಡ ನಿಯಮಗಳು ಪ್ರಾರಂಭವಾಗುವುದಕ್ಕಿಂತ 20 ವರ್ಷಗಳ ಮುಂಚಿತವಾಗಿ ಯಾವುದೇ ಭೂಮಿ, ಗ್ರಾಮತಾಣದಲ್ಲಿನ ಫ್ಲಾಟ್ ಅಥವಾ ಇನ್ನಿತರ ಯಾವುದೇ ಆಸ್ತಿಗಳನ್ನು ಹೊಂದಿದ್ದು, ಅಂತಹ ಆಸ್ತಿಗಳನ್ನು ಯೋಜನೆಗಳ ಉದ್ದೇಶಕ್ಕಾಗಿ ಸ್ವಾಧೀನಪಡಿಸಿಕೊಂಡ ಕಾರಣದಿಂದಾಗಿ ನಿರಾಶ್ರಿತರಾದ ಕುಟುಂಬದ ಸದಸ್ಯರು/ವ್ಯಕ್ತಿಗಳು ಈ ನಿಯಮಗಳ ಸೌಲಭ್ಯ ಪಡೆಯಲು ಅರ್ಹರಿರುವುದಿಲ್ಲ.

ಯೋಜನೆಗಳಿಂದ ನಿರಾಶ್ರಿತರಾದ ಕುಟುಂಬದ ಅಭ್ಯರ್ಥಿಗಳು ಸರ್ಕಾರಿ ಸುತ್ತೋಲೆ ಸಂಖ್ಯೆ: ಸಿ.ಆ.ಸು.ಇ.44:ಸೇ.ನೇ.ನಿ ದಿನಾಂಕ 27–07–2001ರಲ್ಲಿ ನಿಗದಿಪಡಿಸಲಾದ ನಮೂನೆಯಲ್ಲಿ ಪ್ರಮಾಣ ಪತ್ರವನ್ನು ಸಕ್ಷಮ ಪ್ರಾಧಿಕಾರದಿಂದ ಪಡೆದು ಅದರ ಎರಡು ನಕಲು ಪ್ರತಿಗಳನ್ನು ಅರ್ಜಿಯೊಂದಿಗೆ ಲಗತ್ತಿಸತಕ್ಕದ್ದು.

**ಉ) ಕನ್ನಡ ಮಾಧ್ಯಮದ ಅಭ್ಯರ್ಥಿ:–**

ಸರ್ಕಾರವು ಅಧಿಸೂಚನೆ ಸಂಖ್ಯೆ:ಡಿಪಿಎಆರ್71/ಎಸ್‌ಆರ್‌ಆರ್ 2001, ದಿನಾಂಕ: 24/10/2002ರಲ್ಲಿ ಹೊರಡಿಸಿದ ಕರ್ನಾಟಕ ಸರ್ಕಾರಿ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ (9)(1)(ಸಿ)ರ ಅನ್ವಯ ಅಭ್ಯರ್ಥಿಯು 01 ರಿಂದ 10ನೇ ತರಗತಿವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರುತ್ತಾರೆ ಎನ್ನುವ ಬಗ್ಗೆ ಸಂಬಂಧಪಟ್ಟ ಶಾಲಾ ಮುಖ್ಯಸ್ಥರಿಂದ ಪ್ರಮಾಣ ಪತ್ರವನ್ನು ಪಡೆದು, ಸಂಬಂಧಿಸಿದ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೇಲು ಸಹಿ ಮಾಡಿಸಿ ಅರ್ಜಿಯೊಂದಿಗೆ ಲಗತ್ತಿಸಬೇಕು.

**13. ತಾತ್ಕಾಲಿಕ ಆಯ್ಕೆಪಟ್ಟಿ:–**

ಅರ್ಹತೆ (ಮೆರಿಟ್) ಮತ್ತು ಮೀಸಲಾತಿ ನಿಯಮಗಳನ್ವಯ ವಿವಿಧ ವರ್ಗದ ಹುದ್ದೆಗಳಿಗೆ ಅಭ್ಯರ್ಥಿಗಳನ್ನು ಆಯ್ಕೆಮಾಡಿ ತಾತ್ಕಾಲಿಕ ಆಯ್ಕೆಪಟ್ಟಿಯನ್ನು ಆಯ್ಕೆ ಪ್ರಾಧಿಕಾರಿಯಾದ ವಿಭಾಗೀಯ ಕಾರ್ಯದರ್ಶಿಗಳು, ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ ಮತ್ತು ಪದನಿಮಿತ್ತ ಸಹ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಮೈಸೂರು ವಿಭಾಗ, ಮೈಸೂರು ಇವರ ಕಚೇರಿ ಮತ್ತು ಈ ವಿಭಾಗದ ಎಲ್ಲಾ ಜಿಲ್ಲಾ ಉಪನಿರ್ದೇಶಕರು (ಆಡಳಿತ) ರವರ ಕಛೇರಿಗಳಲ್ಲಿ ಪ್ರಕಟಿಸಲಾಗುವುದು ಹಾಗೂ ಈ ಬಗ್ಗೆ ರಾಜ್ಯ ಮಟ್ಟದ ಕನಿಷ್ಟ ಎರಡು ದಿನಪತ್ರಿಕೆಗಳಲ್ಲಿ ಸಂಕ್ಷಿಪ್ತ ಸೂಚನೆಯನ್ನು ಪ್ರಕಟಿಸಲಾಗುವುದು. ಅಭ್ಯರ್ಥಿಗಳು ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು ಪರಿಶೀಲಿಸಿ ತಮ್ಮ ಆಕ್ಷೇಪಣೆಗಳು ಏನಾದರೂ ಇದ್ದಲ್ಲಿ ಮುಂದೆ ತಿಳಿಸುವ ನಿಗದಿತ ದಿನಾಂಕದೊಳಗೆ ಆಕ್ಷೇಪಣೆಗಳನ್ನು ಸಲ್ಲಿಸಬಹುದಾಗಿದೆ. ಈ ದಿನಾಂಕದ ನಂತರ ಸಲ್ಲಿಸುವ ಯಾವುದೇ ಆಕ್ಷೇಪಣೆಗಳನ್ನು ಪರಿಗಣಿಸದೆ ತಿರಸ್ಕರಿಸಲಾಗುವುದು. ನಿಗದಿತ ಸಮಯದೊಳಗೆ ಆಕ್ಷೇಪಣೆಗಳನ್ನು ಸಲ್ಲಿಸದೆ ಇರುವ ಅಭ್ಯರ್ಥಿಗಳು ಅಂತಿಮ ಆಯ್ಕೆ ಪಟ್ಟಿ ಪ್ರಕಟವಾದ ನಂತರ ಯಾವುದೇ ರೀತಿಯ ಪರಿಹಾರಕ್ಕೆ ಅರ್ಹರಾಗುವುದಿಲ್ಲ. ಮತ್ತು ಈ ಬಗ್ಗೆ ವೈಯಕ್ತಿಕವಾಗಿ ಯಾವುದೇ ಅಭ್ಯರ್ಥಿಗೂ ಸೂಚನೆ ನೀಡಲಾಗುವುದಿಲ್ಲ.

**ವಿಶೇಷ ಸೂಚನೆ:–**

ತಾತ್ಕಾಲಿಕ ಆಯ್ಕೆಪಟ್ಟಿ ಪ್ರಕಟಿಸಿದ ನಂತರ ಅಭ್ಯರ್ಥಿಗಳು ಆಕ್ಷೇಪಣೆ ಸಲ್ಲಿಸುವಾಗ ಮೂಲ ಅರ್ಜಿಯಲ್ಲಿ ದಾಖಲಿಸಿದ ವಿಷಯಗಳಿಗೆ ಸಂಬಂಧಿಸಿದಂತೆ ಮಾತ್ರ ಆಕ್ಷೇಪಣೆ ಸಲ್ಲಿಸಬಹುದು. (ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ) ನಮೂದಿಸಲು ಬಿಟ್ಟು ಹೋಗಿದ್ದ / ಮರೆತು ಹೋಗಿದ್ದ ಯಾವುದೇ ಮಾಹಿತಿಗಳನ್ನು ಅಂದರೆ ಅಂಕಗಳ ವಿವರ, ಮಿಸಲಾತಿ ಪ್ರವರ್ಗ / ಗೌರವ ಶಿಕ್ಷಕರಾಗಿ / ಅರೆಕಾಲಿಕ ಶಿಕ್ಷಕರಾಗಿ / ಜನಗಣಗತಿ ಸಂಸ್ಥೆಯಲ್ಲಿ ಗುತ್ತಿಗೆ ಆಧಾರದ ಮೇಲೆ ಸೇವೆ ಸಲ್ಲಿಸಿದ ವರ್ಷಗಳ ಬಗ್ಗೆ ಮಾಹಿತಿಗಳು ಇತ್ಯಾದಿ ಆಯ್ಕೆಗೆ ಸಂಬಂಧಿಸಿದ ಮಾಹಿತಿಗಳನ್ನು ಅಥವಾ ಹೊಸದಾಗಿ ದಾಖಲಿಸಲು ಬಯಸುವ ಮಾಹಿತಿಗಳನ್ನು ಸಲ್ಲಿಸಲು ಅವಕಾಶವಿರುವುದಿಲ್ಲ. ಅಂತಹ ಆಕ್ಷೇಪಣೆ ಮತ್ತು ಲಗತ್ತುಗಳನ್ನು ಪರಿಗಣಿಸದೆ ತಿರಸ್ಕರಿಸಲಾಗುವುದು.

**14. ಅಂತಿಮ ಆಯ್ಕೆ ಪಟ್ಟಿ:–**

1) ತಾತ್ಕಾಲಿಕ ಆಯ್ಕೆಪಟ್ಟಿಯಲ್ಲಿ ಆಯ್ಕೆ ಹೊಂದಿರುವ ಎಲ್ಲಾ ಅಭ್ಯರ್ಥಿಗಳ ಮೂಲ ಅಂಕಪಟ್ಟಿ ಮತ್ತು ಪ್ರಮಾಣ ಪತ್ರಗಳನ್ನು ಪರಿಶೀಲಿಸಿ ದೃಢಪಡಿಸಿಕೊಂಡ ನಂತರ ಅಂತಿಮ ತಾತ್ಕಾಲಿಕ ಆಯ್ಕೆಪಟ್ಟಿಯನ್ನು ಪ್ರಕಟಿಸಲಾಗುವುದು. ಮೂಲ ಪ್ರಮಾಣ ಪತ್ರಗಳನ್ನು ಪರಿಶೀಲನೆಗೆ ಸಲ್ಲಿಸದೇ ಇರುವ ಅಭ್ಯರ್ಥಿಗಳು ಅಂತಿಮ ಆಯ್ಕೆಪಟ್ಟಿಯಲ್ಲಿ ಪರಿಗಣನೆಗೆ ಬರುವುದಿಲ್ಲ.

2) ಆಯ್ಕೆ ಪಟ್ಟಿಯಲ್ಲಿ ಆಯ್ಕೆಯಾದ ಅರ್ಹ ಅಭ್ಯರ್ಥಿಗಳ ಅರ್ಹತೆ ಮತ್ತು ಮೀಸಲಾತಿಗಳನ್ನು ಖಚಿತಪಡಿಸಿಕೊಂಡು ಸಂಬಂಧಿಸಿದ ಜಿಲ್ಲಾ ಉಪನಿರ್ದೇಶಕರು (ಆಡಳಿತ) ರವರು ನೇಮಕಾತಿ ಆದೇಶವನ್ನು ಕೌನ್ಸಿಲಿಂಗ್ ಮೂಲಕ ನೀಡುತ್ತಾರೆ.

**15. ನಿಬಂಧನೆಗಳು:–**

1) ಅಭ್ಯರ್ಥಿಗಳು ನಿಗದಿತ ನಮೂನೆಯಲ್ಲಿ ಮಾತ್ರ ಅರ್ಜಿಗಳನ್ನು ಭರ್ತಿಸಿ, ಸಹಿ ಮಾಡಿ ಸಲ್ಲಿಸಬೇಕು. ನಿಗದಿತ ನಮೂನೆಯಲ್ಲಿ ಇಲ್ಲದ ಅರ್ಜಿಗಳನ್ನು ತಿರಸ್ಕರಿಸಲಾಗುವುದು. ಈ ಬಗ್ಗೆ ಯಾವುದೇ ಸೂಚನೆಗಳನ್ನು ವೈಯಕ್ತಿಕವಾಗಿ ನೀಡಲಾಗುವುದಿಲ್ಲ.

2) ಮೂಲ ಅರ್ಜಿಯಲ್ಲಿ ನೀಡಿರುವ ಮಾಹಿತಿಗಳ ಬದಲಾವಣೆಗೆ ಯಾವುದೇ ಹಂತದಲ್ಲೂ ಅವಕಾಶವಿರುವುದಿಲ್ಲ.

3) ಅರ್ಜಿ ನಮೂನೆಯಲ್ಲಿ ನಿಗಧಿತ ಸ್ಥಳದಲ್ಲಿ ಎಡಗೈ ಹೆಬ್ಬೆರಳ ಗುರುತನ್ನು ಹಾಕುವುದು. ಎಡಗೈ ಹೆಬ್ಬೆರಳು ಗುರುತು ರಹಿತ ಅರ್ಜಿಯನ್ನು ಯಾವುದೇ ಸೂಚನೆ ನೀಡದೇ ತಿರಸ್ಕರಿಸಲಾಗುವುದು. ಎಡಗೈ ಹೆಬ್ಬೆರಳ ಗುರುತು ಸ್ಪಷ್ಟವಾಗಿರಬೇಕು.

4) ಅಭ್ಯರ್ಥಿಯು ಮೀಸಲಾತಿ ಮತ್ತು ಕೋರುವ ಇತರ ಯಾವುದೇ ಸೌಲಭ್ಯಗಳಿಗೆ ಸಂಬಂಧಿಸಿದಂತೆ ಎಲ್ಲಾ ಪ್ರಮಾಣ ಪತ್ರಗಳ ದೃಢೀಕೃತ ಪ್ರತಿಗಳನ್ನು ಅರ್ಜಿಯೊಡನೆ ಲಗತ್ತಿಸಬೇಕು. ಹಾಗೂ ಅದರ ವಿವರಗಳನ್ನು ಅರ್ಜಿಯಲ್ಲಿ ನೀಡಿರುವ ಸಂಬಂಧಿಸಿದ ಕಲಂಗಳಲ್ಲಿ ತಪ್ಪದೇ ನಮೂದಿಸಬೇಕು. ಒಂದು ವೇಳೆ ವಿವರಗಳನ್ನು ನಮೂದಿಸದೇ ಇದ್ದಲ್ಲಿ ಮತ್ತು ಅದರ ದಾಖಲೆಗಳನ್ನು ಲಗತ್ತಿಸದೇ ಇದ್ದಲ್ಲಿ ಅಂತಹ ಮೀಸಲಾತಿ ಮತ್ತು ಸೌಲಭ್ಯಗಳ ಕೋರಿಕೆಗಳನ್ನು ತಿರಸ್ಕರಿಸಲಾಗುವುದು. ಅರ್ಜಿಯಲ್ಲಿ ಮೀಸಲಾತಿ (ನೇರ ಮತ್ತು ಸಮತಳ) ಕಲಂಗಳನ್ನು ಭರ್ತಿಸದೇ ಹಾಗೆಯೇ ಖಾಲಿ ಬಿಟ್ಟು ಪ್ರಮಾಣಪತ್ರಗಳ ಪ್ರತಿಗಳನ್ನು ಮಾತ್ರ ಸಲ್ಲಿಸಿದ್ದಲ್ಲಿ ಅಂತಹ ಮೀಸಲಾತಿ ಸೌಲಭ್ಯಗಳನ್ನು ಅಭ್ಯರ್ಥಿಗಳಿಗೆ ನೀಡದೆ ಸಾಮನ್ಯ ಅರ್ಹತೆಯ ಅಭ್ಯರ್ಥಿ ಎಂದು ಪರಿಗಣಿಸಲಾಗುವುದು.

5) ಅಭ್ಯರ್ಥಿಯು ಉಪಯೋಗಿಸುವ ಪಾಸ್‌ಪೋರ್ಟ್ ಅಳತೆಯ ಭಾವಚಿತ್ರವು ಅಧಿಸೂಚನೆ ದಿನಾಂಕದ ನಂತರ ತೆಗೆಸಿದ್ದಾಗಿರಬೇಕು. ಎಲ್ಲಾ ಭಾವ ಚಿತ್ರಗಳೂ ಒಂದೇ ಸಮಯದಲ್ಲಿ ತೆಗೆದವುಗಳಾಗಿರಬೇಕು.

6) ಆಯ್ಕೆಯಾದ ಅಭ್ಯರ್ಥಿಯು ತಾನು ಆಯ್ಕೆಯಾಗಿ ನೇಮಕಾತಿ ಹೊಂದಿರುವ ಜೇಷ್ಠತಾ ಘಟಕ (ಜಿಲ್ಲೆ) (Unit of Seniority)ದಲ್ಲಿ ಕಡ್ಡಾಯವಾಗಿ ಸೇವೆ ಸಲ್ಲಿಸತಕ್ಕದ್ದು.

7) ಭರ್ತಿ ಮಾಡಿದ ಅರ್ಜಿಗಳನ್ನು ಅನ್ವಯಿಸುವ ವಿದ್ಯಾರ್ಹತೆ ಪರೀಕ್ಷೆಗಳ ಅಂಕಪಟ್ಟಿ ಮತ್ತು ಇತರೆ ಎಲ್ಲಾ ಮಾಹಿತಿಗಳನ್ನು ನಮೂದಿಸಿ ನಿಗಧಿತ ದಿನಾಂಕವಾದ 08/07/2009 ರ ಸಂಜೆ 05–30 ರೊಳಗೆ ಅಥವಾ ಅದಕ್ಕೂ ಮುಂಚಿತವಾಗಿ ತಲುಪುವಂತೆ ಆಯ್ಕೆ ಪ್ರಾಧಿಕಾರದ ವ್ಯಾಪ್ತಿಯಲ್ಲಿನ ಜಿಲ್ಲಾ ಉಪನಿರ್ದೇಶಕರ ಕಛೇರಿಗೆ ಖುದ್ದಾಗಿ ಸಲ್ಲಿಸಿ ಸ್ವೀಕೃತಿ ಪಡೆಯತಕ್ಕದ್ದು. ಕೊನೆಯ ದಿನಾಂಕ ಮತ್ತು ವೇಳೆ ನಂತರ ಸಲ್ಲಿಸುವ, ಅಥವಾ ಅಂಚೆಯಲ್ಲಿ ಬರುವ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

8) ಅರ್ಜಿ ಸಲ್ಲಿಸುವ ಕೊನೆಯ ದಿನಾಂಕ ಹಾಗೂ ವೇಳೆಯು ಎಲ್ಲಾ ಅಭ್ಯರ್ಥಿಗಳಿಗೂ ಮತ್ತು ಸೇವೆಯಲ್ಲಿರುವ ಅಭ್ಯರ್ಥಿಗಳಿಗೂ ಸಹ ಅನ್ವಯಿಸುತ್ತದೆ.

9) ಅಭ್ಯರ್ಥಿಯು ಯಾವುದೇ ಸರ್ಕಾರಿ ಇಲಾಖೆಯಲ್ಲಿ ಖಾಯಂ ನೌಕರಿಯಲ್ಲಿದ್ದರೆ ಅವನು/ಳು ತಾನು ಸೇವೆ ಸಲ್ಲಿಸುತ್ತಿರುವ ಹುದ್ದೆಯ ನೇಮಕಾತಿ ಪ್ರಾಧಿಕಾರಿಯವರ ಸಮ್ಮತಿ ಇಲ್ಲದೇ ಅಥವಾ ಇಲಾಖಾ ಮುಖಾಂತರ ಅರ್ಜಿಯನ್ನು ಸಲ್ಲಿಸದೇ ಇದ್ದಲ್ಲಿ ಅಂತಹ ಅಭ್ಯರ್ಥಿ ನೇಮಕಾತಿಗೆ ಅರ್ಹರಾಗುವುದಿಲ್ಲ.

10) ಭರ್ತಿ ಮಾಡಿದ ಅರ್ಜಿಯನ್ನು ಸಂಬಂಧಿಸಿದ ಸ್ವಯಂ ದೃಢೀಕೃತ ಜೆರಾಕ್ಸ್ ಪ್ರತಿಗಳ ಲಗತ್ತುಗಳೊಂದಿಗೆ ದಿನಾಂಕ 08/07/2009 ರಂದು ಸಾಯಂಕಾಲ 5–30 ಗಂಟೆಯೊಳಗೆ ಅಥವಾ ಅದಕ್ಕೂ ಮುಂಚಿತವಾಗಿ ಜಿಲ್ಲಾ ಉಪನಿರ್ದೇಶಕರ (ಆಡಳಿತ) ಕಚೇರಿಗೆ ಖುದ್ದಾಗಿ ಸಲ್ಲಿಸಿ ಸ್ವೀಕೃತಿಯನ್ನು ಪಡೆದಿರಬೇಕು. ನಿಗದಿತ ದಿನಾಂಕ ಮತ್ತು ವೇಳೆಯ ನಂತರ ಬರುವ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

11) ಯಾವುದೇ ವ್ಯಕ್ತಿಯು ಸರ್ಕಾರಿ ನೇಮಕಾತಿಗೆ ಈ ಕೆಳಕಂಡ ಸಂದರ್ಭದಲ್ಲಿ ಅರ್ಹನಾಗುವುದಿಲ್ಲ.

1) ಯಾವುದೇ ನಿಷೇಧಿತ ಸಂಘ ಸಂಸ್ಥೆಯ ಸದಸ್ಯನಾಗಿರುವಲ್ಲಿ ಅಥವಾ ಸದಸ್ಯರಾಗಿದ್ದಲ್ಲಿ ಅಥವಾ ಯಾವುದೇ ನಿಷೇಧಿತ ಸಂಸ್ಥೆಯ ಕಾರ್ಯ ಚಟುವಟಿಕೆಯಲ್ಲಿ ಸಕ್ರಿಯವಾಗಿ ಭಾಗವಹಿಸಿದ್ದಲ್ಲಿ.

2) ಭಾರತ ಸಂವಿಧಾನಕ್ಕೆ ಚ್ಯುತಿ ತರುವ ಕಾರ್ಯದಲ್ಲಿ ಪ್ರವೃತ್ತನಾದಲ್ಲಿ.

3) ಕಾನೂನು ಭಂಗ ಮಾಡಿ ಹಿಂಸಾಕೃತ್ಯದಲ್ಲಿ ತೊಡಗಿದವರಾಗಿದ್ದರೆ.

4) ಭಾರತ ದೇಶದ ಸಾರ್ವಭೌಮ ಹಾಗೂ ಸುಭದ್ರತೆಗೆ ಧಕ್ಕೆ ತರುವ ಕಾರ್ಯದಲ್ಲಿ ಪ್ರವೃತ್ತರಾಗಿದ್ದರೆ.

5) ಭಾರತ ಸರ್ಕಾರದ ಅಥವಾ ಯಾವುದೇ ರಾಜ್ಯ ಸರ್ಕಾರದ ಸೇವೆಯಿಂದ ಉಚ್ಛಾಟನೆಗೊಂಡ ಪ್ರಸಂಗಗಳಲ್ಲಿ.

6) ನ್ಯಾಯಬಾಹಿರ ಕೃತ್ಯಗಳಲ್ಲಿ ತೊಡಗಿ ಅಪರಾಧಕ್ಕೆ ಒಳಗಾದ ಪ್ರಸಂಗಗಳಲ್ಲಿ.

7) ಒಬ್ಬ ಜೀವಂತ ಪತ್ನಿಗಿಂತ ಹೆಚ್ಚು ಮಂದಿ ಪತ್ನಿಯರನ್ನು ಹೊಂದಿರುವ ಪುರುಷ ಅಭ್ಯರ್ಥಿಯು ಮತ್ತು ಈಗಾಗಲೇ ಇನ್ನೊಬ್ಬ ಹೆಂಡತಿಯಿರುವ ವ್ಯಕ್ತಿಯನ್ನು ಮದುವೆಯಾಗಿರುವ ಮಹಿಳಾ ಅಭ್ಯರ್ಥಿಯು ಸರ್ಕಾರದಿಂದ ಪೂರ್ವಾನುಮತಿಯನ್ನು ಪಡೆಯದೆ ನೇಮಕಾತಿಗೆ ಅರ್ಹರಾಗುವುದಿಲ್ಲ.

12) ಅಭ್ಯರ್ಥಿಯು ಮತ್ತೊಬ್ಬ ವ್ಯಕ್ತಿಯಂತೆ ನಟಿಸಿ ವಂಚಿಸಿದ ಅಥವಾ ದಾಖಲೆಗಳನ್ನು ತಿದ್ದಿದ ಅಥವಾ ಸೃಷ್ಟಿಸಿದ ಅಥವಾ ಸರಿಯಿಲ್ಲದ ಅಥವಾ ಸುಳ್ಳು ಅಥವಾ ದೋಷಪೂರ್ಣ ವಿವರಗಳನ್ನು ನೀಡುವ ಅಥವಾ ಅವನ/ಅವಳ ನೇಮಕಾತಿಗಾಗಿ ಸಂಬಂಧಿಸಿದಂತೆ ಯಾವುದೇ ಇತರ ಅಕ್ರಮ ಅನುಚಿತ ವಿಧಾನಗಳನ್ನು ಅನುಸರಿಸಿದ ಕಾರಣದಿಂದಾಗಿ ತಪ್ಪಿತಸ್ಥನೆಂದು ಕಂಡು ಬಂದಲ್ಲಿ ಅವನ/ಅವಳ ಅಭ್ಯರ್ಥಿತನವನ್ನು ಯಾವುದೇ ಸೂಚನೆ ನೀಡದೆ ರದ್ದುಗೊಳಿಸಲಾಗುವುದು ಮತ್ತು ಅಂತಹವರನ್ನು ಕ್ರಿಮಿನಲ್ ಪ್ರಾಸಿಕ್ಯೂಷನ್‌ಗೆ ಮತ್ತು ಶಿಸ್ತು ಕ್ರಮಕ್ಕೆ ಒಳಪಡಿಸಲಾಗುವುದು.

13) ಅರ್ಜಿ ಜೊತೆಗೆ ದೃಢೀಕರಿಸಲ್ಪಟ್ಟ ಎಲ್ಲಾ ಅಂಕಪಟ್ಟಿಗಳು, ಮೀಸಲಾತಿ ಹಾಗೂ ಇತರೆ ಪತ್ರಗಳ ಪ್ರತಿಗಳನ್ನು ಲಗತ್ತಿಸಬೇಕು.

14) ಅರ್ಹತಾ ಪರೀಕ್ಷೆಗಳಲ್ಲಿ ಪಡೆದಿರುವ ಅಂಕಗಳ ಆಧಾರದ ಮೇಲೆ ಆಯ್ಕೆ ಮಾಡಿದ ಆಯ್ಕೆಪಟ್ಟಿಯಲ್ಲಿ ಅವನ/ ಅವಳ ಆಯ್ಕೆಯು ಖಾಯಂ ಆಗದ ಹೊರತು ನೇಮಕಾತಿಗಾಗಿ ಹಕ್ಕನ್ನು ಪಡೆದುಕೊಳ್ಳುವುದಿಲ್ಲ.

15) ಈ ನೇಮಕಾತಿಯು, ಮತ್ತು ಈ ಅಧಿಸೂಚನೆಯಲ್ಲಿ ತಿಳಿಸಿರುವ ಆದೇಶಗಳು, ಜ್ಞಾಪನಗಳು, ಸುತ್ತೋಲೆಗಳು ಕಾಲದಿಂದ ಕಾಲಕ್ಕೆ ಹೊರಡಿಸಿರುವ ಆದೇಶಗಳು ಮತ್ತು ತಿದ್ದುಪಡಿಗೆ ಒಳಪಟ್ಟಿರುತ್ತದೆ.

**16) ಅಭ್ಯರ್ಥಿಗಳು ಅರ್ಜಿ ಸಲ್ಲಿಸುವ ಸಮಯದಲ್ಲಿ ಅರ್ಜಿಯೊಂದಿಗೆ ವಿದ್ಯಾರ್ಹತೆಗಳ ಎಲ್ಲಾ ವರ್ಷಗಳ, ಎಲ್ಲಾ ಪ್ರಯತ್ನಗಳ ಅಂಕಪಟ್ಟಿಗಳು, ಹಾಗೂ ಆ ಪರೀಕ್ಷೆಗಳ ತೇರ್ಗಡೆ ಪ್ರಮಾಣ ಪತ್ರಗಳು, ವಯಸ್ಸಿನ ದೃಢೀಕರಣದ ಬಗ್ಗೆ ಎಸ್.ಎಸ್.ಎಲ್.ಸಿ ಅಂಕಪಟ್ಟಿ, ಮೀಸಲಾತಿ ಪ್ರಮಾಣ ಪತ್ರಗಳು ಅರೆಕಾಲಿಕ, ಗೌರವ ಶಿಕ್ಷಕ, ಜನಗಣತಿ ಸಂಸ್ಥೆಯಲ್ಲಿ ಸೇವೆ ಸಲ್ಲಿಸುತ್ತಿರುವ/ ಸಲ್ಲಿಸಿರುವ ಬಗ್ಗೆ ಸೇವಾ ದೃಢೀಕರಣ ಪ್ರಮಾಣ ಪತ್ರಗಳ ಪ್ರತಿಗಳನ್ನು (ನಮೂನೆಗಳ ಮಾದರಿಯನ್ನು ಅರ್ಜಿ-ಸಹಿತ-ಮಾಹಿತಿ ಪುಸ್ತಕದಲ್ಲಿ ನೀಡಲಾಗಿದೆ) ಅಭ್ಯರ್ಥಿಗಳಿಗೆ ಅನ್ವಯಿಸುವ ಅವಶ್ಯಕತೆಗೆ ಅನುಗುಣವಾಗಿ ತಪ್ಪದೇ ಲಗತ್ತಿಸುವುದು. ಈ ಲಗತ್ತುಗಳನ್ನು ಅರ್ಜಿ ಸ್ವೀಕರಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕ ಮತ್ತು ಸಮಯದೊಳಗೆ ಅರ್ಜಿ ಜೊತೆಯಲ್ಲಿ ತಪ್ಪದೇ ಲಗತ್ತಿಸಿರಬೇಕು. ಇವುಗಳನ್ನು ಅರ್ಜಿ ಜೊತೆ ಸಲ್ಲಿಸಲು ಸಾಧ್ಯವಾಗಲಿಲ್ಲವೆಂದು ತಿಳಿಸಿ, ತಾತ್ಕಾಲಿಕ ಪಟ್ಟಿ ಪ್ರಕಟಿಸಿದ ನಂತರ ಆಕ್ಷೇಪಣೆಯೊಂದಿಗೆ ಸಲ್ಲಿಸಲು ಅವಕಾಶವಿಲ್ಲ. ಅಂತಹ ಆಕ್ಷೇಪಣೆಗಳನ್ನು ತಿರಸ್ಕರಿಸಲಾಗುವುದು.**

17) ಹೆಚ್ಚಿನ ಮಾಹಿತಿಗಾಗಿ ಮಾಹಿತಿ ಪುಸ್ತಕವನ್ನು ಅವಲೋಕಿಸಬಹುದು, ಅಥವಾ ಆಯ್ಕೆಪ್ರಾಧಿಕಾರಿಗಳನ್ನು ಅಥವಾ ಸಂಬಂಧಿಸಿದ ಜಿಲ್ಲಾ ಉಪನಿರ್ದೇಶಕರು (ಆಡಳಿತ) ರವರನ್ನು ಸಂಪರ್ಕಿಸಬಹ್ಮದು

**2009-10ನೇ ಸಾಲಿನಲ್ಲಿ ನೇಮಕಾತಿಗಾಗಿ ಪ್ರೌಢ ಶಾಲಾ ಸಂಗೀತ ಶಿಕ್ಷಕ ಗ್ರೇಡ್-2 (ಹಾಡುಗಾರಿಕೆ) ಜಿಲ್ಲಾವಾರು ಹುದ್ದೆಗಳ ಸಂಖ್ಯೆ**

| ಕ್ರ ಸಂ. | ಜಿಲ್ಲೆ | ಹುದ್ದೆಗಳ ಸಂಖ್ಯೆ |
|---|---|---|
| **1** | **ಮೈಸೂರು** | **08** |
| **2** | **ಚಾಮರಾಜನಗರ** | **06** |
| **3** | **ಮಂಡ್ಯ** | **10** |
| **4** | **ಹಾಸನ** | **10** |
| **5** | **ಚಿಕ್ಕಮಗಳೂರು** | **03** |
| **6** | **ಕೊಡಗು** | **03** |
| **7** | **ದಕ್ಷಿಣ ಕನ್ನಡ** | **10** |
| **8** | **ಉಡುಪಿ** | **10** |
| | **ಒಟ್ಟು** | **60** |

**ಎನ್. ಕುಮಾರಸ್ವಾಮಿ**
ಆಯ್ಕೆ ಪ್ರಾಧಿಕಾರಿ ಹಾಗೂ ವಿಭಾಗೀಯ ಕಾರ್ಯದರ್ಶಿಗಳು
ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ ಮತ್ತು
ಪದನಿಮಿತ್ತ ಸಹ ನಿರ್ದೇಶಕರು, ಸಾ.ಶಿ.ಇ., ಮೈಸೂರು ವಿಭಾಗ, ಮೈಸೂರು.

**ಸಂಗೀತ ಶಿಕ್ಷಕ ಗ್ರೇಡ್-2 (ಹಾಡುಗಾರಿಕೆ) ಶಿಕ್ಷಕರ ನೇಮಕಾತಿ ಹುದ್ದೆಗಳ ವರ್ಗೀಕರಣ**
**ವಿಭಾಗದ ಹೆಸರು : ಮೈಸೂರು**

| ಜಿಲ್ಲೆ | ಒಟ್ಟು ಹುದ್ದೆಗಳು | | ಪ.ಜಾ | ಪ.ಪಂ | ಪ್ರ-1 | 2ಎ | 2ಬಿ | 3ಎ | 3ಬಿ | ಸಾ.ಅ | ಒಟ್ಟು |
|---|---|---|---|---|---|---|---|---|---|---|---|
| ಮೈಸೂರು | 08 | ಇತರೆ | 01 | 01 | 01 | 01 | 0 | 0 | 0 | 01 | **05** |
| | | ಗ್ರಾಮೀಣ | 0 | 0 | 0 | 0 | 0 | 0 | 0 | 01 | **01** |
| | | ಕ.ಮಾ.ಅ | 0 | 0 | 0 | 0 | 0 | 0 | 0 | 0 | **0** |
| | | ಯೋ.ಅ | 0 | 0 | 0 | 0 | 0 | 0 | 0 | 0 | **0** |
| | | ಮಾ.ಸೈ | 0 | 0 | 0 | 0 | 0 | 0 | 0 | 0 | **0** |
| | | ಅಂ.ವಿ | 0 | 0 | 0 | 0 | 0 | 0 | 0 | 01 | **01** |
| | | ಮ.ಅ | 0 | 0 | 0 | 0 | 0 | 0 | 0 | 01 | **01** |
| | | **ಒಟ್ಟು** | **01** | **01** | **01** | **01** | **0** | **0** | **0** | **04** | **08** |

| ಜಿಲ್ಲೆ | ಒಟ್ಟು ಹುದ್ದೆಗಳು | | ಪ.ಜಾ | ಪ.ಪಂ | ಪ್ರ–1 | 2ಎ | 2ಬಿ | 3ಎ | 3ಬಿ | ಸಾ.ಅ | ಒಟ್ಟು |
|---|---|---|---|---|---|---|---|---|---|---|---|
| **ಚಾಮರಾಜನಗರ** | 06 | ಇತರೆ | 01 | 01 | 01 | 0 | 0 | 0 | 0 | 01 | **04** |
| | | ಗ್ರಾಮೀಣ | 0 | 0 | 0 | 0 | 0 | 0 | 0 | 01 | **01** |
| | | ಕ.ಮಾ.ಅ | 0 | 0 | 0 | 0 | 0 | 0 | 0 | 0 | **0** |
| | | ಯೋ.ಅ | 0 | 0 | 0 | 0 | 0 | 0 | 0 | 0 | **0** |
| | | ಮಾ.ಸೈ | 0 | 0 | 0 | 0 | 0 | 0 | 0 | 0 | **0** |
| | | ಅಂ.ವಿ | 0 | 0 | 0 | 0 | 0 | 0 | 0 | 0 | **0** |
| | | ಮ.ಅ | 0 | 0 | 0 | 0 | 0 | 0 | 0 | 01 | **01** |
| | | **ಒಟ್ಟು** | **01** | **01** | **01** | **0** | **0** | **0** | **0** | **03** | **06** |

| ಜಿಲ್ಲೆ | ಒಟ್ಟು ಹುದ್ದೆಗಳು | | ಪ.ಜಾ | ಪ.ಪಂ | ಪ್ರ–1 | 2ಎ | 2ಬಿ | 3ಎ | 3ಬಿ | ಸಾ.ಅ | ಒಟ್ಟು |
|---|---|---|---|---|---|---|---|---|---|---|---|
| **ಮಂಡ್ಯ** | 10 | ಇತರೆ | 01 | 01 | 01 | 01 | 0 | 0 | 0 | 01 | **05** |
| | | ಗ್ರಾಮೀಣ | 0 | 0 | 0 | 0 | 0 | 0 | 0 | 01 | **01** |
| | | ಕ.ಮಾ.ಅ | 0 | 0 | 0 | 0 | 0 | 0 | 0 | 0 | **0** |
| | | ಯೋ.ಅ | 0 | 0 | 0 | 0 | 0 | 0 | 0 | 0 | **0** |
| | | ಮಾ.ಸೈ | 0 | 0 | 0 | 0 | 0 | 0 | 0 | 0 | **0** |
| | | ಅಂ.ವಿ | 0 | 0 | 0 | 0 | 0 | 0 | 0 | 01 | **01** |
| | | ಮ.ಅ | 01 | 0 | 0 | 0 | 0 | 0 | 0 | 02 | **03** |
| | | **ಒಟ್ಟು** | **02** | **01** | **01** | **01** | **0** | **0** | **0** | **05** | **10** |

**ಸಂಗೀತ ಶಿಕ್ಷಕ ಗ್ರೇಡ್–2 (ಹಾಡುಗಾರಿಕೆ) ಶಿಕ್ಷಕರ ನೇಮಕಾತಿ ಹುದ್ದೆಗಳ ವರ್ಗೀಕರಣ**
**ವಿಭಾಗದ ಹೆಸರು : ಮೈಸೂರು**

| ಜಿಲ್ಲೆ | ಒಟ್ಟು ಹುದ್ದೆಗಳು | | ಪ.ಜಾ | ಪ.ಪಂ | ಪ್ರ–1 | 2ಎ | 2ಬಿ | 3ಎ | 3ಬಿ | ಸಾ.ಅ | ಒಟ್ಟು |
|---|---|---|---|---|---|---|---|---|---|---|---|
| **ಹಾಸನ** | 10 | ಇತರೆ | 01 | 01 | 01 | 01 | 0 | 0 | 0 | 01 | **05** |
| | | ಗ್ರಾಮೀಣ | 0 | 0 | 0 | 0 | 0 | 0 | 0 | 01 | **01** |
| | | ಕ.ಮಾ.ಅ | 0 | 0 | 0 | 0 | 0 | 0 | 0 | 0 | **0** |
| | | ಯೋ.ಅ | 0 | 0 | 0 | 0 | 0 | 0 | 0 | 0 | **0** |
| | | ಮಾ.ಸೈ | 0 | 0 | 0 | 0 | 0 | 0 | 0 | 0 | **0** |
| | | ಅಂ.ವಿ | 0 | 0 | 0 | 0 | 0 | 0 | 0 | 01 | **01** |
| | | ಮ.ಅ | 01 | 0 | 0 | 0 | 0 | 0 | 0 | 02 | **03** |
| | | **ಒಟ್ಟು** | **02** | **01** | **01** | **01** | **0** | **0** | **0** | **05** | **10** |

| ಜಿಲ್ಲೆ | ಒಟ್ಟು ಹುದ್ದೆಗಳು | | ಪ.ಜಾ | ಪ.ಪಂ | ಪ್ರ–1 | 2ಎ | 2ಬಿ | 3ಎ | 3ಬಿ | ಸಾ.ಅ | ಒಟ್ಟು |
|---|---|---|---|---|---|---|---|---|---|---|---|
| **ಚಿಕ್ಕಮಗಳೂರು** | 03 | ಇತರೆ | 01 | 01 | 0 | 0 | 0 | 0 | 0 | 01 | **03** |
| | | ಗ್ರಾಮೀಣ | 0 | 0 | 0 | 0 | 0 | 0 | 0 | 0 | **0** |
| | | ಕ.ಮಾ.ಅ | 0 | 0 | 0 | 0 | 0 | 0 | 0 | 0 | **0** |
| | | ಯೋ.ಅ | 0 | 0 | 0 | 0 | 0 | 0 | 0 | 0 | **0** |
| | | ಮಾ.ಸೈ | 0 | 0 | 0 | 0 | 0 | 0 | 0 | 0 | **0** |
| | | ಅಂ.ವಿ | 0 | 0 | 0 | 0 | 0 | 0 | 0 | 0 | **0** |
| | | ಮ.ಅ | 0 | 0 | 0 | 0 | 0 | 0 | 0 | 0 | **0** |
| | | **ಒಟ್ಟು** | **01** | **01** | **0** | **0** | **0** | **0** | **0** | **01** | **03** |

| ಜಿಲ್ಲೆ | ಒಟ್ಟು ಹುದ್ದೆಗಳು | | ಪ.ಜಾ | ಪ.ಪಂ | ಪ್ರ–1 | 2ಎ | 2ಬಿ | 3ಎ | 3ಬಿ | ಸಾ.ಅ | ಒಟ್ಟು |
|---|---|---|---|---|---|---|---|---|---|---|---|
| **ಕೊಡಗು** | 03 | ಇತರೆ | 01 | 01 | 0 | 0 | 0 | 0 | 0 | 01 | **03** |
| | | ಗ್ರಾಮೀಣ | 0 | 0 | 0 | 0 | 0 | 0 | 0 | 0 | **0** |
| | | ಕ.ಮಾ.ಅ | 0 | 0 | 0 | 0 | 0 | 0 | 0 | 0 | **0** |
| | | ಯೋ.ಅ | 0 | 0 | 0 | 0 | 0 | 0 | 0 | 0 | **0** |
| | | ಮಾ.ಸೈ | 0 | 0 | 0 | 0 | 0 | 0 | 0 | 0 | **0** |
| | | ಅಂ.ವಿ | 0 | 0 | 0 | 0 | 0 | 0 | 0 | 0 | **0** |
| | | ಮ.ಅ | 0 | 0 | 0 | 0 | 0 | 0 | 0 | 0 | **0** |
| | | **ಒಟ್ಟು** | **01** | **01** | **0** | **0** | **0** | **0** | **0** | **01** | **03** |

**ಸಂಗೀತ ಶಿಕ್ಷಕ ಗ್ರೇಡ್–2 (ಹಾಡುಗಾರಿಕೆ) ಶಿಕ್ಷಕರ ನೇಮಕಾತಿ ಹುದ್ದೆಗಳ ವರ್ಗೀಕರಣ**
**ವಿಭಾಗದ ಹೆಸರು : ಮೈಸೂರು**

| ಜಿಲ್ಲೆ | ಒಟ್ಟು ಹುದ್ದೆಗಳು | | ಪ.ಜಾ | ಪ.ಪಂ | ಪ್ರ–1 | 2ಎ | 2ಬಿ | 3ಎ | 3ಬಿ | ಸಾ.ಅ | ಒಟ್ಟು |
|---|---|---|---|---|---|---|---|---|---|---|---|
| **ದಕ್ಷಿಣ ಕನ್ನಡ** | 10 | ಇತರೆ | 01 | 01 | 01 | 01 | 0 | 0 | 0 | 01 | **05** |
| | | ಗ್ರಾಮೀಣ | 0 | 0 | 0 | 0 | 0 | 0 | 0 | 01 | **01** |
| | | ಕ.ಮಾ.ಅ | 0 | 0 | 0 | 0 | 0 | 0 | 0 | 0 | **0** |
| | | ಯೋ.ಅ | 0 | 0 | 0 | 0 | 0 | 0 | 0 | 0 | **0** |
| | | ಮಾ.ಸೈ | 0 | 0 | 0 | 0 | 0 | 0 | 0 | 0 | **0** |
| | | ಅಂ.ವಿ | 0 | 0 | 0 | 0 | 0 | 0 | 0 | 01 | **01** |
| | | ಮ.ಅ | 01 | 0 | 0 | 0 | 0 | 0 | 0 | 02 | **03** |
| | | **ಒಟ್ಟು** | **02** | **01** | **01** | **01** | **0** | **0** | **0** | **05** | **10** |

| ಜಿಲ್ಲೆ | ಒಟ್ಟು ಹುದ್ದೆಗಳು | | ಪ.ಜಾ | ಪ.ಪಂ | ಪ್ರ–1 | 2ಎ | 2ಬಿ | 3ಎ | 3ಬಿ | ಸಾ.ಅ | ಒಟ್ಟು |
|---|---|---|---|---|---|---|---|---|---|---|---|
| **ಉಡುಪಿ** | 10 | ಇತರೆ | 01 | 01 | 01 | 01 | 0 | 0 | 0 | 01 | **05** |
| | | ಗ್ರಾಮೀಣ | 0 | 0 | 0 | 0 | 0 | 0 | 0 | 01 | **01** |
| | | ಕ.ಮಾ.ಅ | 0 | 0 | 0 | 0 | 0 | 0 | 0 | 0 | **0** |
| | | ಯೋ.ಅ | 0 | 0 | 0 | 0 | 0 | 0 | 0 | 0 | **0** |
| | | ಮಾ.ಸೈ | 0 | 0 | 0 | 0 | 0 | 0 | 0 | 0 | **0** |
| | | ಅಂ.ವಿ | 0 | 0 | 0 | 0 | 0 | 0 | 0 | 01 | **01** |
| | | ಮ.ಅ | 01 | 0 | 0 | 0 | 0 | 0 | 0 | 02 | **03** |
| | | **ಒಟ್ಟು** | **02** | **01** | **01** | **01** | **0** | **0** | **0** | **05** | **10** |

**ಎನ್. ಕುಮಾರಸ್ವಾಮಿ**
ಆಯ್ಕೆ ಪ್ರಾಧಿಕಾರಿ ಹಾಗೂ ವಿಭಾಗೀಯ ಕಾರ್ಯದರ್ಶಿಗಳು
ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ ಮತ್ತು
ಪದನಿಮಿತ್ತ ಸಹ ನಿರ್ದೇಶಕರು, ಸಾ.ಶಿ.ಇ., ಮೈಸೂರು ವಿಭಾಗ,
ಮೈಸೂರು.

| ಭಾಗ – V | ಬೆಂಗಳೂರು, ಸೋಮವಾರ, ಮೇ ೧೮, ೨೦೦೯ (ವೈಶಾಖ ೨೮, ಶಕ ವರ್ಷ ೧೯೩೧) | ನಂ. ೩೦೯ |
|---|---|---|

**ಸಾರ್ವಜನಿಕ ಶಿಕ್ಷಣ ಇಲಾಖೆ**

**ಆಯ್ಕೆ ಪ್ರಾಧಿಕಾರಿ ಹಾಗೂ ವಿಭಾಗೀಯ ಕಾರ್ಯದರ್ಶಿಗಳು, ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ ಮತ್ತು ಪದನಿಮಿತ್ತ ಸಹನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಳಗಾವಿ ವಿಭಾಗ, ಬೆಳಗಾವಿ ಇವರ ಕಾರ್ಯಾಲಯ**

**ನೇಮಕಾತಿ ಅಧಿಸೂಚನೆ**

**ಸಂಖ್ಯೆ: ಇ–3/ಪ್ರೌ.ಶಾನೇ/27/2009–10, ದಿನಾಂಕ: 18ನೇ ಮೇ, 2009**

**(ಅರ್ಜಿ ಸ್ವೀಕರಿಸಲು ಕೊನೆಯ ದಿನಾಂಕ: 08–07–2009)**

**ವಿಷಯ :–** 2009–10ನೇ ಸಾಲಿನಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಳಗಾವಿ ವಿಭಾಗ, ಮಟ್ಟದಲ್ಲಿ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯ ಮೂಲಕ ಪ್ರೌಢ ಶಾಲಾ ಸಹಾಯಕ ಶಿಕ್ಷಕರು (ಗ್ರೇಡ್–2) ಹಾಗೂ ದೈಹಿಕ ಶಿಕ್ಷಣ ಶಿಕ್ಷಕರು (ಗ್ರೇಡ್–1) ವೃಂದದ ಶಿಕ್ಷಕರನ್ನು ನೇರ ನೇಮಕಾತಿ ಮೂಲಕ ಆಯ್ಕೆ ಮಾಡುವ ಕುರಿತು.

**ಉಲ್ಲೇಖ :–**
1) ದಿನಾಂಕ 22.02.1967, 21.10.1991, ಮತ್ತು 24.06.2003ರ ಇಲಾಖಾ ನೇಮಕಾತಿ ನಿಯಮಗಳು.
2) ಸರ್ಕಾರದ ಆದೇಶ ಸಂಖ್ಯೆ: ಸಿ.ಆ.ಸು.ಇ 08 ಸಹಿಮ 95, ದಿನಾಂಕ: 20.06.1995 (ಅನುಬಂಧ–1 ಮತ್ತು 2).
3) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 28 ಸೇನೇನಿ 95, ದಿ. 19.8.95.
4) ಸರ್ಕಾರದ ಆದೇಶ ಸಂಖ್ಯೆ: ಡಿಪಿಎಆರ್ 34 ಎಸ್‌ಆರ್‌ಆರ್ 95, ದಿ. 06.03.1996.
5) ಸರ್ಕಾರದ ಆದೇಶ ಸಂಖ್ಯೆ: ಇಡಿ 93 ಎಸ್‌ಎಲ್‌ಬಿ 97, ದಿ. 31.01.97.
6) ಸರ್ಕಾರದ ಆದೇಶ ಸಂಖ್ಯೆ: ಇಡಿ 190 ಎಸ್‌ಎಲ್‌ಬಿ 97, ದಿ. 26.08.97.
7) ಸರ್ಕಾರದ ಅಧಿಸೂಚನೆ ಸಂಖ್ಯೆ: ಎಸ್.ಡಬ್ಲ್ಯೂಡಿ 132 ಎಸ್‌ಎಡಿ 97, ದಿ. 08.02.2000.
8) ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 23 ಎಸ್‌ಆರ್‌ಆರ್ 99, ದಿ. 23.11.2000.
9) ಸರ್ಕಾರದ ಸುತ್ತೋಲೆ ಸಂಖ್ಯೆ: ಸಿಆಸುಇ 44 ಸೇನೇನಿ 2001, ದಿ. 27.07.2001.
10) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 97 ಸೇನೇನಿ 2002, ದಿ. 22.11.2002.
11) ಸರ್ಕಾರದ ಪತ್ರ ಸಂಖ್ಯೆ: ಇಡಿ 174 ಎಸ್‌ಎಲ್‌ಬಿ 2002, ದಿ. 26.11.2002.
12) ಸರ್ಕಾರದ ಅಧಿಸೂಚನೆ ಸಂಖ್ಯೆ: ಎಸ್‌ಡಬ್ಲ್ಯೂಡಿ 126 ಬಿಸಿಎ 2002, ದಿ. 13.02.2003.
13) ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 59 ಎಸ್‌ಆರ್‌ಇ 2002, ದಿ. 24.06.2003.
14) ಸರ್ಕಾರದ ಆದೇಶ ಸಂಖ್ಯೆ ಇಡಿ 125 ಪಿಟಿಐ 2003, ದಿ. 16.08.2003.
15) ಸರ್ಕಾರದ ಆದೇಶ ಸಂಖ್ಯೆ: ಡಿಪಿಎಆರ್ 96 ಸೇನೇನಿ 2005 ಬೆಂಗಳೂರು, ದಿ. 10.8.2005.
16) ಸರ್ಕಾರದ ಆದೇಶ ಸಂಖ್ಯೆ: ಇಡಿ 82/ಎಸ್‌ಎಲ್‌ಬಿ/2003/ಪಾರ್ಟ್/ಬೆಂಗಳೂರು, ದಿನಾಂಕ: 17.06.2006.
17) ಸರ್ಕಾರದ ಆದೇಶ ಸಂಖ್ಯೆ: ಸಿಅಸುಇ 33/ಎಸ್‌ಬಿಸಿ 81, ದಿನಾಂಕ: 01.09.1981.
18) ಸರ್ಕಾರದ ಆದೇಶ ಸಂಖ್ಯೆ: ಸಿಅಸುಇ 30/ಸಹಿಮ 94, ದಿನಾಂಕ: 03.05.1994.
19) ಸರ್ಕಾರದ ಆದೇಶ ಸಂಖ್ಯೆ: ಸಿಅಸುಇ 53/ಸೇನೇನಿ 2007 ಬೆಂಗಳೂರು, ದಿ: 04.01.2008.
20) ಸರ್ಕಾರದ ಸುತ್ತೋಲೆ ಸಂಖ್ಯೆ: ಸಿಆಸುಇ/16/ಸೇನೇನಿ 2008 ಬೆಂಗಳೂರು ದಿ: 01.09.2008.
21) ಸರ್ಕಾರದ ಪತ್ರ ಸಂಖ್ಯೆ: ಇಡಿ/04/ಎಸ್‌ಟಿಬಿ/2009, ಬೆಂಗಳೂರು, ದಿ: 13.03.2009.
22) ಸರ್ಕಾರದ ಪತ್ರ ಸಂಖ್ಯೆ: ಇಡಿ/573/ಎಲ್‌ಬಿಪಿ/2008, ಬೆಂಗಳೂರು, ದಿ: 05.05.2009.
23) ಸರ್ಕಾರದ ಪತ್ರ ಸಂಖ್ಯೆ: ಇಡಿ/573/ಎಲ್‌ಬಿಪಿ/2008, ಬೆಂಗಳೂರು, ದಿ: 18.05.2009.

ಸಾರ್ವಜನಿಕ ಶಿಕ್ಷಣ ಇಲಾಖೆ ಬೆಳಗಾವಿ ವಿಭಾಗದ **08** ಶೈಕ್ಷಣಿಕ ಜಿಲ್ಲೆಗಳ (ಬೆಳಗಾವಿ, ಚಿಕ್ಕೋಡಿ, ಬಾಗಲಕೋಟೆ, ಬಿಜಾಪುರ, ಧಾರವಾಡ, ಗದಗ, ಹಾವೇರಿ ಮತ್ತು ಕಾರವಾರ) ಸರಕಾರಿ ಪ್ರೌಢ ಶಾಲೆ/ಸರಕಾರಿ ಪದವಿ ಪೂರ್ವ ಕಾಲೇಜುಗಳ ಪ್ರೌಢ ಶಾಲಾ ವಿಭಾಗಗಳಲ್ಲಿ ಖಾಲಿ ಇರುವ ಪ್ರೌಢ ಶಾಲಾ ಸಹಾಯಕ ಶಿಕ್ಷಕರ ಗ್ರೇಡ್–2 ವೃಂದದ ವಿವಿಧ ವಿಷಯ ಮತ್ತು ಬೋಧನಾ ಮಾಧ್ಯಮದ ಹುದ್ದೆಗಳಿಗೆ ಹಾಗೂ ದೈಹಿಕ ಶಿಕ್ಷಣ ಶಿಕ್ಷಕರು (ಗ್ರೇಡ್–1) ವೃಂದದ ಹುದ್ದೆಗಳಿಗೆ ಮತ್ತು 8ನೇ ತರಗತಿ ಹೊಂದಿರುವ ಉನ್ನತೀಕರಿಸಲಾದ

ಸರಕಾರಿ ಹಿರಿಯ ಪ್ರಾಥಮಿಕ ಶಾಲೆಗಳಲ್ಲಿ ಖಾಲಿ ಇರುವ ಪ್ರೌಢ ಶಾಲಾ ಸಹಾಯಕ ಶಿಕ್ಷಕರ (ಗ್ರೇಡ್–2) ವೃಂದದ ಭೌತ ವಿಜ್ಞಾನ ಶಿಕ್ಷಕರನ್ನು ವಿವಿಧ ಮಾಧ್ಯಮದ ಹುದ್ದೆಗಳಿಗೆ, ವಿಭಾಗ ಮಟ್ಟದಲ್ಲಿ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆ ಮೂಲಕ ಅಂದರೆ **"ದಿ ಕರ್ನಾಟಕ ಎಜುಕೇಷನ್ ಡಿಪಾರ್ಟ್‌ಮೆಂಟ್ ಸರ್ವೀಸಸ್ (ಡಿಪಾರ್ಟ್‌ಮೆಂಟ್ ಆಫ್ ಪಬ್ಲಿಕ್ ಇನ್‌ಸ್ಟ್ರಕ್ಷನ್) (ರಿಕ್ರೂಟ್‌ಮೆಂಟ್) (ಅಮೆಂಡ್‌ಮೆಂಟ್) ರೂಲ್ಸ್ 2002"** ನಿಯಮಗಳನ್ವಯ ಆಯ್ಕೆ ಮಾಡಲು ಈ ನೇಮಕಾತಿ ಅಧಿಸೂಚನೆ ಹೊರಡಿಸಿದೆ. **ಅಂದರೆ ನೇಮಕಾತಿ ಅಧಿಸೂಚನೆ ದಿನಾಂಕದಂದು ಅರ್ಹರಾಗಿರುವ** ಅಭ್ಯರ್ಥಿಗಳಿಂದ ನಿಗಧಿಪಡಿಸಿರುವ ಅರ್ಜಿ ನಮೂನೆಯಲ್ಲಿ ಅರ್ಜಿಗಳನ್ನು ಕರೆಯಲಾಗಿದೆ. **ಇತರೆ ಯಾವುದೇ ನಮೂನೆಯಲ್ಲಿ ಸಲ್ಲಿಸುವ ಅರ್ಜಿಗಳನ್ನು ತಿರಸ್ಕರಿಸಲಾಗುವುದು.**

**ಟಿಪ್ಪಣಿ: ಪ್ರಕಟಿಸಲಾಗಿರುವ ಹುದ್ದೆಗಳ ಸಂಖ್ಯೆ ಮತ್ತು ವರ್ಗೀಕರಣವು ಅನಿವಾರ್ಯ ಸಂದರ್ಭಗಳಲ್ಲಿ ಬದಲಾವಣೆಗೆ ಒಳಪಟ್ಟಿರುತ್ತದೆ.**

**1) ಆಯ್ಕೆಗಾಗಿ ಪ್ರಕಟಿಸಿರುವ ಹುದ್ದೆಗಳು:–**

(ಎ) **ಪ್ರೌಢ ಶಾಲಾ ಸಹಾಯಕ ಶಿಕ್ಷಕ ಗ್ರೇಡ್–2 ವೃಂದದ ಕೆಳಕಂಡ ವಿಷಯಗಳ ಹುದ್ದೆಗಳು:–**

**i) ಕಲಾ ಶಿಕ್ಷಕರು (ಕನ್ನಡ, ಉರ್ದು, ಮರಾಠಿ ಮಾಧ್ಯಮ)**

**ii) ಭೌತ ವಿಜ್ಞಾನ (ಕನ್ನಡ, ಉರ್ದು, ಮರಾಠಿ ಮಾಧ್ಯಮ)**

**iii) ಜೀವ ವಿಜ್ಞಾನ (ಕನ್ನಡ, ಉರ್ದು, ಮರಾಠಿ ಮಾಧ್ಯಮ)**

**iv) ಭಾಷಾ ಶಿಕ್ಷಕರು (ಕನ್ನಡ, ಆಂಗ್ಲ, ಹಿಂದಿ, ಉರ್ದು, ಮರಾಠಿ ಮತ್ತು ಸಂಸ್ಕೃತ)**

(ಬಿ) **ದೈಹಿಕ ಶಿಕ್ಷಣ ಶಿಕ್ಷಕ ಗ್ರೇಡ್–1 ಹುದ್ದೆಗಳು**

**2) ಆಯ್ಕೆಗೆ ಅರ್ಹತೆ:–**

**ನೇಮಕಾತಿ ಅಧಿಸೂಚನೆ ದಿನಾಂಕದಂದು** ಪ್ರೌಢ ಶಾಲಾ ಸಹಾಯಕ ಶಿಕ್ಷಕ ಗ್ರೇಡ್–2 ವೃಂದದ, ವಿವಿಧ ವಿಷಯಗಳ ಮತ್ತು ಬೋಧನಾ ಮಾಧ್ಯಮದ ಮತ್ತು ದೈಹಿಕ ಶಿಕ್ಷಣ ಶಿಕ್ಷಕ ಗ್ರೇಡ್–1 ಹುದ್ದೆಗಳಿಗೆ ಆಯ್ಕೆಗಾಗಿ ಅರ್ಹತೆ ಪಡೆಯಲು ಅಭ್ಯರ್ಥಿಗಳು ಆಯಾ ವಿಷಯ ಮತ್ತು ಬೋಧನಾ ಮಾಧ್ಯಮದ ಹುದ್ದೆಗಳಿಗೆ **"ದಿ ಕರ್ನಾಟಕ ಎಜುಕೇಷನ್ ಡಿಪಾರ್ಟ್‌ಮೆಂಟ್ ಸರ್ವೀಸಸ್ (ಡಿಪಾರ್ಟ್‌ಮೆಂಟ್ ಆಫ್ ಪಬ್ಲಿಕ್ ಇನ್‌ಸ್ಟ್ರಕ್ಷನ್) (ರಿಕ್ರೂಟ್‌ಮೆಂಟ್) (ಅಮೆಂಡ್‌ಮೆಂಟ್) ರೂಲ್ಸ್ 2002"** ನಿಯಮಗಳಲ್ಲಿ ನಿಗಧಿ ಪಡಿಸಿರುವ ವಿದ್ಯಾರ್ಹತೆಗಳನ್ನು ಹೊಂದಿರಬೇಕು. ಮತ್ತು ನಿಗದಿಪಡಿಸಲಾದ ವಯೋಮಿತಿಯೊಳಗಿದ್ದು, ಆಯ್ಕೆ ಪ್ರಾಧಿಕಾರಿಯು ನಡೆಸುವ ವಿಭಾಗ ಮಟ್ಟದ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಗೆ ಕಡ್ಡಾಯವಾಗಿ ಹಾಜರಾಗಬೇಕು. **ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಗೆ ಹಾಜರಾದ ಮಾತ್ರಕ್ಕೆ ಅಭ್ಯರ್ಥಿಯು ಆಯ್ಕೆಗೆ ಅರ್ಹತೆ ಪಡೆಯುವುದಿಲ್ಲ. ಅಭ್ಯರ್ಥಿಯು ಇದರ ಜೊತೆಗೆ ನೇಮಕಾತಿ ನಿಯಮಗಳಲ್ಲಿ ನಿಗಧಿ ಪಡಿಸಿರುವ ವಿದ್ಯಾರ್ಹತೆಗಳನ್ನು ಹೊಂದಿದ್ದು ಮತ್ತು ನಿಗಧಿತ ವಯೋಮಿತಿಯೊಳಗೆ ಇದ್ದಲ್ಲಿ ಮಾತ್ರ ಆಯ್ಕೆಗೆ ಪರಿಗಣಿಸಲಾಗುವುದು.**

**3) ಆಯ್ಕೆ ಮತ್ತು ನೇಮಕಾತಿ:–**

ಅರ್ಹ ಅಭ್ಯರ್ಥಿಗಳನ್ನು ಆಯ್ಕೆ ಪ್ರಾಧಿಕಾರಿಗಳಾದ ವಿಭಾಗೀಯ ಕಾರ್ಯದರ್ಶಿಗಳು, ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ ಹಾಗೂ ಪದನಿಮಿತ್ತ ಸಹ ನಿರ್ದೇಶಕರು ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಳಗಾವಿ ವಿಭಾಗ, ಬೆಳಗಾವಿ ರವರು **"ದಿ ಕರ್ನಾಟಕ ಎಜುಕೇಷನ್ ಡಿಪಾರ್ಟ್‌ಮೆಂಟ್ ಸರ್ವೀಸಸ್ (ಡಿಪಾರ್ಟ್‌ಮೆಂಟ್ ಆಫ್ ಪಬ್ಲಿಕ್ ಇನ್‌ಸ್ಟ್ರಕ್ಷನ್) (ರಿಕ್ರೂಟ್‌ಮೆಂಟ್) (ಅಮೆಂಡ್‌ಮೆಂಟ್) ರೂಲ್ಸ್ 2002"** ಹಾಗೂ ಸಂಬಂಧಿಸಿದ ಕಾಲದಿಂದ ಕಾಲಕ್ಕೆ ತಿದ್ದುಪಡಿಯಾದ ಪ್ರಚಲಿತ ಸೇವಾ ನಿಯಮಗಳನ್ವಯ ವಿಭಾಗೀಯ ಮಟ್ಟದಲ್ಲಿ ಆಯ್ಕೆ ಪ್ರಾಧಿಕಾರಿಯಾಗಿರುತ್ತಾರೆ. ಮತ್ತು ಸಂಬಂಧಿಸಿದ ಜಿಲ್ಲಾ ಉಪನಿರ್ದೇಶಕರು [ಆಡಳಿತ] ರವರು ನೇಮಕಾತಿ ಪ್ರಾಧಿಕಾರಿಯಾಗಿದ್ದು, ಜಿಲ್ಲಾ ಮಟ್ಟದಲ್ಲಿ ನೇಮಕಾತಿ ಆದೇಶ ನೀಡುತ್ತಾರೆ.

**4) ನಿಗಧಿತ ಅರ್ಜಿ ನಮೂನೆ ದೊರೆಯುವ ಸ್ಥಳ:–**

ನಿಗಧಿತ ಅರ್ಜಿ ನಮೂನೆಯನ್ನು ಆಯ್ಕೆಗಾಗಿ ಪ್ರಕಟಿಸಲಾಗಿರುವ ಮಾಹಿತಿ ಪುಸ್ತಕದಲ್ಲಿ ಲಗತ್ತಿಸಲಾಗಿದೆ. ಈ ಅರ್ಜಿ ನಮೂನೆ ಹಾಗೂ ಮಾಹಿತಿ ಪುಸ್ತಕವು ಎಲ್ಲಾ ವಿಷಯ ಹಾಗೂ ಮಾಧ್ಯಮದ ಹುದ್ದೆಗಳಿಗೆ ಒಂದೇ ಆಗಿರುತ್ತದೆ. ಹಾಗೂ ಈ ಪುಸ್ತಕವು ಜಿಲ್ಲೆಯ ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರ (ಆಡಳಿತ)ರವರ ಕಚೇರಿಗಳಲ್ಲಿ ದಿನಾಂಕ 08–06–2009 ರಿಂದ ಅರ್ಜಿ ಸಲ್ಲಿಸಲು ನಿಗದಿ ಪಡಿಸಿರುವ ಕೊನೆಯ ದಿನಾಂಕದವರೆಗೆ ಕಾರ್ಯಾಲಯದ ಎಲ್ಲಾ ಕೆಲಸದ ದಿನಗಳಲ್ಲಿ ಬೆಳಿಗ್ಗೆ 10–00 ರಿಂದ ಸಂಜೆ 5–30 ರವರೆಗೆ ದೊರೆಯುತ್ತದೆ. ಅರ್ಹ ಅಭ್ಯರ್ಥಿಗಳು ನಿಗದಿತ ಶುಲ್ಕವನ್ನು ಉಪನಿರ್ದೇಶಕರ ಕಚೇರಿಯಲ್ಲಿ ದೊರೆಯುವ ವಿಶೇಷ ಚಲನ್ ಮೂಲಕ **ವಿಶೇಷಾಧಿಕಾರಿ, ಕೇಂದ್ರೀಕೃತ ದಾಖಲಾತಿ ಘಟಕ, ಬೆಂಗಳೂರು ಇವರ ಹೆಸರಿನಲ್ಲಿ ಸ್ಟೇಟ್ ಬ್ಯಾಂಕ್ ಆಫ್ ಮೈಸೂರಿನ** ನಿಗದಿತ ಶಾಖೆಯಲ್ಲಿ ಹಣವನ್ನು ಪಾವತಿಸಿ, ಪಡೆದುಕೊಂಡ ಚಲನ್ ಪ್ರತಿಯನ್ನು ಉಪನಿರ್ದೇಶಕರ ಕಚೇರಿಯಲ್ಲಿ ಸಲ್ಲಿಸಿ ಮಾಹಿತಿ ಪುಸ್ತಕ ಸಹಿತ ಅರ್ಜಿ ನಮೂನೆಗಳನ್ನು ಪಡೆಯಬಹುದು.

**5) ಅರ್ಜಿ ನಮೂನೆ–ಸಹಿತ–ಮಾಹಿತಿ ಪುಸ್ತಕದ ಶುಲ್ಕ:–**

1) ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ ಮತ್ತು ಪ್ರವರ್ಗ–1ಕ್ಕೆ ಸೇರಿದ ಅಭ್ಯರ್ಥಿಗಳಿಗೆ **ರೂ. 150/–**

2) ಇತರೆ ಎಲ್ಲಾ ಅಭ್ಯರ್ಥಿಗಳಿಗೆ **ರೂ. 300/–**

3) ಸರ್ಕಾರದ ಆದೇಶ ಸಂಖ್ಯೆ: ಇಡಿ 04 ಎಸ್‌ಟಿಬಿ 2009, ದಿ. 13.3.2009ರ ಪ್ರಕಾರ ಅಂಗವಿಕಲ ಅಭ್ಯರ್ಥಿಗಳಿಗೆ ಅರ್ಜಿ ನಮೂನೆ ಸಹಿತ ಮಾಹಿತಿ ಪುಸ್ತಕದಿಂದ ಶುಲ್ಕ ವಿನಾಯಿತಿ ನೀಡಲಾಗಿದ್ದು, ವಿನಾಯಿತಿ ಪಡೆಯುವ ಅಂಗವಿಕಲ ಅಭ್ಯರ್ಥಿಗಳು ಅರ್ಜಿ ಪಡೆಯುವ ಸಂದರ್ಭದಲ್ಲಿ ನಿಗದಿತ ನಮೂನೆಯ ಅಂಗವಿಕಲ ಪ್ರಮಾಣ ಪತ್ರವನ್ನು ಹಾಜರುಪಡಿಸಬೇಕು.

**6) ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ, ವಿಧಾನ ಮತ್ತು ವಿಳಾಸ:–**

**i)** ಅರ್ಹ ಅಭ್ಯರ್ಥಿಗಳು ನಿಗದಿತ ಅರ್ಜಿ ನಮೂನೆಯಲ್ಲಿ ಮಾಹಿತಿಯನ್ನು ಭರ್ತಿಮಾಡಿ, ಸಹಿ ಮಾಡಿದ ನಂತರ ಅರ್ಜಿ ಸಲ್ಲಿಸಲು ನಿಗಧಿಪಡಿಸಿರುವ ಕೊನೆಯ ದಿನಾಂಕವಾದ 08–07–2009 ರಂದು ಸಾಯಂಕಾಲ 05–30 ಗಂಟೆಯೊಳಗೆ, ಅಥವಾ ಅದಕ್ಕೂ ಮುಂಚಿತವಾಗಿ ಆಯ್ಕೆ ಪ್ರಾಧಿಕಾರಿಯ ವಿಭಾಗದ ವ್ಯಾಪ್ತಿಯಲ್ಲಿ ಬರುವ ಸಾರ್ವಜನಿಕ ಶಿಕ್ಷಣ ಇಲಾಖೆಯ ಜಿಲ್ಲಾ ಉಪನಿರ್ದೇಶಕರು (ಆಡಳಿತ) ರವರ ಕಚೇರಿಗೆ ಮೂರು ಪ್ರತಿಗಳನ್ನು (ಕೇಂದ್ರಿಕೃತ ದಾಖಲಾತಿ ಘಟಕದ ಮೂಲ ಒ.ಎಂ.ಆರ್., ಸಹ ನಿರ್ದೇಶಕರ ಪ್ರತಿ ಮತ್ತು ಉಪ ನಿರ್ದೇಶಕರ ಪ್ರತಿ) (ಅರ್ಜಿ ಖರೀದಿಸಿದ ಜಿಲ್ಲೆಯಲ್ಲಿ) ಖುದ್ದಾಗಿ ಸಲ್ಲಿಸಿ ಸ್ವೀಕೃತಿ ಮತ್ತು ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯ ಪ್ರವೇಶ ಪತ್ರವನ್ನು ಅಭ್ಯರ್ಥಿಯು ಖುದ್ದಾಗಿ ಪಡೆಯತಕ್ಕದ್ದು. **ನಿಗಧಿಪಡಿಸಿದ ಕೊನೆಯ ದಿನಾಂಕದ ನಂತರ, ಯಾವುದೇ ಅರ್ಜಿಗಳನ್ನು ಯಾವುದೇ ಕಾರಣಕ್ಕೂ ಸ್ವೀಕರಿಸಲಾಗುವುದಿಲ್ಲ ಹಾಗೂ ಅಂಚೆಯ ಮುಖಾಂತರ ಕಳುಹಿಸಿದ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.**

ii) ಅಭ್ಯರ್ಥಿಯು ಅರ್ಜಿಯಲ್ಲಿ ನಮೂದಿಸಿರುವ ವಿವರಗಳಿಗೆ ಸಂಬಂಧಪಟ್ಟ ಜನ್ಮ ದಿನಾಂಕ, ಪದವಿ ಪರೀಕ್ಷೆಯ ಮತ್ತು ಬಿ.ಎಡ್ ಪದವಿ ಪರೀಕ್ಷೆಯ ಎಲ್ಲಾ ವರ್ಷಗಳ ಹಾಗೂ ಎಲ್ಲಾ ಪ್ರಯತ್ನಗಳ ಅಂಕಪಟ್ಟಿಗಳು ಮತ್ತು ತೇರ್ಗಡೆಹೊಂದಿದ ಪ್ರಮಾಣ ಪತ್ರಗಳು ಹಾಗೂ ಕ್ಲೇಮು ಮಾಡುತ್ತಿರುವ ಮೀಸಲಾತಿ ಗುಂಪು (ನೇರ ಹಾಗೂ ಸಮತಳ) ಪ್ರಮಾಣ ಪತ್ರಗಳನ್ನು ಅಭ್ಯರ್ಥಿಯು ಸ್ವಯಂ ದೃಢೀಕರಿಸಿ ಪ್ರತಿಗಳನ್ನು ಅರ್ಜಿಯೊಂದಿಗೆ ಲಗತ್ತಿಸಿ, ಲಗತ್ತಿಸಲಾದ ದಾಖಲೆಗಳ ವಿವರವನ್ನು ಸ್ವೀಕೃತಿ ಪತ್ರದಲ್ಲಿ ಸ್ಪಷ್ಟವಾಗಿ ನಮೂದಿಸಬೇಕು.

iii) ಅರ್ಜಿ ನಮೂನೆಯ ಮೂಲ ಒ.ಎಂ.ಆರ್. ಪ್ರತಿಯನ್ನು ಕೇಂದ್ರಿಕೃತ ದಾಖಲಾತಿ ಘಟಕ, ಬೆಂಗಳೂರಿಗೆ ರವಾನಿಸಲಾಗುತಿದ್ದು, ಸದರಿ ಮೂಲ ಒ.ಎಂ.ಆರ್. ಪ್ರತಿಯಲ್ಲಿ ಅಭ್ಯರ್ಥಿಗಳು ಎಲ್ಲಾ ಅಂಕಣಗಳನ್ನು ಭರ್ತಿ ಮಾಡಿದ ನಂತರ ಇದರ ಎರಡು ಜೆರಾಕ್ಸ್ ಪ್ರತಿಗಳನ್ನು ಪಡೆದು ಸಹ ನಿರ್ದೇಶಕರು ಹಾಗೂ ಉಪ ನಿರ್ದೇಶಕರುಗಳಿಗೆ ಅಗತ್ಯ ದಾಖಲೆಗಳ ಸ್ವಯಂ ದೃಢೀಕೃತ ಪ್ರತಿಗಳೊಂದಿಗೆ ಸಲ್ಲಿಸತಕ್ಕದ್ದು. ಮೂಲ ಒ.ಎಂ.ಆರ್. ಅರ್ಜಿ ನಮೂನೆಯಲ್ಲಿ ಮೀಸಲಾತಿ (ನೇರ ಹಾಗೂ ಸಮತಳ) ಅಂಕಣಗಳನ್ನು ಹಾಗೆಯೇ ಬಿಟ್ಟು ಸಹ ನಿರ್ದೇಶಕರು ಹಾಗೂ ಉಪನಿರ್ದೇಶಕರ ಪ್ರತಿಗಳೊಂದಿಗೆ ಮೀಸಲಾತಿ ಪ್ರಮಾಣ ಪತ್ರಗಳನ್ನು ಸಲ್ಲಿಸದ್ದರೂ ಅಂತಹ ಅಭ್ಯರ್ಥಿಗಳ ಮೀಸಲಾತಿ ಕೋರಿಕೆಯನ್ನು ಪರಿಗಣಿಸದೆ ತಿರಸ್ಕರಿಸಲಾಗುವುದು.

**ಅರ್ಜಿಯೊಂದಿಗೆ ಸಲ್ಲಿಸಬೇಕಾದ ತತ್ಸಬಂಧ ಸ್ವಯಂ ದೃಢೀಕೃತ ಹಾಗೂ ಸ್ಪಷ್ಟವಾಗಿರುವ ಜೆರಾಕ್ಸ್ ಪ್ರಮಾಣ ಪತ್ರಗಳ ವಿವರಗಳು ಈ ಕೆಳಕಂಡಂತೆ ಇರುತ್ತವೆ.**

1) ಎಸ್.ಎಸ್.ಎಲ್.ಸಿ. ಕ್ರೋಢೀಕೃತ ಅಂಕಪಟ್ಟಿ (ಜನ್ಮ ದಿನಾಂಕ ಹಾಗೂ ಅಧ್ಯಯನ ಮಾಡಿದ ಭಾಷೆಗಳ ವಿವರದೊಂದಿಗೆ)

2) ಪಿ.ಯು.ಸಿ. ಅಂಕಪಟ್ಟಿ (ಅಧ್ಯಯನ ಮಾಡಿದ ಭಾಷೆಗಳ ವಿವರದೊಂದಿಗೆ) **(ಹಿಂದಿ ಭಾಷಾ ಶಿಕ್ಷಕರಿಗೆ ಮಾತ್ರ)**

3) ಪಿ.ಯು.ಸಿ.ಯಲ್ಲಿ ಅಧ್ಯಯನ ಮಾಡಿದ ಮಾಧ್ಯಮದ ಪ್ರಮಾಣ ಪತ್ರ **(ಹಿಂದಿ ಭಾಷಾ ಶಿಕ್ಷಕರ ಹುದ್ದೆಗೆ ಮಾತ್ರ)**

4) ಬಿ.ಎ / ಬಿ.ಎಸ್ಸಿ ಪದವಿಯ ಮೂರು ವರ್ಷದ ಎಲ್ಲಾ ಪ್ರಯತ್ನಗಳ ಅಂಕಪಟ್ಟಿಗಳು.

5) ಬಿ.ಎ. / ಬಿ.ಎಸ್ಸಿ ಪದವಿಯ ತೇರ್ಗಡೆ ಪ್ರಮಾಣ ಪತ್ರ.

6) ಪದವಿ ತತ್ಸಮಾನ ಪರೀಕ್ಷೆಯ ಎಲ್ಲಾ ವರ್ಷದ ಹಾಗೂ ಎಲ್ಲಾ ಪ್ರಯತ್ನಗಳ ಅಂಕಪಟ್ಟಿಗಳು. **(ಹಿಂದಿ ಭಾಷಾ ವಿಷಯದ ಅಭ್ಯರ್ಥಿಗಳಿಗೆ ಮಾತ್ರ)**

7) ಪದವಿ ತತ್ಸಮಾನ ಪರೀಕ್ಷೆಯ ತೇರ್ಗಡೆ ಪ್ರಮಾಣ ಪತ್ರ **(ಹಿಂದಿ ಭಾಷಾ ವಿಷಯದ ಅಭ್ಯರ್ಥಿಗಳಿಗೆ ಮಾತ್ರ)**

8) ಬಿ.ಎಡ್/ಬಿ.ಪಿ.ಎಡ್. ಪರೀಕ್ಷೆಯ ಅಂಕಪಟ್ಟಿ ಹಾಗೂ ತೇರ್ಗಡೆ ಪ್ರಮಾಣ ಪತ್ರಗಳು.

9) ಬಿ.ಎಡ್. ತತ್ಸಮಾನ ಪರೀಕ್ಷೆಯ ಅಂಕಪಟ್ಟಿ ಹಾಗೂ ತೇರ್ಗಡೆ ಪ್ರಮಾಣ ಪತ್ರಗಳು.

10) ಬಿ.ಎ. ಪದವಿಯಲ್ಲಿ ಸಂಬಂಧಿಸಿದ ಭಾಷೆ ಅಧ್ಯಯನ ಮಾಡದೆ, ಸದರಿ ಭಾಷೆಯಲ್ಲಿ ಸ್ನಾತಕೋತ್ತರ ಪದವಿ ಪಡೆದು, ಭಾಷಾ ಶಿಕ್ಷಕರ ಹುದ್ದೆಗೆ ಅರ್ಜಿ ಸಲ್ಲಿಸಿದಲ್ಲಿ ಸಂಬಂಧಿಸಿದ ಸ್ನಾತಕೋತ್ತರ ಪದವಿಯ ಅಂಕಪಟ್ಟಿಗಳು ಹಾಗೂ ತೇರ್ಗಡೆ ಪ್ರಮಾಣ ಪತ್ರಗಳು.

11) ಆಂಗ್ಲ ಭಾಷಾ ಶಿಕ್ಷಕರ ಹುದ್ದೆಗೆ ಸಂಬಂಧಿಸಿದಂತೆ ನಿಗದಿಪಡಿಸಲಾದ ರೀಜನಲ್ ಇನ್ಸ್ಟ್ಯೂಟ್ ಆಫ್ ಇಂಗ್ಲೀಷ್ ಸೌತ್ ಇಂಡಿಯಾರವರಿಂದ ಪಡೆದುಕೊಂಡಿರುವ ಸ್ನಾತಕೋತ್ತರ ಡಿಪ್ಲೋಮಾದ ಅಂಕಪಟ್ಟಿಗಳು ಹಾಗೂ ತೇರ್ಗಡೆ ಪ್ರಮಾಣ ಪತ್ರಗಳು.

12) ಕನ್ನಡ ಪಂಡಿತ/ಸಂಸ್ಕೃತ ವಿದ್ವಾನ/ಉರ್ದು ಮುನಷಿ ಪರೀಕ್ಷೆಯ ಎಲ್ಲಾ ವರ್ಷದ ಹಾಗೂ ಎಲ್ಲಾ ಪ್ರಯತ್ನಗಳ ಅಂಕಪಟ್ಟಿಗಳು ಹಾಗೂ ತೇರ್ಗಡೆ ಪ್ರಮಾಣ ಪತ್ರಗಳು.

13) ಕನ್ನಡ ಸರ್ಟಿಫಿಕೇಟ್ ಕೋರ್ಸಿನ ಅಂಕಪಟ್ಟಿ ಹಾಗೂ ತೇರ್ಗಡೆ ಪ್ರಮಾಣ ಪತ್ರಗಳು. (ಕನ್ನಡ ಸಾಹಿತ್ಯ ಪರಿಷತ್/ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ ಬೆಂಗಳೂರು) **(ಸಂಬಂಧಿಸಿದವರಿಗೆ ಮಾತ್ರ )**

14) ಅಂಗೀಕೃತ ವಿಶ್ವವಿದ್ಯಾನಿಲಯದಿಂದ ಸಂಬಂಧಿಸಿದ ಬೋಧನಾ ಮಾಧ್ಯಮದ ಭಾಷೆಯಲ್ಲಿ ಪಡೆದುಕೊಂಡಿರುವ ಡಿಪ್ಲೋಮಾ ಕೋರ್ಸಿನ ಅಂಕಪಟ್ಟಿ ಹಾಗೂ ತೇರ್ಗಡೆ ಪ್ರಮಾಣ ಪತ್ರ. **(ಸಂಬಂಧಿಸಿದವರಿಗೆ ಮಾತ್ರ )**

15) ಕೋರಿರುವ ಮೀಸಲಾತಿ (ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ / ಪ್ರವರ್ಗ–1 / 2ಎ / 2ಬಿ / 3ಎ / 3ಬಿ) ಪ್ರಮಾಣ ಪತ್ರ. **(ಸಂಬಂಧಿಸಿದವರಿಗೆ ಮಾತ್ರ )**

16) ಗ್ರಾಮೀಣ ಅಭ್ಯರ್ಥಿ ವ್ಯಾಸಂಗ ಪ್ರಮಾಣ ಪತ್ರ (ಸರಕಾರಿ ಆದೇಶ ದಿನಾಂಕ 10–08–2005 ರಲ್ಲಿ ನಿಗದಿಪಡಿಸಲಾದ ನಮೂನೆ–2ರಲ್ಲಿ ಮಾತ್ರ) (ಸಾಮಾನ್ಯ ಗುಂಪಿಗೆ ಸೇರಿದ ಅಭ್ಯರ್ಥಿ ನಮೂನೆ–2 ರ ಜೊತೆಗೆ ನಮೂನೆ–1ರಲ್ಲಿ ಸಂಬಂಧಿಸಿದ ತಹಸೀಲ್ದಾರರವರಿಂದ ಪಡೆದುಕೊಂಡಿರುವ ಪ್ರಮಾಣ ಪತ್ರವನ್ನು ಸಹ ಲಗತ್ತಿಸುವುದು) **(ಸಂಬಂಧಿಸಿದವರಿಗೆ ಮಾತ್ರ)**

17) ಕನ್ನಡ ಮಾಧ್ಯಮ ಅಭ್ಯರ್ಥಿ ವ್ಯಾಸಂಗ ಪ್ರಮಾಣ ಪತ್ರ. ( **ಸಂಬಂಧಿಸಿದವರಿಗೆ ಮಾತ್ರ** )

18) ಯೋಜನೆಗಳಿಂದ ನಿರಾಶ್ರಿತರಾದ ಕುಟುಂಬದ ಅಭ್ಯರ್ಥಿ ಪ್ರಮಾಣ ಪತ್ರ. ( **ಸಂಬಂಧಿಸಿದವರಿಗೆ ಮಾತ್ರ** )

19) ಅಂಗವಿಕಲ ಅಭ್ಯರ್ಥಿಯ ಪ್ರಮಾಣ ಪತ್ರ. ( **ಸಂಬಂಧಿಸಿದವರಿಗೆ ಮಾತ್ರ** )

20) ಮಾಜಿ ಸೈನಿಕ / ಅವಲಂಬಿತರ ಪ್ರಮಾಣ ಪತ್ರ. (ಸೈನಿಕ ಸೇವೆಯಿಂದ ಬಿಡುಗಡೆ / ಮುಕ್ತಿ ಹೊಂದಿದ ಪುಸ್ತಿಕೆಯೊಂದಿಗೆ) ( **ಸಂಬಂಧಿಸಿದವರಿಗೆ ಮಾತ್ರ** )

21) ಸರಕಾರಿ ಪ್ರೌಢ ಶಾಲೆಯಲ್ಲಿ ಸಂಬಂಧಿಸಿದ ವಿಷಯದಲ್ಲಿ ಸಕ್ಷಮ ಪ್ರಾಧಿಕಾರದಿಂದ ನೇಮಕಗೊಂಡು ಗೌರವ ಶಿಕ್ಷಕರಾಗಿ ಸೇವೆ ಸಲ್ಲಿಸಿದ ಬಗ್ಗೆ ಪ್ರಮಾಣ ಪತ್ರ. ( **ಸಂಬಂಧಿಸಿದವರಿಗೆ ಮಾತ್ರ** )

22) ಸರಕಾರಿ ಪ್ರೌಢ ಶಾಲೆಯಲ್ಲಿ ಸಂಬಂಧಿಸಿದ ವಿಷಯದಲ್ಲಿ ಸಕ್ಷಮ ಪ್ರಾಧಿಕಾರದಿಂದ ನೇಮಕಗೊಂಡು ಅರೆ ಕಾಲಿಕ ಶಿಕ್ಷಕರಾಗಿ ಸೇವೆ ಸಲ್ಲಿಸಿದ ಬಗ್ಗೆ ಪ್ರಮಾಣ ಪತ್ರ. ( **ಸಂಬಂಧಿಸಿದವರಿಗೆ ಮಾತ್ರ** )

23) ಭಾರತಿಯ ಜನಗಣತಿ ಸಂಸ್ಥೆಯಲ್ಲಿ ಗುತ್ತಿಗೆ ಆಧಾರದ ಮೇಲೆ ಸೇವೆ ಸಲ್ಲಿಸಿರುವ ಬಗ್ಗೆ ಪ್ರಮಾಣ ಪತ್ರ. ( **ಸಂಬಂಧಿಸಿದವರಿಗೆ ಮಾತ್ರ** )

24) **ಸರಕಾರದ ಸೇವೆಯಲ್ಲಿರುವ ಅಭ್ಯರ್ಥಿಗಳು** ಹಾಲಿ ಕಾರ್ಯ ನಿರ್ವಹಿಸುತ್ತಿರುವ ಉದ್ಯೋಗಕ್ಕೆ ಸಂಬಂಧಿಸಿದ ಸೇವಾ ಪ್ರಮಾಣ ಪತ್ರ ಹಾಗೂ ಈ ಹುದ್ದೆಗೆ ಅರ್ಜಿ ಸಲ್ಲಿಸಲು ನೇಮಕಾತಿ ಪ್ರಾಧಿಕಾರಿಯಿಂದ ಪಡೆದುಕೊಂಡಿರುವ **ಅನುಮತಿ ಪತ್ರ** [**ಸಂಬಂಧಿಸಿದವರಿಗೆ ಮಾತ್ರ** ]

25) ಇನ್ನಿತರ ಅವಶ್ಯವೆಂದು ಭಾವಿಸಿದ ದಾಖಲೆಗಳ ಪ್ರತಿಗಳು.

**ಸೂಚನೆ:–** **ಮೇಲ್ಕಂಡ ಎಲ್ಲಾ ದಾಖಲೆಗಳನ್ನು ಅರ್ಜಿ ಸಲ್ಲಿಸುವಾಗಲೇ ಪಡೆದು ಲಗತ್ತಿಸಬೇಕು. ಯಾವುದೇ ಹೊಸ ದಾಖಲೆಗಳನ್ನು ಆಕ್ಷೇಪಣೆ ಸಲ್ಲಿಸುವ ಹಂತದಲ್ಲಿ ಸಲ್ಲಿಸಲು ಅವಕಾಶವಿರುವುದಿಲ್ಲ, ಅಂತಹ ದಾಖಲೆಗಳನ್ನು ಪರಿಗಣಿಸದೆ ತಿರಸ್ಕರಿಸಲಾಗುವುದು**

**iii) ಹಾಲಿ ರಾಜ್ಯ ಸರಕಾರದ ಸೇವೆಯಲ್ಲಿರುವ ಅಭ್ಯರ್ಥಿಗಳು ತಮ್ಮ ಹುದ್ದೆಯ ನೇಮಕಾತಿ ಪ್ರಾಧಿಕಾರಿಯ ಮುಖಾಂತರವೇ ತಮ್ಮ ಅರ್ಜಿಗಳನ್ನು ಸಲ್ಲಿಸತಕ್ಕದ್ದು ಮತ್ತು ಅರ್ಜಿ ಸ್ವೀಕರಿಸಲು ನಿಗಧಿಪಡಿಸಿರುವ ಕೊನೆಯ ದಿನಾಂಕವಾದ 08.07.2009ರ ಸಾಯಂಕಾಲ 05–30 ರೊಳಗೆ ಅಥವಾ ಅದಕ್ಕೂ ಮುಂಚಿತವಾಗಿ ಆಯ್ಕೆ ಪ್ರಾಧಿಕಾರಿಯ ವಿಭಾಗದ ವ್ಯಾಪ್ತಿಯಲ್ಲಿ ಬರುವ ಜಿಲ್ಲಾ ಉಪನಿರ್ದೇಶಕರ ಕಛೇರಿಗೆ ಖುದ್ದಾಗಿ ಸಲ್ಲಿಸುವುದು. ಕೊನೆಯ ದಿನಾಂಕದ ನಂತರ ಬರುವ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.**

**iv)** ಅರ್ಜಿಗಳನ್ನು ಸ್ವೀಕರಿಸಲು ನಿಗಧಿಪಡಿಸಿದ ಕೊನೆಯ ದಿನಾಂಕವು ಸಾರ್ವಜನಿಕ ರಜಾ ದಿನವಾಗಿದ್ದಲ್ಲಿ ನಂತರದ ಕೆಲಸದ ದಿನವು ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕವಾಗಿರುತ್ತದೆ.

**v)** ಅರ್ಜಿಯನ್ನು ಒಳಗೊಂಡ ಲಕೋಟೆಯ ಮೇಲೆ **"ಪ್ರೌಢ ಶಾಲಾ ಸಹಾಯಕ ಶಿಕ್ಷಕರ ಗ್ರೇಡ್–2 ವೃಂದದ ______________ ವಿಷಯದ______________ಬೋಧನಾ ಮಾಧ್ಯಮದ / ದೈಹಿಕ ಶಿಕ್ಷಣ ಶಿಕ್ಷಕ (ಗ್ರೇಡ್–1) ಹುದ್ದೆಗಾಗಿ ಅರ್ಜಿ"** ಎಂದು ದಪ್ಪ ಅಕ್ಷರದಲ್ಲಿ ಬರೆದಿರಬೇಕು.

**7) ಪ್ರೌಢ ಶಾಲಾ ಸಹ ಶಿಕ್ಷಕ (ಗ್ರೇಡ್–2) ವೃಂದದ ವಿವಿಧ ವಿಷಯ ಹಾಗೂ ಮಾಧ್ಯಮದ ಮತ್ತು ದೈಹಿಕ ಶಿಕ್ಷಣ ಶಿಕ್ಷಕ (ಗ್ರೇಡ್–1) ಹುದ್ದೆಗಳಿಗೆ ಅರ್ಜಿ ಸಲ್ಲಿಸುವ ಬಗ್ಗೆ.**

ಪ್ರೌಢ ಶಾಲಾ ಸಹಾಯಕ ಶಿಕ್ಷಕರ ಗ್ರೇಡ್–2 ವೃಂದದ, ವಿವಿಧ ವಿಷಯ ಹಾಗೂ ಮಾಧ್ಯಮದ ಮತ್ತು ದೈಹಿಕ ಶಿಕ್ಷಣ ಶಿಕ್ಷಕ (ಗ್ರೇಡ್–1) ಹುದ್ದೆಗಳಿಗೆ ಒಂದೇ ಅರ್ಜಿ ನಮೂನೆಯನ್ನು ನಿಗಧಿಪಡಿಸಿದೆ. ಅಭ್ಯರ್ಥಿಗಳು ಒಂದೇ ಅರ್ಜಿಯಲ್ಲಿ ಒಂದಕ್ಕಿಂತ ಹೆಚ್ಚು ವಿಷಯದ ಅಥವಾ ಮಾಧ್ಯಮದ ಹುದ್ದೆಗಳಿಗೆ ಅರ್ಜಿ ಸಲ್ಲಿಸಬಹುದಾಗಿದೆ. ಪ್ರತ್ಯೇಕ ಅರ್ಜಿಗಳ ಅವಶ್ಯಕತೆ ಇರುವದಿಲ್ಲ.ಆದರೆ ಅಭ್ಯರ್ಥಿಗಳು ವಿವಿಧ ವಿಷಯ ಹಾಗೂ ಮಾಧ್ಯಮದ ಹುದ್ದೆಗಳಿಗೆ ಆದ್ಯತೆಯನ್ನು ನಮೂದಿಸಬೇಕು. **ಆದ್ಯತೆ ಪ್ರಕಾರ ಆಯ್ಕೆ ಮಾಡಲಾಗುವುದು. ಒಂದು ಆದ್ಯತೆಯ ಪ್ರಕಾರ ಆಯ್ಕೆ ಹೊಂದಿದ್ದಲ್ಲಿ ಉಳಿದ ಆದ್ಯತೆಗಳನ್ನು ಕೈಬಿಡಲಾಗುವುದು.**

**ಉದಾಹರಣೆಗೆ:–(1)** ಅಧಿಸೂಚನೆಯಲ್ಲಿ ನೀಡಿರುವಂತೆ ಒಬ್ಬ ಅಭ್ಯರ್ಥಿಯು ಕಲಾ [ಕನ್ನಡ ಮಾಧ್ಯಮ] ಮತ್ತು ಕನ್ನಡ ಭಾಷಾ ಶಿಕ್ಷಕರ ಹುದ್ದೆಗೆ ಅರ್ಹನಾಗಿದ್ದಲ್ಲಿ, ಅಂತಹ ಅಭ್ಯರ್ಥಿಯು ಎರಡು ಹುದ್ದೆಗಳಿಗೆ ಆದ್ಯತೆಯನ್ನು ಸೂಚಿಸಬಹುದು. ಉದಾಹರಣೆಗೆ, ಕನ್ನಡ ಭಾಷಾ ಶಿಕ್ಷಕರ ಹುದ್ದೆಗೆ ಪ್ರಥಮ ಆದ್ಯತೆಯಾಗಿದ್ದು, ಕಲಾ [ಕನ್ನಡ ಮಾಧ್ಯಮ] ಹುದ್ದೆಗೆ ಎರಡನೆಯ ಆದ್ಯತೆಯಾಗಿದ್ದಲ್ಲಿ **ಕನ್ನಡ ಭಾಷಾ** ಕಾಲಂನಲ್ಲಿ **(1)** ಎಂದು ಹಾಗೂ ಕಲಾ [ಕನ್ನಡ ಮಾಧ್ಯಮ] ಕಾಲಂನಲ್ಲಿ **(2)** ಎಂದು ನಮೂದಿಸಬೇಕು. ಒಂದು ವೇಳೆ ಆದ್ಯತೆಗಳನ್ನು ನಮೂದಿಸದಿದ್ದಲ್ಲಿ ಅಭ್ಯರ್ಥಿಯು ಹೊಂದಿರುವ ವಿದ್ಯಾರ್ಹತೆಗಳನ್ನು ಆಧರಿಸಿ ಆಯ್ಕೆಗೆ ಪರಿಗಣಿಸಲಾಗುವುದು.

**8) ವಿದ್ಯಾರ್ಹತೆಗಳು:–**

**ಅಭ್ಯರ್ಥಿಗಳು ನೇಮಕಾತಿ ಅಧಿಸೂಚನೆ ದಿನಾಂಕದಂದು "ದಿ ಕರ್ನಾಟಕ ಎಜುಕೇಷನ್ ಡಿಪಾರ್ಟ್‌ಮೆಂಟ್ ಸರ್ವೀಸಸ್ (ಡಿಪಾರ್ಟ್‌ಮೆಂಟ್ ಆಫ್ ಪಬ್ಲಿಕ್ ಇನ್‌ಸ್ಟ್ರಕ್ಷನ್) (ರಿಕ್ರೂಟ್‌ಮೆಂಟ್) (ಅಮೆಂಡ್‌ಮೆಂಟ್) ರೂಲ್ಸ್ 2002"** ನಿಯಮಗಳಲ್ಲಿ

ನಿಗದಿಪಡಿಸಿರುವಂತೆ, ಪ್ರೌಢ ಶಾಲಾ ಸಹಾಯಕ ಗ್ರೇಡ್-2 ವೃಂದದ, ವಿವಿಧ ವಿಷಯಗಳ ಹಾಗೂ ಮಾಧ್ಯಮದ ಮತ್ತು ದೈಹಿಕ ಶಿಕ್ಷಣ ಶಿಕ್ಷಕ (ಗ್ರೇಡ್-1) ಶಿಕ್ಷಕರ ಹುದ್ದೆಗಳಿಗೆ ಹೊಂದಿರಬೇಕಾದ ವಿದ್ಯಾರ್ಹತೆಗಳ ವಿವರಗಳು ಈ ಮುಂದೆ ತಿಳಿಸಿದಂತಿರುತ್ತದೆ.

**(ಅ) ಕಲಾ ಶಿಕ್ಷಕರ ಹುದ್ದೆಗಳಿಗೆ (Arts Teacher):-**

i) ಅಭ್ಯರ್ಥಿಯು, ಭಾರತ ದೇಶದ ಕಾನೂನಿನಂತೆ ಸ್ಥಾಪಿಸಲ್ಪಟ್ಟ ಮತ್ತು ವಿಶ್ವವಿದ್ಯಾಲಯ ಧನ ಸಹಾಯ ಆಯೋಗದಿಂದ ಅಂಗೀಕೃತವಾದ ಒಂದು ವಿಶ್ವವಿದ್ಯಾಲಯದ **"ಬ್ಯಾಚಲರ್ ಆಫ್ ಆರ್ಟ್ಸ್"** (ಬಿ.ಎ) ಪದವೀಧರರಾಗಿದ್ದು, ಈ ಪದವಿ ಪರೀಕ್ಷೆಯಲ್ಲಿ **"ಇತಿಹಾಸ, ಅರ್ಥಶಾಸ್ತ್ರ, ಭೂಗೋಳ ಶಾಸ್ತ್ರ, ರಾಜ್ಯಶಾಸ್ತ್ರ, ಸಮಾಜ ಶಾಸ್ತ್ರ** ಇವುಗಳಲ್ಲಿ ಯಾವುದಾದರೂ **ಎರಡು ಐಚ್ಛಿಕ ವಿಷಯಗಳನ್ನು** ಅಧ್ಯಯನ ಮಾಡಿರಬೇಕು.

**ಮತ್ತು**

ii] ಭಾರತ ದೇಶದ ಕಾನೂನಿನಂತೆ ಸ್ಥಾಪಿಸಲ್ಪಟ್ಟ ಮತ್ತು ವಿಶ್ವವಿದ್ಯಾಲಯ ಧನ ಸಹಾಯ ಆಯೋಗದಿಂದ ಅಂಗೀಕೃತವಾದ ಒಂದು ವಿಶ್ವವಿದ್ಯಾನಿಲಯದಿಂದ **ಬ್ಯಾಚುಲರ್ ಆಫ್ ಎಜ್ಯುಕೇಶನ್** (ಬಿ.ಇಡಿ) ಪದವಿಯನ್ನು ಪಡೆದಿರಬೇಕು.

**ಹಾಗೂ**

iii) ಬೋಧನಾ ಮಾಧ್ಯಮದ ಭಾಷೆಯನ್ನು ಅಭ್ಯರ್ಥಿಯು **ಬ್ಯಾಚುಲರ್ ಆಫ್ ಆರ್ಟ್ಸ್ (ಬಿ.ಎ)** ಪದವಿಯಲ್ಲಿ ಒಂದು ಭಾಷೆಯನ್ನಾಗಿ ಅಧ್ಯಯನ ಮಾಡಿರಬೇಕು.

**ಅಥವಾ**

ಬೋಧನಾ ಮಾಧ್ಯಮದ ಭಾಷೆಯನ್ನು ಬಿ.ಎ. ಪದವಿಯಲ್ಲಿ ಅಧ್ಯಯನ ಮಾಡದೆ ಇದ್ದಲ್ಲಿ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಆ ಭಾಷೆಯನ್ನು ಪ್ರಥಮ ಅಥವಾ ದ್ವಿತೀಯ ಭಾಷೆಯನ್ನಾಗಿ ಅಧ್ಯಯನ ಮಾಡಿರಬೇಕು.

**ಅಥವಾ**

ಎಸ್.ಎಸ್.ಎಲ್.ಸಿ. ಅಥವಾ ಬಿಎ ಪದವಿ ಪರೀಕ್ಷೆಯನ್ನು **ಬೋಧನಾ ಮಾಧ್ಯಮದ** ಭಾಷೆಯ ಮಾಧ್ಯಮದಲ್ಲಿ ಅಧ್ಯಯನ ಮಾಡಿರಬೇಕು.

**ಅಥವಾ**

ಭಾರತ ದೇಶದ ಕಾನೂನಿನಂತೆ ಸ್ಥಾಪಿಸಲ್ಪಟ್ಟ ಮತ್ತು ವಿಶ್ವವಿದ್ಯಾಲಯ ಧನ ಸಹಾಯ ಆಯೋಗದಿಂದ ಅಂಗೀಕೃತವಾದ ಒಂದು ವಿಶ್ವವಿದ್ಯಾನಿಲಯದಿಂದ, ಸಂಬಂಧಿಸಿದ ಬೋಧನಾ ಮಾಧ್ಯಮದ ಭಾಷೆಯಲ್ಲಿ **ಡಿಪ್ಲೋಮಾ** ಹೊಂದಿರಬೇಕು.

**ಕನ್ನಡ ಮಾಧ್ಯಮದಲ್ಲಿ ಬೋಧಿಸುವ ವಿಷಯಗಳಿಗೆ ಸಂಬಂಧಿಸಿದಂತೆ ಮೇಲೆ ತಿಳಿಸಿದ ನಿಬಂಧನೆಗಳ ಪ್ರಕಾರ ಇಲ್ಲದಿದ್ದಲ್ಲಿ, ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ, ಬೆಂಗಳೂರು ಅಥವಾ ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು ಇವರುಗಳ ವತಿಯಿಂದ ನಡೆಸಲ್ಪಡುವ "ಕನ್ನಡ ಸರ್ಟಿಫಿಕೇಟ್"**[ಕಾವ/ಜಾಣ/ರತ್ನ] **ಕೋರ್ಸ್‌ನ್ನು ಪಾಸು ಮಾಡಿರಬೇಕು.**

**(ಆ) ಭೌತ ವಿಜ್ಞಾನ ಶಿಕ್ಷಕರ ಹುದ್ದೆಗಳಿಗೆ (Physical Science Teacher):-**

i) ಅಭ್ಯರ್ಥಿಯು, ಭಾರತ ದೇಶದ ಕಾನೂನಿನಂತೆ ಸ್ಥಾಪಿಸಲ್ಪಟ್ಟ ಮತ್ತು ವಿಶ್ವವಿದ್ಯಾಲಯ ಧನ ಸಹಾಯ ಆಯೋಗದಿಂದ ಅಂಗೀಕೃತವಾದ ಒಂದು ವಿಶ್ವವಿದ್ಯಾಲಯದ **"ಬ್ಯಾಚಲರ್ ಆಫ್ ಸೈನ್ಸ್"** (ಬಿ.ಎಸ್ಸಿ) ಪದವೀಧರರಾಗಿದ್ದು, ಈ ಪದವಿ ಪರೀಕ್ಷೆಯಲ್ಲಿ ಈ ಕೆಳಕಂಡ ಐಚ್ಛಿಕ ವಿಷಯಗಳಲ್ಲಿ ಎರಡು ಐಚ್ಛಿಕ ವಿಷಯಗಳನ್ನು ಅಧ್ಯಯನ ಮಾಡಿರಬೇಕು. ಇದರಲ್ಲಿ **"ಗಣಿತ ಶಾಸ್ತ್ರ"** ಐಚ್ಛಿಕ ವಿಷಯವನ್ನು ಕಡ್ಡಾಯವಾಗಿ ಅಧ್ಯಯನ ಮಾಡಿರಬೇಕು.

**" ಭೌತಶಾಸ್ತ್ರ, ಗಣಿತಶಾಸ್ತ್ರ, ರಸಾಯನ ಶಾಸ್ತ್ರ "**

**ಅಥವಾ**

**" ಭೌತಶಾಸ್ತ್ರ, ಗಣಿತಶಾಸ್ತ್ರ, ಕಂಪ್ಯೂಟರ್ ಸೈನ್ಸ್ "**

**ಅಥವಾ**

**" ಭೌತಶಾಸ್ತ್ರ, ಗಣಿತಶಾಸ್ತ್ರ, ಎಲೆಕ್ಟ್ರಾನಿಕ್ಸ್ "**

**ಮತ್ತು**

ii) ಭಾರತ ದೇಶದ ಕಾನೂನಿನಂತೆ ಸ್ಥಾಪಿಸಲ್ಪಟ್ಟ ಮತ್ತು ವಿಶ್ವವಿದ್ಯಾಲಯ ಧನ ಸಹಾಯ ಆಯೋಗದಿಂದ ಅಂಗೀಕೃತವಾದ ಒಂದು ವಿಶ್ವವಿದ್ಯಾಲಯದಿಂದ **"ಬ್ಯಾಚಲರ್ ಆಫ್ ಎಜುಕೇಷನ್"** (ಬಿ.ಎಡ್) ಪದವಿ ಪಡೆದಿರಬೇಕು.

**ಹಾಗೂ**

iii) ಬೋಧನಾ ಮಾಧ್ಯಮದ ಭಾಷೆಯನ್ನು ಅಭ್ಯರ್ಥಿಯು **"ಬ್ಯಾಚಲರ್ ಆಫ್ ಸೈನ್ಸ್"** (ಬಿ.ಎಸ್ಸಿ) ಪದವಿಯಲ್ಲಿ ಒಂದು ಭಾಷೆಯನ್ನಾಗಿ ಅಧ್ಯಯನ ಮಾಡಿರಬೇಕು.

**ಅಥವಾ**

ಬೋಧನಾ ಮಾಧ್ಯಮದ ಭಾಷೆಯನ್ನು ಬಿ.ಎಸ್ಸಿ. ಪದವಿಯಲ್ಲಿ ಅಧ್ಯಯನ ಮಾಡದೆ ಇದ್ದಲ್ಲಿ **ಎಸ್.ಎಸ್.ಎಲ್.**ಸಿ. ಪರೀಕ್ಷೆಯಲ್ಲಿ ಆ ಭಾಷೆಯನ್ನು **ಪ್ರಥಮ ಅಥವಾ ದ್ವಿತೀಯ** ಭಾಷೆಯನ್ನಾಗಿ ಅಧ್ಯಯನ ಮಾಡಿರಬೇಕು.

**ಅಥವಾ**

ಎಸ್.ಎಸ್.ಎಲ್.ಸಿ. ಅಥವಾ ಬಿ.ಎಸ್ಸಿ. ಪದವಿ ಪರೀಕ್ಷೆಯನ್ನು **ಬೋಧನಾ ಮಾಧ್ಯಮದ** ಭಾಷೆಯ ಮಾಧ್ಯಮದಲ್ಲಿ ಅಧ್ಯಯನ ಮಾಡಿರಬೇಕು.

**ಅಥವಾ**

ಭಾರತ ದೇಶದ ಕಾನೂನಿನಂತೆ ಸ್ಥಾಪಿಸಲ್ಪಟ್ಟ ಮತ್ತು ವಿಶ್ವವಿದ್ಯಾಲಯ ಧನ ಸಹಾಯ ಆಯೋಗದಿಂದ ಅಂಗೀಕೃತವಾದ ಒಂದು ವಿಶ್ವವಿದ್ಯಾಲಯದಿಂದ, ಸಂಬಂಧಿಸಿದ ಬೋಧನಾ ಮಾಧ್ಯಮದ ಭಾಷೆಯಲ್ಲಿ **ಡಿಪ್ಲೋಮಾವನ್ನು** ಹೊಂದಿರಬೇಕು.

**ಕನ್ನಡ ಮಾಧ್ಯಮದಲ್ಲಿ ಬೋಧಿಸುವ ವಿಷಯಗಳಿಗೆ ಸಂಬಂಧಿಸಿದಂತೆ ಮೇಲೆ ತಿಳಿಸಿದ ನಿಬಂಧನೆಗಳ ಪ್ರಕಾರ ಇಲ್ಲದಿದ್ದಲ್ಲಿ, ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ, ಬೆಂಗಳೂರು ಅಥವಾ ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು ಇವರುಗಳ ವತಿಯಿಂದ ನಡೆಸಲ್ಪಡುವ "ಕನ್ನಡ ಸರ್ಟಿಫಿಕೇಟ್" ಕೋರ್ಸ್‌ನ್ನು [ಕಾವ/ಜಾಣ/ರತ್ನ] ಪಾಸು ಮಾಡಿರಬೇಕು.**

**(ಇ) ಜೀವ ವಿಜ್ಞಾನ ಶಿಕ್ಷಕರ ಹುದ್ದೆಗಳಿಗೆ (Biological Science Teacher):–**

i) ಅಭ್ಯರ್ಥಿಯು, ಭಾರತ ದೇಶದ ಕಾನೂನಿನಂತೆ ಸ್ಥಾಪಿಸಲ್ಪಟ್ಟ ಮತ್ತು ವಿಶ್ವವಿದ್ಯಾಲಯ ಧನ ಸಹಾಯ ಆಯೋಗದಿಂದ ಅಂಗೀಕೃತವಾದ ಒಂದು ವಿಶ್ವವಿದ್ಯಾಲಯದ **"ಬ್ಯಾಚಲರ್ ಆಫ್ ಸೈನ್ಸ್"** (ಬಿ.ಎಸ್ಸಿ) ಪದವೀಧರರಾಗಿದ್ದು, ಈ ಪದವಿ ಪರೀಕ್ಷೆಯಲ್ಲಿ **ರಸಾಯನ ಶಾಸ್ತ್ರ, ಸಸ್ಯಶಾಸ್ತ್ರ ಮತ್ತು ಪ್ರಾಣಿಶಾಸ್ತ್ರ** ಈ ಐಚ್ಛಿಕ ವಿಷಯಗಳಲ್ಲಿ ಎರಡು ಐಚ್ಛಿಕ ವಿಷಯಗಳನ್ನು ಅಧ್ಯಯನ ಮಾಡಿರಬೇಕು. ಹಾಗೂ ಇದರಲ್ಲಿ **" ರಸಾಯನಶಾಸ್ತ್ರ "** ಐಚ್ಛಿಕ ವಿಷಯವನ್ನು ಕಡ್ಡಾಯವಾಗಿ ಅಧ್ಯಯನ ಮಾಡಿರಬೇಕು.

**ಮತ್ತು**

ii) ಭಾರತ ದೇಶದ ಕಾನೂನಿನಂತೆ ಸ್ಥಾಪಿಸಲ್ಪಟ್ಟ ಮತ್ತು ವಿಶ್ವವಿದ್ಯಾಲಯ ಧನ ಸಹಾಯ ಆಯೋಗದಿಂದ ಅಂಗೀಕೃತವಾದ ಒಂದು ವಿಶ್ವವಿದ್ಯಾಲಯದಿಂದ **"ಬ್ಯಾಚಲರ್ ಆಫ್ ಎಜುಕೇಷನ್"** (ಬಿ.ಎಡ್) ಪದವಿ ಪಡೆದಿರಬೇಕು.

**ಹಾಗೂ**

iii) ಬೋಧನಾ ಮಾಧ್ಯಮದ ಭಾಷೆಯನ್ನು ಅಭ್ಯರ್ಥಿಯು **"ಬ್ಯಾಚಲರ್ ಆಫ್ ಸೈನ್ಸ್"** (ಬಿ.ಎಸ್ಸಿ) ಪದವಿಯಲ್ಲಿ ಒಂದು ಭಾಷೆಯನ್ನಾಗಿ ಅಧ್ಯಯನ ಮಾಡಿರಬೇಕು.

**ಅಥವಾ**

ಬೋಧನಾ ಮಾಧ್ಯಮದ ಭಾಷೆಯನ್ನು ಬಿ.ಎಸ್ಸಿ. ಪದವಿಯಲ್ಲಿ ಅಧ್ಯಯನ ಮಾಡದೆ ಇದ್ದಲ್ಲಿ **ಎಸ್.ಎಸ್.ಎಲ್.**ಸಿ. ಪರೀಕ್ಷೆಯಲ್ಲಿ ಆ ಭಾಷೆಯನ್ನು **ಪ್ರಥಮ ಅಥವಾ ದ್ವಿತೀಯ** ಭಾಷೆಯನ್ನಾಗಿ ಅಧ್ಯಯನ ಮಾಡಿರಬೇಕು.

**ಅಥವಾ**

ಎಸ್.ಎಸ್.ಎಲ್.ಸಿ. ಅಥವಾ ಬಿ.ಎಸ್ಸಿ. ಪದವಿ ಪರೀಕ್ಷೆಯನ್ನು **ಬೋಧನಾ ಮಾಧ್ಯಮದ** ಭಾಷೆಯ ಮಾಧ್ಯಮದಲ್ಲಿ ಅಧ್ಯಯನ ಮಾಡಿರಬೇಕು.

**ಅಥವಾ**

ಭಾರತ ದೇಶದ ಕಾನೂನಿನಂತೆ ಸ್ಥಾಪಿಸಲ್ಪಟ್ಟ ಮತ್ತು ವಿಶ್ವವಿದ್ಯಾಲಯ ಧನ ಸಹಾಯ ಆಯೋಗದಿಂದ ಅಂಗೀಕೃತವಾದ ಒಂದು ವಿಶ್ವವಿದ್ಯಾಲಯದಿಂದ, ಸಂಬಂಧಿಸಿದ ಬೋಧನಾ ಮಾಧ್ಯಮದ ಭಾಷೆಯಲ್ಲಿ **'ಡಿಪ್ಲೋಮಾ' ವನ್ನು** ಹೊಂದಿರಬೇಕು.

ಕನ್ನಡ ಮಾಧ್ಯಮದಲ್ಲಿ ಬೋಧಿಸುವ ವಿಷಯಗಳಿಗೆ ಸಂಬಂಧಿಸಿದಂತೆ ಮೇಲೆ ತಿಳಿಸಿದ ನಿಬಂಧನೆಗಳ ಪ್ರಕಾರ ಇಲ್ಲದಿದ್ದಲ್ಲಿ, ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ, ಬೆಂಗಳೂರು ಅಥವಾ ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು ಇವರುಗಳ ವತಿಯಿಂದ ನಡೆಸಲ್ಪಡುವ "ಕನ್ನಡ ಸರ್ಟಿಫಿಕೇಟ್" ಕೋರ್ಸ್‌ನ್ನು[ಕಾವ/ಜಾಣ/ರತ್ನ] ಪಾಸು ಮಾಡಿರಬೇಕು.

**(ಈ) ಭಾಷಾ ಶಿಕ್ಷಕರುಗಳ ಹುದ್ದೆಗಳಿಗೆ (Language Assistants ):–**

i) ಅಭ್ಯರ್ಥಿಯು, ಭಾರತ ದೇಶದ ಕಾನೂನಿನಂತೆ ಸ್ಥಾಪಿಸಲ್ಪಟ್ಟ ಮತ್ತು ವಿಶ್ವವಿದ್ಯಾಲಯ ಧನ ಸಹಾಯ ಆಯೋಗದಿಂದ ಅಂಗೀಕೃತವಾದ ಒಂದು ವಿಶ್ವವಿದ್ಯಾಲಯದ **"ಬ್ಯಾಚಲರ್ ಆಫ್ ಆರ್ಟ್ಸ್"** (ಬಿ.ಎ) ಪದವೀಧರರಾಗಿದ್ದು, ಈ ಪದವಿ ಪರೀಕ್ಷೆಯಲ್ಲಿ ಸಂಬಂಧಿಸಿದ ಭಾಷಾ ಶಿಕ್ಷಕರ ಹುದ್ದೆಗೆ ಅನುಗುಣವಾದ ಭಾಷೆಯನ್ನು ಒಂದು ಐಚ್ಛಿಕ ವಿಷಯವನ್ನಾಗಿ (Optionals) ಅಧ್ಯಯನ ಮಾಡಿರಬೇಕು. ಭಾಷೆಗಳು ಅಂದರೆ **ಕನ್ನಡ, ಇಂಗ್ಲೀಷ್, ಉರ್ದು, ಹಿಂದಿ, ಮರಾಠಿ, ತೆಲುಗು, ತಮಿಳು ಮತ್ತು ಸಂಸ್ಕೃತ.**

**ಅಥವಾ**

ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ ಬೆಂಗಳೂರು ಇವರು ನಡೆಸುವ (04) ನಾಲ್ಕು ವರ್ಷಗಳ ಅವಧಿಯ **ಕನ್ನಡ ಪಂಡಿತ, ಸಂಸ್ಕೃತ ವಿದ್ವಾನ್[ವಿದ್ಯುನ್ಮಧ್ಯಮ ಮತ್ತು ವಿದ್ವತ್ ಉತ್ತಮ] "ಉರ್ದು ಮುನ್ಷಿ"** ಪರೀಕ್ಷೆಯನ್ನು ಪಾಸು ಮಾಡಿರಬೇಕು.

**ಮತ್ತು**

ii) ಭಾರತ ದೇಶದ ಕಾನೂನಿನಂತೆ ಸ್ಥಾಪಿಸಲ್ಪಟ್ಟ ಮತ್ತು ವಿಶ್ವವಿದ್ಯಾಲಯ ಧನ ಸಹಾಯ ಆಯೋಗದಿಂದ ಅಂಗೀಕೃತವಾದ ಒಂದು ವಿಶ್ವವಿದ್ಯಾಲಯದಿಂದ **"ಬ್ಯಾಚಲರ್ ಆಫ್ ಎಜುಕೇಷನ್"** (ಬಿ.ಎಡ್) ಪದವಿ ಪಡೆದಿರಬೇಕು.

**<u>ಬ್ಯಾಚುಲರ್ ಪದವಿಯಲ್ಲಿ ಸಂಬಂಧಿಸಿದ ಭಾಷಾ ಶಿಕ್ಷಕರ ಹುದ್ದೆಗೆ ಅನುಗುಣವಾದ ಭಾಷಾ ಐಚ್ಛಿಕ ವಿಷಯವನ್ನು ಅಧ್ಯಯನ ಮಾಡದೆ ಇದ್ದಲ್ಲಿ ಅಂಥಹ ಅಭ್ಯರ್ಥಿಗಳು;</u>**

**a)** ಸಂಬಂದಿಸಿದ ಭಾಷಾ ವಿಷಯದಲ್ಲಿ ಸ್ನಾತಕೋತ್ತರ ಪದವಿಯನ್ನು (Post Graduate Degree) ಹೊಂದಿದ್ದಲ್ಲಿ ಸಂಬಂಧಿಸಿದ ಭಾಷಾ ಶಿಕ್ಷಕರ ಹುದ್ದೆಗೆ ಪರಿಗಣಿಸಲು ಅರ್ಹತೆ ಪಡೆಯುತ್ತಾರೆ.

**b)** **ರೀಜನಲ್ ಇನ್ಸ್ಟ್ಯೂಟ್ ಆಫ್ ಇಂಗ್ಲೀಷ್ ಸೌತ್ ಇಂಡಿಯಾ** ಇವರು ನೀಡುವ **ಪೋಸ್ಟ್ ಗ್ರಾಜುಯೇಟ್ ಡಿಪ್ಲೋಮಾ ಸರ್ಟಿಫಿಕೇಟ್ ಇನ್ ಇಂಗ್ಲೀಷ್** ಹೊಂದಿದ್ದಲ್ಲಿ ಅಂತಹ ಅಭ್ಯರ್ಥಿಗಳು ಇಂಗ್ಲೀಷ್ ಭಾಷಾ ಶಿಕ್ಷಕರ ಹುದ್ದೆಗೆ ಪರಿಗಣಿಸಲು ಅರ್ಹತೆ ಪಡೆಯುತ್ತಾರೆ.

**c)** ಹಿಂದಿ ಭಾಷಾ ಶಿಕ್ಷಕರ ಹುದ್ದೆಗೆ ಅಭ್ಯರ್ಥಿಯು, ಭಾರತ ದೇಶದ ಕಾನೂನಿನಂತೆ ಸ್ಥಾಪಿಸಲ್ಪಟ್ಟ ಮತ್ತು ವಿಶ್ವವಿದ್ಯಾಲಯ ಧನ ಸಹಾಯ ಆಯೋಗದಿಂದ ಅಂಗೀಕೃತವಾದ ಒಂದು ವಿಶ್ವವಿದ್ಯಾನಿಲಯದ **ಬ್ಯಾಚುಲರ್ ಪದವೀಧರರಾಗಿದ್ದು,** ಈ ಪದವಿಯಲ್ಲಿ **ಹಿಂದಿ**ಯನ್ನು ಒಂದು ಮೇಜರ್ ಐಚ್ಛಿಕ ವಿಷಯವನ್ನಾಗಿ ಅಧ್ಯಯನ ಮಾಡಿರಬೇಕು.

**ಮತ್ತು**

ಭಾರತ ದೇಶದ ಕಾನೂನಿನಂತೆ ಸ್ಥಾಪಿಸಲ್ಪಟ್ಟ ಮತ್ತು ವಿಶ್ವವಿದ್ಯಾಲಯ ಧನ ಸಹಾಯ ಆಯೋಗದಿಂದ ಅಂಗೀಕೃತವಾದ ಒಂದು ವಿಶ್ವವಿದ್ಯಾನಿಲಯದಿಂದ **ಬ್ಯಾಚುಲರ್ ಆಫ್ ಎಜುಕೇಷನ್ (ಬಿ.ಎಡ್)** ಪದವೀಧರರಾಗಿದ್ದು, ಈ ಪದವಿ ಪರೀಕ್ಷೆಯಲ್ಲಿ **ಹಿಂದಿ**ಯನ್ನು ಬೋಧನಾ ವಿಷಯವನ್ನಾಗಿ ಅಧ್ಯಯನ ಮಾಡಿರಬೇಕು.

**d)** ಇಂಗ್ಲೀಷ್ ಭಾಷಾ ಶಿಕ್ಷಕರ ಹುದ್ದೆಗೆ ಸಂಬಂಧಿಸಿದಂತೆ ಅಭ್ಯರ್ಥಿಗಳು ಬಿ.ಎಡ್. ಪದವಿಯಲ್ಲಿ ಇಂಗ್ಲೀಷ್‌ನ್ನು ಬೋಧನಾ ವಿಷಯವನ್ನಾಗಿ ಅಧ್ಯಯನ ಮಾಡದೆ ಇದ್ದಲ್ಲಿ ಅಂತಹ ಅಭ್ಯರ್ಥಿಗಳು **ರೀಜನಲ್ ಇನ್ಸ್ಟ್ಯೂಟ್ ಆಫ್ ಇಂಗ್ಲೀಷ್, ಸೌತ್ ಇಂಡಿಯಾ** ಇವರು ನೀಡುವ **ಪೋಸ್ಟ್ ಗ್ರಾಜುಯೇಟ್ ಡಿಪ್ಲೋಮಾ ಸರ್ಟಿಫಿಕೇಟ್ ಇನ್ ಇಂಗ್ಲೀಷ್** ಹೊಂದಿದ್ದಲ್ಲಿ ನೇಮಕಾತಿಗೆ ಪರಿಗಣಿಸಲು ಅರ್ಹತೆ ಪಡೆಯುತ್ತಾರೆ.

**ವಿಶೇಷ ಸೂಚನೆ:–** ಮೇಲ್ಕಂಡ ಎ, ಬಿ ಮತ್ತು ಡಿ (ಪ್ರಕರಣಗಳಲ್ಲಿ) ಅಭ್ಯರ್ಥಿಯು ಬ್ಯಾಚುಲರ್ ಪದವಿ ಮತ್ತು ಬ್ಯಾಚುಲರ್ ಆಫ್ ಎಜುಕೇಷನ್ ಪದವಿ ಪರೀಕ್ಷೆಗಳಲ್ಲಿ ಪಡೆದಿರುವ ಅಂಕಗಳನ್ನು ಮಾತ್ರ ಮೆರಿಟ್ ಕಂಡುಕೊಳ್ಳಲು ಪರಿಗಣಿಸಲಾಗುತ್ತದೆ. ಆದರೆ ಸ್ನಾತಕೋತ್ತರ ಮತ್ತು ಡಿಪ್ಲೋಮಾ ಪರೀಕ್ಷೆಗಳಲ್ಲಿ ಪಡೆದಿರುವ ಅಂಕಗಳನ್ನು ಮೆರಿಟ್ ಕಂಡು ಹಿಡಿಯಲು ಗಣನೆಗೆ ತೆಗೆದುಕೊಳ್ಳವುದಿಲ್ಲ.

**<u>ಹಿಂದಿ ಭಾಷಾ ಸಹ ಶಿಕ್ಷಕರ ಹುದ್ದೆಗೆ ಸಂಬಂಧಿಸಿದಂತೆ ಅಭ್ಯರ್ಥಿಯು:–</u>**

1. **ದಕ್ಷಿಣ ಭಾರತ ಹಿಂದಿ ಪ್ರಚಾರ ಸಭಾ, ಮದ್ರಾಸ್ ಇವರು ನಡೆಸುವ** ರಾಷ್ಟ್ರಭಾಷಾ ಪ್ರವೀಣ್ ಮತ್ತು ಶಿಕ್ಷ ಸ್ನಾತಕ್ **(ಹಿಂದಿ ಮತ್ತು ಮತ್ತೊಂದು ಭಾಷೆಯನ್ನು ಬೋಧನಾ ವಿಷಯವನ್ನಾಗಿ** ಶಿಕ್ಷಾ ಸ್ನಾತಕ್ ಪರೀಕ್ಷೆಯಲ್ಲಿ **ಅಧ್ಯಯನ ಮಾಡಿರಬೇಕು)** ಮತ್ತು ಪದವಿ ಪೂರ್ವ ಶಿಕ್ಷಣ (ಪಿ.ಯು.ಸಿ) ಕೋರ್ಸ್ **ಅನ್ನು ಪಾಸು ಮಾಡಿದ್ದು, ಈ ಕೋರ್ಸಿನಲ್ಲಿ ಕನ್ನಡ ಅಥವಾ ಯಾವುದೇ ಒಂದು ಪ್ರಾದೇಶಿಕ ಭಾಷೆಯನ್ನು ಒಂದು ವಿಷಯವನ್ನಾಗಿ ಅಥವಾ ಮಾಧ್ಯಮದಲ್ಲಿ ಪಾಸು ಮಾಡಿರಬೇಕು.**

**ಅಥವಾ**

2. **ರಾಜ್ಯ ಸರ್ಕಾರವು ತತ್ಸಮಾನ ವಿದ್ಯಾರ್ಹತೆ ಎಂದು ಘೋಷಿಸಿರುವ ಇತರೆ ಯಾವುದೇ ವಿದ್ಯಾರ್ಹತೆಯನ್ನು ಹೊಂದಿದ್ದಲ್ಲಿ ನೇಮಕಾತಿಗೆ ಪರಿಗಣಿಸಲು ಅರ್ಹತೆ ಪಡೆಯುತ್ತಾರೆ.**

ಸರ್ಕಾರದ ಆದೇಶ ಸಂಖ್ಯೆ ಇಡಿ 160 ಪಿಟಿಐ 2003 ದಿನಾಂಕ 24–02–2004ರನ್ವಯ ಈಕೆಳಕಂಡಂತೆ ಪದವಿ ಮತ್ತು ಬಿಇಡಿ ತತ್ಸಮಾನ ವಿದ್ಯಾರ್ಹತೆಯನ್ನು ಹೊಂದಿರಬೇಕು

| **ಪದವಿ ತತ್ಸಮಾನ ಪರೀಕ್ಷೆ ಹೆಸರು** | **ಸಂಸ್ಥೆಯ ಹೆಸರು** |
|---|---|
| 1. ಹಿಂದಿ ರತ್ನ | ಮೈಸೂರು ಹಿಂದಿ ಪ್ರಚಾರ ಪರಿಷತ್,ಬೆಂಗಳೂರು |
| 2. ರಾಜ ಭಾಷಾ ವಿದ್ವಾನ್ | ಕರ್ನಾಟಕ ಹಿಂದಿ ಪ್ರಚಾರ ಸಮಿತಿ,ಬೆಂಗಳೂರು |
| 3. ಹಿಂದಿ ಭಾಷಾ ಪ್ರವೀಣ್ | ಕರ್ನಾಟಕ ಮಹಿಳಾ ಹಿಂದಿ ಸೇವಾ ಸಮಿತಿ,ಬೆಂಗಳೂರು |
| 4. ರಾಷ್ಟ್ರಭಾಷಾ ಪ್ರವೀಣ್ | ದಕ್ಷಿಣ ಭಾರತ ಹಿಂದಿ ಪ್ರಚಾರ ಸಭಾ,ಮದ್ರಾಸ್ |

ಸರ್ಕಾರದ ಆದೇಶ ಸಂಖ್ಯೆ ಇಡಿ 125 ಪಿಟಿಐ 2003 ದಿನಾಂಕ 16–08–2003 ರನ್ವಯ ಕೆಳಕಂಡ ವಿದ್ಯಾರ್ಹತೆಗಳನ್ನು ಬಿಎಡ್ ಪರೀಕ್ಷೆಗೆ ತತ್ಸಮಾನವೆಂದು ಈ ಕೆಳಕಂಡ ಷರತ್ತಿಗೆ ಒಳಪಟ್ಟು ಘೋಷಿಸಲಾಗಿದೆ.

| ಬಿಎಡ್ ತತ್ಸಮಾನ ಪರೀಕ್ಷೆ ಹೆಸರು | ಸಂಸ್ಥೆಯ ಹೆಸರು |
|---|---|
| 1. ಹಿಂದಿ ಶಿಕ್ಷಕ್ ಪರೀಕ್ಷೆ | ಅ. ಕರ್ನಾಟಕ ಮಹಿಳಾ ಹಿಂದಿ ಸೇವಾ ಸಮಿತಿ,ಬೆಂಗಳೂರು |
| | ಆ. ಕರ್ನಾಟಕ ಹಿಂದಿ ಪ್ರಚಾರ ಸಮಿತಿ,ಬೆಂಗಳೂರು |
| | ಇ. ಮೈಸೂರು ಹಿಂದಿ ಪ್ರಚಾರ ಪರಿಷತ್,ಬೆಂಗಳೂರು |
| | ಈ. ಮಾನಸ ಎಜುಕೇಷನ್ ಸೊಸೈಟಿ, ತುಮಕೂರು |
| | ಉ. ಕರ್ನಾಟಕ ಲೇಬರ್ ಎಜುಕೇಷನ್ ಸೊಸೈಟಿ,ಬೀದರ್ |
| 2. ಹಿಂದಿ ಶಿಕ್ಷಣ ಪಾರಂಗತ್ ಪರೀಕ್ಷೆ | ಅ. ಸರ್ಕಾರಿ ಹಿಂದಿ ಶಿಕ್ಷಕರ ತರಬೇತಿ ಕಾಲೇಜು, ಮೈಸೂರು. |

I) ಹಿಂದಿ ಶಿಕ್ಷಕ ಮತ್ತು ಹಿಂದಿ ಶಿಕ್ಷಣ ಪರಾಂಗತ ವಿದ್ಯಾರ್ಹತೆ ಹೊಂದಿರುವ ಅಭ್ಯರ್ಥಿಗಳು ಸದರಿ ಕೋರ್ಸನ್ನು ಸೇರುವ ಮುಂಚೆ ಪಿ.ಯು.ಸಿ.ಯನ್ನು ಪಾಸು ಮಾಡಿದ್ದು, ಸದರಿ ಪಿ.ಯು ಕೋರ್ಸಿನಲ್ಲಿ ಕನ್ನಡ ಅಥವಾ ಯಾವುದಾದರೂ ಒಂದು ಪ್ರಾಂತೀಯ ಭಾಷೆಯನ್ನು ಒಂದು ವಿಷಯವನ್ನಾಗಿ ಅಥವಾ ಮಾಧ್ಯಮವನ್ನಾಗಿ ವ್ಯಾಸಂಗ ಮಾಡಿರಬೇಕು.

II) ಹಿಂದಿ ಮತ್ತು ಮತ್ತೊಂದು ಭಾಷೆಯನ್ನು ಬೋಧನಾ ವಿಧಾನವನ್ನಾಗಿ ಅಧ್ಯಯನ ಮಾಡಿರಬೇಕು.

**(ಉ) ದೈಹಿಕ ಶಿಕ್ಷಣ ಶಿಕ್ಷಕ (ಗ್ರೇಡ್-1) ಹುದ್ದೆಗಳಿಗೆ (Physical Education Teacher Grade-I):-**

i) ಭಾರತ ದೇಶದ ಕಾನೂನಿನಂತೆ ಸ್ಥಾಪಿಸಲ್ಪಟ್ಟ ಮತ್ತು ವಿಶ್ವವಿದ್ಯಾಲಯ ಧನ ಸಹಾಯ ಆಯೋಗದಿಂದ ಅಂಗೀಕೃತವಾದ ಒಂದು ವಿಶ್ವವಿದ್ಯಾಲಯದ **"ಬ್ಯಾಚಲರ್ ಪದವಿ"** ಯನ್ನು ಪಡೆದಿರಬೇಕು.

**ಮತ್ತು**

ii) ಭಾರತ ದೇಶದ ಕಾನೂನಿನಂತೆ ಸ್ಥಾಪಿಸಲ್ಪಟ್ಟ ಮತ್ತು ವಿಶ್ವವಿದ್ಯಾಲಯ ಧನ ಸಹಾಯ ಆಯೋಗದಿಂದ ಅಂಗೀಕೃತವಾದ ಒಂದು ವಿಶ್ವವಿದ್ಯಾಲಯದ **"ಬ್ಯಾಚಲರ್ ಆಫ್ ಫಿಸಿಕಲ್ ಎಜುಕೇಷನ್"** ಪದವಿಯನ್ನು ಪಡೆದಿರಬೇಕು. ಅಥವಾ **ಗೌರ್ನಮೆಂಟ್ ಕಾಲೇಜ್ ಆಫ್ ಫಿಸಿಕಲ್ ಎಜುಕೇಷನ್** ಇಲ್ಲಿಂದ **ಡಿಪ್ಲೋಮಾ ಇನ್ ಫಿಸಿಕಲ್ ಎಜುಕೇಷನ್** ಹೊಂದಿರಬೇಕು. ಅಥವಾ ರಾಜ್ಯ ಸರಕಾರವು ತತ್ಸಮಾನ ಪರೀಕ್ಷೆ ಎಂದು ಪರಿಗಣಿಸಿರುವ ವಿದ್ಯಾರ್ಹತೆಯನ್ನು ಹೊಂದಿರಬೇಕು.

**9) ವೇತನ ಶ್ರೇಣಿ:- ಪ್ರೌಢ ಶಾಲಾ ಸಹಾಯಕ ಶಿಕ್ಷಕರು ಗ್ರೇಡ್-2 ಹಾಗೂ ದೈಹಿಕ ಶಿಕ್ಷಣ ಶಿಕ್ಷಕ (ಗ್ರೇಡ್-1) ವೃಂದದ ಹುದ್ದೆಗಳಿಗೆ :** ರೂ.8825 -225-9500-250-10500-300-12300-350-14400-400-16000.

**10) ವಯೋಮಿತಿ**

**ಅಭ್ಯರ್ಥಿಗಳು ಈ** ನೇಮಕಾತಿ ಅಧಿಸೂಚನೆ **ದಿನಾಂಕದಂದು ಮುಂದೆ ತಿಳಿಸಿರುವ ಕನಿಷ್ಠ ಮತ್ತು ಗರಿಷ್ಠ ವಯೋಮಿತಿಯೊಳಗಿರಬೇಕು.**

**ಕನಿಷ್ಠ :** 20 ವರ್ಷಗಳು ತುಂಬಿರಬೇಕು.

**ಗರಿಷ್ಠ :**

| | |
|---|---|
| ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡ ಅಥವಾ ಹಿಂದುಳಿದ ಪ್ರವರ್ಗ-1ಕ್ಕೆ **ಸೇರಿದ ಅಭ್ಯರ್ಥಿಗಳು** | 45 ವರ್ಷಗಳನ್ನು ತಲುಪಿರಬಾರದು. |
| ಪ್ರವರ್ಗ 2(ಎ), 2(ಬಿ), 3(ಎ) ಮತ್ತು 3(ಬಿ) **ಗಳಿಗೆ ಸೇರಿದ ಅಭ್ಯರ್ಥಿಗಳು** | 43 ವರ್ಷಗಳನ್ನು ತಲುಪಿರಬಾರದು. |
| ಇತರೆ ಅಭ್ಯರ್ಥಿಗಳು [ಸಾಮಾನ್ಯ ಅಭ್ಯರ್ಥಿಗಳು] | 40 ವರ್ಷಗಳನ್ನು ತಲುಪಿರಬಾರದು. |

**ಗರಿಷ್ಠ ವಯೋಮಿತಿಯ ಸಡಿಲಿಕೆ:**

**i)** ಸರ್ಕಾರಿ ಪ್ರೌಢಶಾಲೆಗಳಲ್ಲಿ ಕಾರ್ಯನಿರ್ವಹಿಸಿದ /ನಿರ್ವಹಿಸುತ್ತಿರುವ "ಅರೆಕಾಲಿಕ" ಮತ್ತು ಗೌರವ ಶಿಕ್ಷಕರುಗಳಿಗೆ ಗರಿಷ್ಠ ವಯೋಮಿತಿಯನ್ನು ಅವರುಗಳು "ಅರೆಕಾಲಿಕ/ಗೌರವ ಶಿಕ್ಷಕರ ಸೇವೆ ಸಲ್ಲಿಸಿದ ವರ್ಷಗಳಷ್ಟು ( ಗರಿಷ್ಠ 10 ವರ್ಷಗಳ ಮಿತಿಗೆ ಒಳಪಟ್ಟು) ಸಡಿಲಿಕೆ ಇರುತ್ತದೆ.

**ii)** ಮಾಜಿ ಸೈನಿಕ ಅಭ್ಯರ್ಥಿಗಳು 1977ರ ಕರ್ನಾಟಕ ರಾಜ್ಯ ಸರ್ಕಾರಿ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳ ಪ್ರಕಾರ ವಯೋಮಿತಿ ಸಡಿಲಿಕೆಗೆ ಅರ್ಹರಿರುತ್ತಾರೆ.

**11) ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆ:-** ಆಯ್ಕೆ ಬಯಸುವ ಪ್ರತಿ ಅಭ್ಯರ್ಥಿಯು ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಗೆ ಕಡ್ಡಾಯವಾಗಿ ಹಾಜರಾಗಬೇಕು.

**12) ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆ ಬಗ್ಗೆ ವಿವರಗಳು:-**

**i) ಪರೀಕ್ಷೆ ಹೆಸರು:** ಸರಕಾರಿ ಪ್ರೌಢ ಶಾಲಾ ಸಹಾಯಕ ಶಿಕ್ಷಕ (ಗ್ರೇಡ್-2) ವೃಂದದ ಮತ್ತು ದೈಹಿಕ ಶಿಕ್ಷಣ ಶಿಕ್ಷಕ (ಗ್ರೇಡ್-1) ವೃಂದದ ಶಿಕ್ಷಕರ ಹುದ್ದೆಗಳಿಗೆ ನೇರ ನೇಮಕಾತಿಗಾಗಿ ನಡೆಸುವ ವಿಭಾಗೀಯ ಮಟ್ಟದ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆ.

**ii) ಪರೀಕ್ಷೆ ನಡೆಸುವ ಪ್ರಾಧಿಕಾರಿ:** ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯನ್ನು ಮೈಸೂರು ವಿಭಾಗೀಯ ಕಾರ್ಯದರ್ಶಿಗಳು, ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ ಹಾಗೂ ಪದನಿಮಿತ್ತ ಸಹನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಳಗಾವಿ ವಿಭಾಗ, ಬೆಳಗಾವಿ ಇವರು ವಿಭಾಗ ಮಟ್ಟದಲ್ಲಿ ನಡೆಸುವರು. ವಿಭಾಗದ ವ್ಯಾಪ್ತಿಯಲ್ಲಿ ಬರುವ ಶೈಕ್ಷಣಿಕ ಜಿಲ್ಲೆಗಳು (ಬೆಳಗಾವಿ, ಚಿಕ್ಕೋಡಿ, ಬಾಗಲಕೋಟೆ, ಬಿಜಾಪುರ, ಧಾರವಾಡ, ಗದಗ, ಹಾವೇರಿ ಮತ್ತು ಕಾರವಾರ) ಪರೀಕ್ಷಾ ಕೇಂದ್ರಗಳಾಗಿರುತ್ತವೆ.

**iii) ಪರೀಕ್ಷೆಯ ದಿನಾಂಕ: ಶನಿವಾರ 08-08-2009 ಮತ್ತು ಭಾನುವಾರ 09-08-2009**

**iv) ಪರೀಕ್ಷೆಯ ಅವಧಿ ಮತ್ತು ಸಮಯ :**

ಶನಿವಾರ ದಿನಾಂಕ: 08-08-2009 : ಪ್ರಥಮ ಪತ್ರಿಕೆ ಪೂರ್ವಾಹ್ನ 10-30 ರಿಂದ 12-30 ರವರೆಗೆ.
ದ್ವಿತೀಯ ಪತ್ರಿಕೆ ಅಪರಾಹ್ನ 2-30 ರಿಂದ 4-30 ರವರೆಗೆ.

ಭಾನುವಾರ ದಿನಾಂಕ; :09-08-2009 : ಪೂರ್ವಾಹ್ನ 9-00 ರಿಂದ 11-00 ರವರೆಗೆ
ಅಪರಾಹ್ನ 12-00 ರಿಂದ 2-00 ರವರೆಗೆ
ಅಪರಾಹ್ನ 3-00 ರಿಂದ 5-00 ರವರೆಗೆ.

**v) ಪರೀಕ್ಷಾ ಮಾಧ್ಯಮ :** ಕನ್ನಡ ಮತ್ತು ಇಂಗ್ಲೀಷ್.

**vi) ಪ್ರಶ್ನೆ ಪತ್ರಿಕೆ, ಅಂಕಗಳು ಮತ್ತು ವಿಷಯ :** ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆ ಕೆಳಕಂಡ ವಿಷಯಗಳಲ್ಲಿ ಪ್ರಶ್ನೆ ಪತ್ರಿಕಗಳನ್ನು ಹೊಂದಿರುತ್ತದೆ. ಪ್ರತಿ ಪ್ರಶ್ನೆ ಪತ್ರಿಕೆಯು 100 ಅಂಕಗಳನ್ನು ಒಳಗೊಂಡಿದು, ಭಾಷಾ ವಿಷಯಗಳನ್ನು ಹೊರತುಪಡಿಸಿ ಉಳಿದ ಎಲ್ಲಾ ಪ್ರಶ್ನೆ ಪತ್ರಿಕೆಗಳು ಕನ್ನಡ ಮತ್ತು ಆಂಗ್ಲ ಮಾಧ್ಯಮದಲ್ಲಿ ಇರುತ್ತದೆ. ಎಲ್ಲಾ ಅಭ್ಯರ್ಥಿಗಳು ಸಾಮಾನ್ಯ ಪತ್ರಿಕೆಯು ಸೇರಿದಂತೆ ಅವರು ಆಯ್ಕೆ ಮಾಡಿಕೊಂಡಿರುವ ವಿಷಯಗಳಿಗೆ ಅನುಗುಣವಾಗಿ ಕಡ್ಡಾಯವಾಗಿ ಪರೀಕ್ಷೆಗಳಲ್ಲಿ ಹಾಜರಾಗಿರಬೇಕಾಗಿರುತ್ತದೆ.

| ಕ್ರ. ಸಂ. | ಹುದ್ದೆಯ ಹೆಸರು | ವಿಷಯ | ಅಂಕಗಳು |
|---|---|---|---|
| 1 | ಪ್ರೌಢ ಶಾಲಾ ಸಹಾಯಕ ಶಿಕ್ಷಕ ಗ್ರೇಡ್-2 (ಫಿಸಿಕಲ್ ಸೈನ್ಸ್, ಬಯಾಲಜಿಕಲ್ ಸೈನ್ಸ್, ಕಲಾ ಹಾಗೂ ಎಲ್ಲಾ ಭಾಷಾ ಶಿಕ್ಷಕರ ಹುದ್ದೆಗಳು)/ ದೈಹಿಕ ಶಿಕ್ಷಣ ಶಿಕ್ಷಕ ಗ್ರೇಡ್-1 | **ಸಾಮಾನ್ಯ ಪ್ರಶ್ನೆ ಪತ್ರಿಕೆ**<br>ಸಾಮಾನ್ಯ ಜ್ಞಾನ<br>ಶೈಕ್ಷಣಿಕ ಮನೋವಿಜ್ಞಾನ<br>ಮೆಂಟಲ್ ಎಬಿಲಿಟಿ | 100 |

**ದ್ವಿತೀಯ / ಐಚ್ಛಿಕ ಪತ್ರಿಕೆ :**

| | | | |
|---|---|---|---|
| 2 | ಕಲಾ ಶಿಕ್ಷಕರು | ಇತಿಹಾಸ, ಭೂಗೋಳ ಶಾಸ್ತ್ರ, ಅರ್ಥಶಾಸ್ತ್ರ ಪೌರನೀತಿ | 100 |
| 3 | ಭಾಷಾ ಶಿಕ್ಷಕರ ಹುದ್ದೆಗಳಿಗೆ | ಕನ್ನಡ / ಇಂಗ್ಲೀಷ್ / ಉರ್ದು / ಹಿಂದಿ / ಮರಾಠಿ / ತೆಲುಗು / ತಮಿಳು ಮತ್ತು ಸಂಸ್ಕೃತ | 100 |
| 4 | ಫಿಸಿಕಲ್ ಸೈನ್ಸ್ ( ಭೌತ ವಿಜ್ಞಾನ ) | ಭೌತ ಶಾಸ್ತ್ರ ಮತ್ತು ಗಣಿತ ಶಾಸ್ತ್ರ | 100 |
| 5 | ಬಯಾಲಾಜಿಕಲ್ ಸೈನ್ಸ್ (ಜೀವ ವಿಜ್ಞಾನ ) | ರಸಾಯನ ಶಾಸ್ತ್ರ, ಪ್ರಾಣಿ ಶಾಸ್ತ್ರ, ಸಸ್ಯಶಾಸ್ತ್ರ | 100 |
| 6 | ದೈಹಿಕ ಶಿಕ್ಷಣ ಗ್ರೇಡ್-1 ಶಿಕ್ಷಕರು | ದೈಹಿಕ ಶಿಕ್ಷಣದ ಇತಿಹಾಸ, ತತ್ವಗಳು ಮತ್ತು ತತ್ವಜ್ಞಾನ, ದೈಹಿಕ ಶಿಕ್ಷಣದ ಆಡಳಿತ ಮತ್ತು ಸಂಘಟನೆ, ದೈಹಿಕ ಶಿಕ್ಷಣದ ಮನೋಜ್ಞಾನ ಸಾಮಾಗ್ರಿ ಮತ್ತು ಬೋಧನಾ ವಿಧಾನ, ಅಂಗರಚನಾಶಾಸ್ತ್ರ, ಅಂಗಕಾರ್ಯಶಾಸ್ತ್ರ ಮತ್ತು ಜೀವಶಾಸ್ತ್ರ, ಆರೋಗ್ಯ ಶಿಕ್ಷಣ, ಸುರಕ್ಷಣಾ ಶಿಕ್ಷಣ ಮತ್ತು ಅಂಗೆಲಸ ವ್ಯಾಯಮ, ಕ್ರೀಶಾಧಿಕಾರತ್ವ ಮತ್ತು ಕ್ರೀಡಾ ತರಬೇತಿ ತತ್ವಗಳು | 100 |

**ಪ್ರಶ್ನೆಗಳ ವ್ಯಾಪ್ತಿ ಹಾಗೂ ಸ್ವರೂಪ:** 1) ಪ್ರಶ್ನೆಗಳು ನಿಗದಿಪಡಿಸಲಾಗಿರುವ ಪಠ್ಯವಸ್ತುವಿನ ವ್ಯಾಪ್ತಿಯಲ್ಲಿರುತ್ತದೆ.
2) ಪ್ರಶ್ನೆಗಳು ವಸ್ತುನಿಷ್ಠವಾಗಿದ್ದು ಪ್ರತಿ ಪ್ರಶ್ನೆಗೆ ಒಂದು ಅಂಕ ನಿಗದಿಪಡಿಸಿದೆ.
3) ಪ್ರತಿ ಪ್ರಶ್ನೆ 4 ಉತ್ತರಗಳನ್ನು ಹೊಂದಿದ್ದು ಇವುಗಳಲ್ಲಿ ಒಂದು ಸರಿ ಉತ್ತರವಾಗಿರುತ್ತದೆ.
4) ಉತ್ತರಗಳನ್ನು " ಓ.ಎಂ.ಆರ್." ಶೀಟಿನಲ್ಲಿ ಗುರ್ತಿಸುವುದು.

ಪ್ರಶ್ನೆ ಪತ್ರಿಕೆಗಳು ಕನ್ನಡ ಮತ್ತು ಆಂಗ್ಲ ಭಾಷೆಯಲ್ಲಿರುತ್ತದೆ. ಭಾಷಾ ವಿಷಯಕ್ಕೆ ಸಂಬಂಧಿಸಿದಂತೆ ಆಯಾ ಭಾಷೆಯಲ್ಲಿರುತ್ತದೆ.

**13) ಆಯ್ಕೆ ವಿಧಾನ:**

ಅಭ್ಯರ್ಥಿಗಳನ್ನು **"ದಿ ಕರ್ನಾಟಕ ಎಜುಕೇಷನ್ ಡಿಪಾರ್ಟ್‌ಮೆಂಟ್ ಸರ್ವೀಸಸ್ (ಡಿಪಾರ್ಟ್‌ಮೆಂಟ್ ಆಫ್ ಪಬ್ಲಿಕ್ ಇನ್‌ಸ್ಟ್ರಕ್ಷನ್) (ರಿಕ್ರೂಟ್‌ಮೆಂಟ್) (ಅಮೆಂಡ್‌ಮೆಂಟ್) ರೂಲ್ಸ್ 2002"** ನಿಯಮಗಳ ಅನ್ವಯ ಮೆರಿಟ್ ಮತ್ತು ಕರ್ನಾಟಕ ಸರ್ಕಾರದ ಪ್ರಚಲಿತ ಮೀಸಲಾತಿ ನಿಯಮಗಳ ಆಧಾರದ ಮೇಲೆ ಆಯ್ಕೆ ಮಾಡಲಾಗುವುದು.

**ಅರ್ಹತೆ ನಿರ್ಧರಿಸುವುದು:–**

**ಅ) ಪ್ರೌಢ ಶಾಲಾ ಸಹ ಶಿಕ್ಷಕ ಗ್ರೇಡ್–2 ವೃಂದದ (ಕಲಾ, ಭೌತ ವಿಜ್ಞಾನ, ಜೀವ ವಿಜ್ಞಾನ ಮತ್ತು ಭಾಷೆಗಳು) ಶಿಕ್ಷಕರ ವಿವಿಧ ಮಾಧ್ಯಮದ ಹುದ್ದೆಗಳಿಗೆ:–**

ಅಭ್ಯರ್ಥಿಯು ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಪಡೆದ ಒಟ್ಟು ಅಂಕಗಳ ಶೇಕಡ 70%, ಮತ್ತು ಬಿ.ಎ/ಬಿ.ಎಸ್ಸಿ. ಪದವಿ ಪರೀಕ್ಷೆಯ ಒಟ್ಟು ಅಂಕಗಳ ಶೇಕಡ 20%, ಹಾಗೂ ಬಿ.ಎಡ್. ಪದವಿ ಪರೀಕ್ಷೆಯಲ್ಲಿ ಪಡೆದಿರುವ ಒಟ್ಟು ಅಂಕಗಳ ಶೇಕಡ 10%, ಈ ಮೂರು ಒಟ್ಟು ಅಂಕಗಳ ಮೇಲೆ ಮೆರಿಟ್ ಪಟ್ಟಿ ತಯಾರಿಸಿ, ಪ್ರಚಲಿತ ಮೀಸಲಾತಿ ನಿಯಮಗಳ ಅನ್ವಯ ಆಯ್ಕೆ ಮಾಡಲಾಗುವುದು.

ಮೇಲ್ಕಂಡ ಮೆರಿಟ್ ಲಿಸ್ಟ್ ತಯಾರಿಸುವಾಗ ಅಭ್ಯರ್ಥಿಯು ಸರ್ಕಾರಿ ಪ್ರೌಢ ಶಾಲೆಗಳಲ್ಲಿ ಸಂಬಂಧಿಸಿದ ವಿಷಯದಲ್ಲಿ **"ಅರೆಕಾಲಿಕ ಅಥವಾ ಗೌರವ"** ಶಿಕ್ಷಕರಾಗಿ, ಅಥವಾ ಭಾರತೀಯ ಜನಗಣತಿ ಸಂಸ್ಥೆಯಲ್ಲಿ ಗುತ್ತಿಗೆ ಆಧಾರದ ಮೇಲೆ ಸಕ್ಷಮ ಪ್ರಾಧಿಕಾರದಿಂದ ನೇಮಕಗೊಂಡು ಹಾಲಿ ಸೇವೆ ಸಲ್ಲಿಸುತ್ತಿದ್ದಲ್ಲಿ / ಸೇವೆ ಸಲ್ಲಿಸಿದ್ದಲ್ಲಿ ಹಾಗೆ ಸೇವೆ ಸಲ್ಲಿಸಿದ ಪೂರ್ಣಗೊಂಡ ಪ್ರತಿ ಒಂದು ವರ್ಷದ ಸೇವೆಗೆ ಶೇಕಡ 2% ರಷ್ಟು ಕೃಪಾಂಕಗಳನ್ನು ನೇಮಕಾತಿ ನಿಯಮಗಳ ಪ್ರಕಾರ ಅರ್ಹತೆ ಇದ್ದಲ್ಲಿ ಮಾತ್ರ ಮೇಲಿನ ಕಂಡಿಕೆಯಲ್ಲಿ ವಿವರಿಸಿರುವ ಒಟ್ಟು ಅಂಕಗಳಿಗೆ ಸೇರಿಸಲಾಗುವುದು.

**ವಿವರಣೆ:–** ಅ) ಮೊದಲಿಗೆ, ಬಿ.ಎ/ಬಿ.ಎಸ್ಸಿ. ಪದವಿ ಪರೀಕ್ಷೆಯ ಎಲ್ಲಾ ವರ್ಷಗಳಲ್ಲಿ, ಎಲ್ಲಾ ವಿಷಯಗಳಲ್ಲಿ ಪಡೆದಿರುವ ಒಟ್ಟು ಅಂಕಗಳನ್ನು ಶೇಕಡ 20%ಕ್ಕೆ ಲೆಕ್ಕ ಹಾಕಲಾಗುವುದು.

ಆ) ಬಿ.ಎಡ್. ಪದವಿ ಪರೀಕ್ಷೆಯಲ್ಲಿ ಪಡೆದ ಒಟ್ಟು ಅಂಕಗಳನ್ನು ಶೇಕಡ 10%ಕ್ಕೆ ಲೆಕ್ಕ ಹಾಕಲಾಗುವುದು.

ಇ) ನಂತರ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಪಡೆದ ಒಟ್ಟು ಅಂಕಗಳನ್ನು ಶೇಕಡ 70%ಕ್ಕೆ ಲೆಕ್ಕ ಹಾಕಲಾಗುವುದು.

ಈ) ಬಿ.ಎ/ಬಿ.ಎಸ್ಸಿ/ಬ್ಯಾಚುಲರ್ ಪದವಿ/ತತ್ಸಮಾನ ಪರೀಕ್ಷೆಯ ಶೇಕಡ 20%, ಬಿ.ಎಡ್ ಪದವಿಯ/ಬಿ.ಪಿ.ಎಡ್/ ತತ್ಸಮಾನ ಪರೀಕ್ಷೆಯ ಶೇಕಡ 10%, ಮತ್ತು ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯ ಶೇಕಡ 70% ಅಂಕಗಳನ್ನು ಸೇರಿಸಿ ಒಟ್ಟು ಶೇಕಡ 100 ಅಂಕಕ್ಕೆ ಪಡೆದ ಅಂಕಗಳನ್ನು ಕಂಡುಕೊಳ್ಳಲಾಗುವುದು. ಮತ್ತು ಮೇರಿಟಿಗೆ ಪರಿಗಣಿಸಲಾಗುವುದು.

ಉ) ಮೇಲಿನ ಒಟ್ಟು ಶೇಕಡ ಅಂಕಗಳಿಗೆ (ಪ್ಯಾರ **"ಈ"**), ಅರೆಕಾಲಿಕ ಅಥವಾ ಗೌರವ ಶಿಕ್ಷಕ/ಭಾರತೀಯ ಜನಗಣತಿಯಲ್ಲಿ ಗುತ್ತಿಗೆ ಆಧಾರದ ಮೇಲೆ ಕಾರ್ಯನಿರ್ವಹಿಸಿದಂತಹ ಅಭ್ಯರ್ಥಿಗಳಿಗೆ ಪ್ರಸ್ತುತ ನೇಮಕಾತಿ ನಿಯಮಗಳ ಪ್ರಕಾರ ಅರ್ಹತೆ ಇದ್ದಲ್ಲಿ ಮಾತ್ರ ಪ್ರತಿ ಪೂರ್ಣಗೊಂಡ ಒಂದು ವರ್ಷದ ಸೇವೆಗೆ ಶೇಕಡ 2% ರಂತೆ ಕೃಪಾಂಕಗಳನ್ನು ಸೇರಿಸಲಾಗುವುದು.

(ಈ+ಉ) ಒಟ್ಟು ಅಂಕಗಳನ್ನು ಪ್ರತಿ ಅಭ್ಯರ್ಥಿಯ ಮೆರಿಟ್ (ಅರ್ಹತಾ) ಅಂಕಗಳೆಂದು ನಿರ್ಧರಿಸಲಾಗುವುದು.

**ಉದಾಹರಣೆ:–**

"X" ಎಂಬ ಅಭ್ಯರ್ಥಿಯು ಅರ್ಹತಾ ಪದವಿ (ಬಿ.ಎ/ಬಿ.ಎಸ್ಸಿ ಮತ್ತು ಬಿ.ಎಡ್/ಬಿ.ಪಿ.ಎಡ್ ಪರೀಕ್ಷೆಗಳಲ್ಲಿ ಹಾಗೂ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ಪಡೆದಿರುವ ಅಂಕಗಳು ಹಾಗೂ ಅರೆಕಾಲಿಕ, ಗೌರವ ಶಿಕ್ಷಕರಾಗಿ, ಜನಗಣತಿ ಸಂಸ್ಥೆಯಲ್ಲಿ ಸೇವೆ ಸಲ್ಲಿಸಿದ್ದ ಬಾಬ್ತು ಪಡೆದು ಕೊಂಡಿರುವ ಕೃಪಾಂಕಗಳ ವಿವರಗಳು ಈ ರೀತಿ ಇದೆ.

| ಕ್ರ. ಸಂ. | ಪರೀಕ್ಷೆಯ ಹೆಸರು | ಗರಿಷ್ಠ ಅಂಕಗಳು | ಗಳಿಸಿದ ಅಂಕ |
|---|---|---|---|
| 1 | ಬಿ.ಎಸ್ಸಿ. ಪದವಿ | | |
| | ಅ) ಪ್ರಥಮ ವರ್ಷ | 500 | 300 |
| | ಆ) ದ್ವಿತೀಯ ವರ್ಷ | 500 | 360 |
| | ಇ) ತೃತೀಯ ವರ್ಷ | 900 | 540 |
| | **ಒಟ್ಟು** | **1900** | **1200** |
| 2 | ಬಿ.ಎಡ್. ಪದವಿ | 1000 | 600 |
| 3 | ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಗಳಿಸಿದ ಅಂಕಗಳು | 200 | 140 |
| 4 | "X"ಅಭ್ಯರ್ಥಿಯು ಮೂರು ವರ್ಷಗಳ ಕಾಲ ಅರೆಕಾಲಿಕ ಶಿಕ್ಷಕರಾಗಿ ಸರ್ಕಾರಿ ಪ್ರೌಢ ಶಾಲೆಯಲ್ಲಿ ಸೇವೆ ಸಲ್ಲಿಸಿರುತ್ತಾರೆ | 3 X 2 | = ಶೇಕಡಾ 6 ಕೃಪಾಂಕಗಳು |

| | |
|---|---|
| ಅ) ಬಿ.ಎಸ್ಸಿ.ಪದವಿಯಲ್ಲಿ X ಅಭ್ಯರ್ಥಿ ಪಡೆದ ಶೇಕಡ 20 ಅಂಕಗಳು | = ಗಳಿಸಿದ ಒಟ್ಟು ಅಂಕಗಳು X 20 / ಒಟ್ಟು ಗರಿಷ್ಠ ಅಂಕಗಳು<br>= 1200 X 20 / 1900<br>= 12.63157 |
| ಆ) ಬಿ.ಎಡ್. ಪದವಿ ಪರೀಕ್ಷೆಯಲ್ಲಿ ಶೇಕಡ 10 ಅಂಕಗಳು | = ಗಳಿಸಿದ ಒಟ್ಟು ಅಂಕಗಳು X 10 / ಒಟ್ಟು ಗರಿಷ್ಠ ಅಂಕಗಳು |

= 600 X 10 / 1000

= 6.00000

ಇ) ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಶೇಕಡ 70 ಅಂಕಗಳು = ಗಳಿಸಿದ ಒಟ್ಟು ಅಂಕಗಳು X 70 / ಒಟ್ಟು ಗರಿಷ್ಠ ಅಂಕಗಳು

= 140 X 70 / 200

= 9800 / 200

= 49.00000

ಈ) X ಅಭ್ಯರ್ಥಿಯು ಬಿ.ಎಸ್ಸಿ., ಬಿ.ಎಡ್. ಹಾಗೂ ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ಪಡೆದ ಒಟ್ಟು ಅಂಕಗಳು (ಅ+ಆ+ಇ)

: ಬಿ.ಎಸ್ಸಿ. : 12.63157
: ಬಿ.ಎಡ್ : 06.0000
ಸಂ.ಸ್ಪ.ಪ. : 49.0000
ಒಟ್ಟು : 67.63157

ಉ) X ಅಭ್ಯರ್ಥಿಯು ಸಲ್ಲಿಸಿರುವ ಮೂರು ವರ್ಷ ಅರೆಕಾಲಿಕ ಶಿಕ್ಷಕರ ಸೇವೆಗೆ ಪ್ರತಿ ಪೂರ್ಣಗೊಳಿಸಿದ ವರ್ಷಕ್ಕೆ ಶೇಕಡ 2ರಂತೆ ಕೃಪಾಂಕಗಳು = 3 X 2 = ಶೇಕಡಾ 6 ಕೃಪಾಂಕಗಳು

ಊ) X ಎಂಬ ಅಭ್ಯರ್ಥಿಯ ಅಂತಿಮ ಮೆರಿಟ್ ಅಂಕಗಳು (ಈ+ಉ) = 67.63157
+
ಕೃಪಾಂಕಗಳು = 06.0000
ಒಟ್ಟು (ಮೆರಿಟ್) = 73.63157

**14) ಮೀಸಲಾತಿ ಅವಕಾಶಗಳು:–**

ಅ) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 08 ಸಹಿಮ 95 ದಿನಾಂಕ 20–06–1995 ಮತ್ತು ನಂತರ ಹಾಲಿ ಜಾರಿಯಲ್ಲಿರುವ ಮೀಸಲಾತಿ ನಿಯಮಗಳ ಪ್ರಕಾರ ಲಭ್ಯವಿರುವ ರಿಕ್ತ ಸ್ಥಾನಗಳನ್ನು ಈ ಕೆಳಕಂಡ ಪ್ರಮಾಣದಲ್ಲಿ ನಿಯಮಾನುಸಾರ ಮೀಸಲಿರಿಸಲಾಗಿದೆ.

| ಸಾಮಾನ್ಯ ಅರ್ಹತೆ | ಶೇ. 50 |
|---|---|
| ಪರಿಶಿಷ್ಟ ಪಂಗಡ | ಶೇ. 03 |
| ಪರಿಶಿಷ್ಟ ಜಾತಿ | ಶೇ. 15 |
| ಪ್ರವರ್ಗ–1 | ಶೇ. 04 |
| ಪ್ರವರ್ಗ–2ಎ | ಶೇ. 15 |
| ಪ್ರವರ್ಗ–2ಬಿ | ಶೇ. 04 |
| ಪ್ರವರ್ಗ–3ಎ | ಶೇ. 04 |
| ಪ್ರವರ್ಗ–3ಬಿ | ಶೇ. 05 |
| ಒಟ್ಟು | 100 |

ಪ್ರವರ್ಗ–1, 2ಎ, 2ಬಿ, 3ಎ, ಹಾಗೂ 3ಬಿ ಈ ಪ್ರವರ್ಗಗಳಿಗೆ ಮೀಸಲಿರಿಸಿದ ರಿಕ್ತ ಸ್ಥಾನಗಳಿಗೆ ಅದೇ ವರ್ಗಕ್ಕೆ ಸೇರಿದ ಅಭ್ಯರ್ಥಿಗಳು ದೊರೆಯದಿದ್ದಲ್ಲಿ ಈ ಸ್ಥಾನಗಳನ್ನು ಸಾಮಾನ್ಯ ಅಭ್ಯರ್ಥಿಗಳಿಂದ ತುಂಬಲಾಗುವುದು. ಆದರೆ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡದ ಅಭ್ಯರ್ಥಿಗಳು ದೊರೆಯದಿದ್ದಲ್ಲಿ ಅಂತಹ ರಿಕ್ತ ಸ್ಥಾನಗಳನ್ನು ಭರ್ತಿ ಮಾಡದೆ ಬ್ಯಾಕಲಾಗ್ ಹುದ್ದೆಗಳೆಂದು ಪರಿಗಣಿಸಲಾಗುವುದು.

ಆ) ಮೇಲೆ ವಿವರಿಸಿದ ಸಾಮಾನ್ಯ ಅರ್ಹತೆ ಸೇರಿದಂತೆ ಪ್ರತಿ ಮೀಸಲಾತಿ ಪ್ರವರ್ಗಗಳಿಗೆ ಈ ಕೆಳಕಂಡ ಆದೇಶಗಳ ಪ್ರಕಾರ **"ಸಮತಳ ಮೀಸಲಾತಿ"** (Horizontal reservation) ಅನ್ವಯ ಹುದ್ದೆಗಳನ್ನು ವರ್ಗೀಕರಿಸಲಾಗಿದೆ.

| 1 | ಮಾಜಿ ಸೈನಿಕರಿಗೆ ಶೇಕಡ 10 | ಕರ್ನಾಟಕ ಸಿವಿಲ್ ಸರ್ವೀಸಸ್ (ಜನರಲ್ ರೆಕ್ರೂಟ್‌ಮೆಂಟ್) ರೂಲ್ಸ್ 1977ರ ನಿಯಮ 9(1)ರ ಅನ್ವಯ ಹಾಗೂ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 97 ಸೇನೆನಿ 2002 ದಿನಾಂಕ 22–11–2002.ಮತ್ತು ಸರ್ಕಾರದ ಆದೇಶ ಸಂಖ್ಯೆ ಸಿಆಸುಇ53/ಸೇನೆನಿ/2007 ದಿನಾಂಕ:–04–01–2008 |
|---|---|---|

| | | | |
|---|---|---|---|
| 2 | ಅಂಗವಿಕಲರಿಗೆ | ಶೇಕಡ 5 | ಕರ್ನಾಟಕ ಸಿವಿಲ್ ಸರ್ವೀಸಸ್ (ಜನರಲ್ ರೆಕ್ರೂಟ್‌ಮೆಂಟ್) ರೂಲ್ಸ್ 1977 ನಿಯಮ 9(1)(ಎ)ರ ಅನ್ವಯ ಹಾಗೂ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 97 ಸೇನೆನಿ 2002 ದಿನಾಂಕ 22-11-2002. ಮತ್ತು ಸರ್ಕಾರದ ಆದೇಶ ಸಂಖ್ಯೆ ಸಿಆಸುಇ53/ಸೇನೆನಿ/2007 ದಿನಾಂಕ:-04-01-2008 |
| 3 | ಮಹಿಳಾ ಅಭ್ಯರ್ಥಿಗಳಿಗೆ | ಶೇಕಡ 30 | ಕರ್ನಾಟಕ ಸಿವಿಲ್ ಸರ್ವೀಸಸ್ (ಜನರಲ್ ರೆಕ್ರೂಟ್‌ಮೆಂಟ್) ರೂಲ್ಸ್ 1977ರ ನಿಯಮ 9(1)(ಬಿ) ಮತ್ತು ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 97 ಸೇನೆನಿ 2002 ದಿನಾಂಕ 22-11-2002. ಹಾಗೂ ಸರ್ಕಾರದ ಸುತ್ತೋಲೆ ಸಂಖ್ಯೆ ಸಿಅಸುಇ 16/ಸೇನೇನಿ 2008 ದಿನಾಂಕ 01-09-2008 ಮತ್ತು ಸರ್ಕಾರದ ಆದೇಶ ಸಂಖ್ಯೆ ಸಿಆಸುಇ53/ಸೇನೆನಿ/2007ದಿನಾಂಕ:-04-01-2008 |
| 4 | ಯೋಜನೆಗಳಿಂದ ನಿರಾಶ್ರಿತರಾದವರ ಕುಟುಂಬದವರ ಅಭ್ಯರ್ಥಿಗಳಿಗಾಗಿ | ಶೇಕಡ 5 | ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 23 ಎಸ್‌ಆರ್‌ಆರ್ 99 ದಿನಾಂಕ 23-11-2000 ಮತ್ತು ಸರ್ಕಾರದ ಆದೇಶದ ಸಂಖ್ಯೆ: ಸಿಆಸುಇ 97 ಸೇನೆನಿ 2002 ದಿನಾಂಕ 22-11-2002 ಮತ್ತು ಸರ್ಕಾರದ ಆದೇಶ ಸಂಖ್ಯೆ ಸಿಆಸುಇ53/ಸೇನೆನಿ/2007 ದಿನಾಂಕ:-04-01-2008 |
| 5 | ಗ್ರಾಮೀಣ ಅಭ್ಯರ್ಥಿಗಳಿಗೆ | ಶೇಕಡ 25 | 2000ದ ಕರ್ನಾಟಕ ಗ್ರಾಮೀಣ ಅಭ್ಯರ್ಥಿಗಳಿಗಾಗಿ (ರಾಜ್ಯ ಸಿವಿಲ್ ಸೇವೆಗಳಲ್ಲಿ ನೇಮಕಾತಿ ಅಥವಾ ಹುದ್ದೆಗಳ ಮೀಸಲಾತಿ ವಿಧೇಯಕ) ಹಾಗೂ ಸರಕಾರದ ಆದೇಶ ಸಂಖ್ಯೆ: ಸಿಆಸುಇ 97 ಸೇನೆನಿ 2002 ದಿನಾಂಕ 22-11-2002 ಮತ್ತು ಸರ್ಕಾರದ ಆದೇಶ ಸಂಖ್ಯೆ ಸಿಆಸುಇ53/ಸೇನೆನಿ/2007 ದಿನಾಂಕ:-04-01-2008 |
| 6 | ಕನ್ನಡ ಮಾಧ್ಯಮದ ಅಭ್ಯರ್ಥಿಗಳಿಗಾಗಿ | ಶೇಕಡ 5 | ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 71 ಎಸ್‌ಆರ್‌ಆರ್ 2001 ದಿನಾಂಕ 24-10-2002 ಮತ್ತು ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 97 ಸೇನೆನಿ 2002 ದಿನಾಂಕ 22-11-2002 ಮತ್ತು ಸರ್ಕಾರದ ಆದೇಶ ಸಂಖ್ಯೆ ಸಿಆಸುಇ53/ಸೇನೆನಿ/2007 ದಿನಾಂಕ:-04-01-2008 |

**15) ವಿವರಣೆ:**

i) "ಮಾಜಿ ಸೈನಿಕ"ರಿಗಾಗಿ ಮೀಸಲಿಟ್ಟ ಖಾಲಿ ಹುದ್ದೆಗಳನ್ನು ಮಿಲಿಟರಿ ಸೇವೆಯಿಂದ ಬಿಡುಗಡೆ ಹೊಂದಿದ ವ್ಯಕ್ತಿಗಳಿಂದ ಮತ್ತು ಭಾರತ ದೇಶದ ಒಕ್ಕೂಟದ ಸಶಸ್ತ್ರ ದಳದಲ್ಲಿ ಸೇವೆ ಸಲ್ಲಿಸುವಾಗ ಕೊಲ್ಲಲ್ಪಟ್ಟ ಅಥವಾ ಶಾಶ್ವತವಾಗಿ ಅಂಗಹೀನರಾದ ವ್ಯಕ್ತಿಗಳ ಕುಟುಂಬದ ಸದಸ್ಯರಿಂದ ನೇಮಕಾತಿ ಮೂಲಕ ತುಂಬಲಾಗುತ್ತದೆ.

ii) "ಮಾಜಿ ಸೈನಿಕ" "ಸಶಸ್ತ್ರ ದಳದ ಸದಸ್ಯ" ಮತ್ತು "ಕುಟುಂಬದ ಸದಸ್ಯ" ಎಂಬ ಪದಗಳ ಅರ್ಥವು ಕಾಲದಿಂದ ಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ರಾಜ್ಯ ಸರ್ಕಾರಿ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977 ರಲ್ಲಿ ವಿವರಿಸಿರುವಂತೆ ಇರುತ್ತದೆ.

iii) ಕರ್ನಾಟಕ ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ: ಎಂಎಂಡಬ್ಲ್ಯೂ. 107. ಪಿಹೆಚ್‌ಪಿ 2003 ದಿನಾಂಕ: 11-07-2003 ಮತ್ತು ಡಿಪಿಎಆರ್ 50 ಎಸ್‌ಆರ್‌ಆರ್ 2000 ದಿನಾಂಕ: 03-09-2005ರ ಅನ್ವಯ ತಾನು "ಅಂಗವಿಕಲರ ಗುಂಪಿಗೆ ಸೇರಿದವರೆಂದು ಹೇಳಿಕೊಳ್ಳುವ ಅಭ್ಯರ್ಥಿಯು" ವೈದ್ಯಕೀಯ ಪ್ರಮಾಣ ಪತ್ರವನ್ನು ಹೊಂದಿರಬೇಕು.

iv) ನೇರ ನೇಮಕಾತಿಯಲ್ಲಿ ಲಭ್ಯವಿರುವ ಸ್ಥಾನಗಳನ್ನು ದಿನಾಂಕ 20-06-1995ರಂದು ಹೊರಡಿಸಿರುವ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 8 ಸೆಹಿಮ 95ರ ಅನ್ವಯ ಸಾಮಾನ್ಯ ಅರ್ಹತೆ, ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಹಿಂದುಳಿದ ಪ್ರವರ್ಗ 1, 2ಎ, 2ಬಿ, 3ಎ, 3ಬಿ ವರ್ಗಗಳಿಗೆ ವಿಂಗಡಿಸಿ ಮೀಸಲಿರಿಸಲಾಗುವುದು. ಹಾಗೂ ಆಯಾ ವರ್ಗಕ್ಕೆ ಲಭ್ಯವಾಗುವ ರಿಕ್ತ ಸ್ಥಾನಗಳಲ್ಲಿ ಶೇ. 30 ರಷ್ಟು ಹುದ್ದೆಗಳನ್ನು ಮಹಿಳಾ ಅಭ್ಯರ್ಥಿಗಳಿಗೆ, ಶೇಕಡಾ 10 ರಷ್ಟು ಹುದ್ದೆಗಳನ್ನು ಮಾಜಿ ಸೈನಿಕ ಅಭ್ಯರ್ಥಿಗಳಿಗೆ, ಶೇಕಡ 5 ರಷ್ಟು ರಿಕ್ತ ಸ್ಥಾನಗಳನ್ನು ಅಂಗವಿಕಲ ಅಭ್ಯರ್ಥಿಗಳಿಗೆ, ಶೇ. 5 ರಷ್ಟು ರಿಕ್ತ ಸ್ಥಾನಗಳನ್ನು ಯೋಜನೆಗಳಿಂದ ನಿರಾಶ್ರಿತರಾದವರ ಕುಟುಂಬದ ಅಭ್ಯರ್ಥಿಗಳಿಗೆ, ಶೇ. 25 ರಷ್ಟು ಸ್ಥಾನಗಳನ್ನು ಗ್ರಾಮೀಣ ಅಭ್ಯರ್ಥಿಗಳಿಗೆ, ಮತ್ತು ಶೇ 5 ರಷ್ಟು ರಿಕ್ತ ಸ್ಥಾನಗಳನ್ನು ಕನ್ನಡ ಮಾಧ್ಯಮ ವ್ಯಾಸಂಗ ಮಾಡಿದ ಅಭ್ಯರ್ಥಿಗಳಿಂದ, ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 97 ಸೇನೇನಿ. 2002 ದಿನಾಂಕ: 22-11-2002ರಲ್ಲಿ ವಿವರಿಸಿರುವಂತೆ ಭರ್ತಿ ಮಾಡಲು ಮೀಸಲಿರಿಸಲಾಗುವುದು.

**ಅಂತಿಮ ಆಯ್ಕೆಪಟ್ಟಿ ತಯಾರಿಸುವಾಗ :**

ಮಹಿಳೆಯರಿಗೆ ಮೀಸಲಿರಿಸಿದ ರಿಕ್ತ ಸ್ಥಾನಗಳಿಗೆ ಅರ್ಹ ಮಹಿಳಾ ಅಭ್ಯರ್ಥಿಗಳು ಲಭ್ಯವಾಗದಿದ್ದಲ್ಲಿ ಅಂತಹ ರಿಕ್ತ ಸ್ಥಾನಗಳನ್ನು ಆಯಾ ವರ್ಗಕ್ಕೆ ಸೇರಿದ ಪುರುಷ ಅಭ್ಯರ್ಥಿಗಳಿಂದ ಭರ್ತಿ ಮಾಡಲಾಗುವುದು.

ಮಾಜಿ ಸೈನಿಕರಿಗಾಗಿ ಮೀಸಲಿರಿಸಿದ ರಿಕ್ತ ಸ್ಥಾನಗಳಿಗೆ ಅರ್ಹ ಮಾಜಿ ಸೈನಿಕ ಅಭ್ಯರ್ಥಿಗಳು ಲಭ್ಯವಾಗದಿದ್ದಲ್ಲಿ ಅಂತಹ ರಿಕ್ತ ಸ್ಥಾನಗಳನ್ನು ಅಯಾ ವರ್ಗಕ್ಕೆ ಸೇರಿದ ಇತರೆ ಅರ್ಹ ಅಭ್ಯರ್ಥಿಗಳಿಂದ ಭರ್ತಿ ಮಾಡಲಾಗುವುದು.

ಇದೇ ರೀತಿ ಯೋಜನಾ ನಿರಾಶ್ರಿತ / ಗ್ರಾಮೀಣ ಅರ್ಹ ಅಭ್ಯರ್ಥಿಗಳು ದೊರಯದಿದ್ದಲ್ಲಿ ಅಂತಹ ರಿಕ್ತ ಸ್ಥಾನಗಳನ್ನು ಆಯಾ ಪ್ರವರ್ಗಕ್ಕೆ ಸೇರಿದ ಇತರೆ ಅರ್ಹ ಅಭ್ಯರ್ಥಿಗಳಿಂದ ಭರ್ತಿ ಮಾಡಲಾಗುವುದು.

ಅರ್ಹ ಅಂಗವಿಕಲ ಅಭ್ಯರ್ಥಿಗಳು ದೊರೆಯದಿದ್ದಲ್ಲಿ ಅಂತಹ ರಿಕ್ತ ಸ್ಥಾನಗಳನ್ನು ಭರ್ತಿ ಮಾಡದೆ ಬ್ಯಾಕ್‌ಲಾಗ್ ಹುದ್ದೆಗಳೆಂದು ಪರಿಗಣಿಸಲಾಗುವುದು.

**16) ಹುದ್ದೆಗಳ ವರ್ಗೀಕರಣ:–**

ಸರಕಾರದ ಆದೇಶ ಸಂಖ್ಯೆ: ಸಿಆಸುಇ 08 ಸಹಿಮ 95 ದಿನಾಂಕ 20–06–1995 ಮತ್ತು ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 97 ಸೇನೆನಿ 2002 ದಿನಾಂಕ 22–11–2002 ಹಾಗೂ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 53/ಸೇನಿನಿ/2007, ದಿ. 4.1.2008ರು ಪ್ರಕಾರ ಜಿಲ್ಲಾ ಮಟ್ಟದಲ್ಲಿ ವಿಷಯವಾರು ಮತ್ತು ಮಾಧ್ಯಮವಾರು ಹುದ್ದೆಗಳನ್ನು ಈ ಮುಂದಿನ ಅನುಬಂಧ ದಂತೆ ವರ್ಗೀಕರಿಸಿದೆ.

ಮುಂದುವರಿದು ಆಯ್ಕೆ ಪಟ್ಟಿಯನ್ನು ತಯಾರಿಸುವಾಗ ಸಮತಳ ಮೀಸಲಾತಿಗೆ ಸಂಬಂದಿಸಿದಂತೆ ಗೌರವಾನ್ವಿತ ಸರ್ವೋಚ್ಚ ನ್ಯಾಯಾಲಯವು ವಿವರಿಸಿರುವ ಕಾರ್ಯವಿಧಾನವನ್ನು ಸರ್ಕಾರದ ಸುತ್ತೋಲೆ ಸಂಖ್ಯೆ ಸಿಅಸುಇ16/ಸೇನೆನಿ/2008 ದಿನಾಂಕ:–01–09–2008ರಲ್ಲಿ ಆದೇಶಿಸಿರುವಂತೆ ಅಳವಡಿಸಿಕೊಳ್ಳಲಾಗುವುದು

ಟಿಪ್ಪಣಿ : **ಪ್ರೌಢ ಶಾಲಾ ಸಹ ಶಿಕ್ಷಕ ಗ್ರೇಡ್–2 ವೃಂದದ ವಿವಿಧ ವಿಷಯ ಮತ್ತು ಬೋಧನಾ ಮಾಧ್ಯಮದ ಮತ್ತು ದೈಹಿಕ ಶಿಕ್ಷಣ ಶಿಕ್ಷಕ (ಗ್ರೇಡ್–1) ವೃಂದದ ಖಾಲಿ ಹುದ್ದೆಗಳ ಸಂಖ್ಯೆ ಹಾಗೂ ಮೀಸಲಾತಿ ವರ್ಗೀಕರಣದ ವಿವರಗಳನ್ನು ಈ ಅಧಿಸೂಚನೆಗೆ ಲಗತ್ತಿಸಿರುವ "ಹುದ್ದೆಗಳ ವರ್ಗೀಕರಣದ ಅನುಬಂಧದಲ್ಲಿ" ಪ್ರತ್ಯೇಕವಾಗಿ ವಿವರಿಸಿದೆ.**

ಸೂಚನೆ : **ಪ್ರಕಟಿಸಿರುವ ಹುದ್ದೆಗಳ ಸಂಖ್ಯೆ ಮತ್ತು ವರ್ಗೀಕರಣವು ಅನಿವಾರ್ಯ ಸಂದರ್ಭಗಳಲ್ಲಿ ಬದಲಾವಣೆಗೆ ಒಳಪಟ್ಟಿರುತ್ತದೆ.**

(1) ಮೀಸಲಾತಿ ಸೌಲಭ್ಯ ಪಡೆಯಲು ಅಭ್ಯರ್ಥಿಗಳು ಸಲ್ಲಿಸಬೇಕಾದ ಪ್ರಮಾಣ ಪತ್ರಗಳು:

ಅ) ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ ಮತ್ತು ಹಿಂದುಳಿದ ಪ್ರವರ್ಗ–1 ಕ್ಕೆ ಸೇರಿದ ಅಭ್ಯರ್ಥಿಗಳು ಸರ್ಕಾರದ ಅಧಿಸೂಚನೆ ಸಂಖ್ಯೆ: ಎಸ್‌ಡಬ್ಲೂಡಿ 132 ಎಸ್ಎಡಿ 97 ದಿನಾಂಕ 08–02–2000 ಮತ್ತು ಹಿಂದುಳಿದ ಪ್ರವರ್ಗಗಳಾದ ಪ್ರವರ್ಗ–2ಎ, 2ಬಿ, 3ಎ, ಮತ್ತು 3ಬಿ ಗೆ ಸೇರಿದ ಅಭ್ಯರ್ಥಿಗಳು ಸರ್ಕಾರದ ಆದೇಶ ಸಂಖ್ಯೆ: ಎಸ್‌ಡಬ್ಲೂಡಿ 126 ಬಿಡಿಎ ದಿನಾಂಕ 13–02–2003 ರಂದು ಹೊರಡಿಸಿದ **"ಕರ್ನಾಟಕ ಅನುಸೂಚಿತ ಜಾತಿಗಳು, ಅನುಸೂಚಿತ ಬುಡಕಟ್ಟುಗಳು, ಮತ್ತು ಇತರೆ ಹಿಂದುಳಿದ ವರ್ಗಗಳ (ನೇಮಕಾತಿ ಮುಂತಾದ ಮೀಸಲಾತಿ) (ತಿದ್ದುಪಡಿ) ನಿಯಮಗಳು 2000"** ರನ್ವಯ ನಿಗದಿಪಡಿಸಿರುವ ಅಭ್ಯರ್ಥಿಗಳಿಗೆ ಅನ್ವಯಿಸುವ ಕೆಳಕಂಡ ನಮೂನೆಗಳಲ್ಲಿಯೇ ಸಂಬಂಧಿಸಿದ ವ್ಯಾಪ್ತಿಯ ತಹಸೀಲ್ದಾರರ ದರ್ಜೆಗಿಂತ ಕಡಿಮೆ ಇಲ್ಲದ ರೆವಿನ್ಯೂ ಪ್ರಾಧಿಕಾರಿಯಿಂದ ಪ್ರಮಾಣ ಪತ್ರವನ್ನು ಪಡೆದಿರಬೇಕು.

| | | |
|---|---|---|
| 1 | ಅನುಸೂಚಿತ ಜಾತಿ ಅಥವಾ ಅನುಸೂಚಿತ ಪಂಗಡಕ್ಕೆ ಸೇರಿದ ಅಭ್ಯರ್ಥಿಗಳು | **ನಮೂನೆ – ಡಿ** (ನಿಯಮ 3ಎ(2)(3), ಸರಕಾರದ ಆದೇಶ ಸಂಖ್ಯೆ: ಎಸ್‌ಡಬ್ಲೂಡಿ 132 ಎಸ್ಎಡಿ 97 ದಿನಾಂಕ 08–02–2000 |
| 2 | ಹಿಂದುಳಿದ ಪ್ರವರ್ಗ–1 ಕ್ಕೆ ಸೇರಿದ ಅಭ್ಯರ್ಥಿಗಳು | **ನಮೂನೆ – ಇ** (ನಿಯಮ 3ಎ(2)(3), ಸರಕಾರದ ಆದೇಶ ಸಂಖ್ಯೆ: ಎಸ್‌ಡಬ್ಲೂಡಿ 132 ಎಸ್ಎಡಿ 97 ದಿನಾಂಕ 08–02–2000 |
| 3 | ಹಿಂದುಳಿದ ಪ್ರವರ್ಗ 2ಎ, 2ಬಿ, 3ಎ, ಮತ್ತು 3ಬಿ ಗೆ ಸೇರಿದ ಅಭ್ಯರ್ಥಿಗಳು | **ನಮೂನೆ – ಎಫ್** (ನಿಯಮ 3ಎ(2)(3), ಸರಕಾರದ ಆದೇಶ ಸಂಖ್ಯೆ: ಎಸ್‌ಡಬ್ಲೂಡಿ 126 ಎಸ್ಎಡಿ 97 ದಿನಾಂಕ 13–02–2003 |

**ಮೇಲ್ಕಂಡ ಮೀಸಲಾತಿ ಪ್ರಮಾಣ ಪತ್ರಗಳು ಉಲ್ಲೇಖಿಸಿರುವ ನಿಯಮಗಳ ಪ್ರಕಾರವಿರಬೇಕು ಮತ್ತು ನೇಮಕಾತಿ ಅಧಿಸೂಚನೆ ದಿನಾಂಕಕ್ಕೆ ಐದು ವರ್ಷಗಳನ್ನು ಮೀರಿರಬಾರದು. ಅವಧಿ ಮೀರಿದ ಮೀಸಲಾತಿ ಪ್ರಮಾಣ ಪತ್ರಗಳನ್ನು ತಿರಸ್ಕರಿಸಲಾಗುವುದು.**

ಅಂಗವಿಕಲ ಅಭ್ಯರ್ಥಿಗಳಿಗೆ ಸೂಚನೆ:–

ಸರ್ಕಾರಿ ಆದೇಶ ಸಂಖ್ಯೆ: ಡಿಪಿಎಆರ್ 52 ಎಸ್.ಎಸ್.ಆರ್. 99 ದಿನಾಂಕ 29–11–2002ರಲ್ಲಿ ನಿಗದಿಪಡಿಸಿರುವ ಅಂಗವಿಕಲ ಅಭ್ಯರ್ಥಿಗಳನ್ನು ಮಾತ್ರ ಪರಿಗಣಿಸಲಾಗುವುದು. ಸರ್ಕಾರಿ ಆದೇಶ ಸಂಖ್ಯೆ ಎಂ.ಎ.ಇ107/ಪಿ.ಹೆಚ್.ಪಿ/2003 ದಿನಾಂಕ: 11/7/2003 ರಲ್ಲಿ ನಿಗಧಿಪಡಿಸಿರುವ ನಮೂನೆಯಲ್ಲಿ ವೈದ್ಯಕೀಯ ಪ್ರಮಾಣ ಪತ್ರಗಳನ್ನು ಸಕ್ಷಮ ವೈದ್ಯಾಧಿಕಾರಿಗಳಿಂದ ಪಡೆದಿರಬೇಕು. ಈ ಪ್ರಮಾಣ ಪತ್ರವನ್ನು ಅರ್ಜಿ ಸಲ್ಲಿಸುವ ದಿನಾಂಕಕ್ಕೆ ಅಭ್ಯರ್ಥಿಯು ಪಡೆದುಕೊಂಡಿರಬೇಕು.

ಸರ್ಕಾರಿ ಅಧಿಸೂಚನೆ ಸೆಕ್ಷನ್ ಸಂಖ್ಯೆ: ಡಿಪಿಎಆರ್ 52 ಎಸ್.ಎಸ್.ಆರ್. 99 29–11–2002ರ ಅಧಿನಿಯಮದ ಸೆಕ್ಷನ್ 32ರ ಪ್ರಕಾರ Persons with disabilities(equal opportunities. Protection of rights & full participation) Act1995 ರಾಜ್ಯ ಸರ್ಕಾರವು ವಿವಿಧ ಇಲಾಖೆಗಳಲ್ಲಿ ಅಂಗವಿಕಲರು ನಿರ್ವಹಿಸಬಹುದಾದ ಹುದ್ದೆಗಳನ್ನು ಗುರುತಿಸಿದೆ.ಸದರಿ ಅಧಿಸೂಚನೆ ಪುಟ–21 ರಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆಗೆ ಸಂಬಂಧಿಸಿದಂತೆ ಅಂಗವಿಕಲ ಅಭ್ಯರ್ಥಿಗಳಿಗೆ ಗುರುತಿಸಿರುವ ಹುದ್ದೆಗಳ ಉದ್ಧೃತವನ್ನು ಈ ಕೆಳಗೆ ನೀಡಲಾಗಿದೆ.

| | **Name of the Dept-Public Instruction** |
|---|---|
| Blind | Music teachers Gr.1& 11(HS) |
| Low Vision | MusicTr.Gr.1&11(HS) Packer,counter,,,,,,Grp.D-Sweeper,Cleanrer peon |

| | | |
|---|---|---|
| 4. ಯೋಜನೆಗಳಿಂದ ನಿರಾಶ್ರಿತ ಅಭ್ಯರ್ಥಿ/ "ಕುಟುಂಬ"ದ ಅಭ್ಯರ್ಥಿಗಳಿಗಾಗಿ | ಶೇ.5 | ಸರಕಾರದ ಅಧಿಸೂಚನೆ ಸಂಖ್ಯೆ ಡಿಪಿಎಆರ್/23 ಎಸ್.ಆರ್.ಆರ್.99 ದಿನಾಂಕ 23-11-2000 ಮತ್ತು ಸರಕಾರದ ಆದೇಶ ಸಂಖ್ಯೆ:ಸಿಆಸುಇ 53 ಸೇನೆನಿ 2007 ದಿನಾಂಕ 04/01/2008 |
| 5. ಗ್ರಾಮೀಣ ಅಭ್ಯರ್ಥಿ | ಶೇ.25 | ಕರ್ನಾಟಕ ಗ್ರಾಮೀಣ ಅಭ್ಯರ್ಥಿಗಳಿಗಾಗಿ (ರಾಜ್ಯ ಸಿವಿಲ್ ಸೇವೆಗಳಲ್ಲಿ) ನೇಮಕಾತಿಗಳ ಅಥವಾ ಹುದ್ದೆಗಳ ಮೀಸಲಾತಿ ಅಧಿನಿಯಮ 2000 ಇದರ ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ08ಸೇನೆನಿ2001 ದಿನಾಂಕ:13/02/2001. ಹಾಗೂ ಸರಕಾರದ ಆದೇಶ ಸಂಖ್ಯೆ:ಸಿಆಸುಇ 53 ಸೇನೆನಿ 2007 ದಿನಾಂಕ 04/01/2008 |
| 6. ಕನ್ನಡ ಮಾಧ್ಯಮದ ಅಭ್ಯರ್ಥಿಗಳಿಗಾಗಿ | ಶೇ. 5 | ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್-71ಎಸ್.ಆರ್.ಆರ್. 2001 ದಿನಾಂಕ 24/10/2002 ಮತ್ತು ಸರ್ಕಾರದ ಆದೇಶಸಂಖ್ಯೆ ಸಿಆಸುಇ 53 ಸೇನೆನಿ 2007 ದಿನಾಂಕ 04/01/2008 |

ಮಹಿಳಾ ಅಭ್ಯರ್ಥಿಗಳಿಗಾಗಿ ಮೀಸಲಿರಿಸಿರುವ ರಿಕ್ತ ಸ್ಥಾನಗಳಿಗೆ ಅರ್ಹ ಮಹಿಳಾ ಅಭ್ಯರ್ಥಿಗಳು ದೊರೆಯದಿದ್ದಲ್ಲಿ ಅಂತಹ ರಿಕ್ತ ಸ್ಥಾನಗಳನ್ನು ಆಯಾ ವರ್ಗಕ್ಕೆ ಸೇರಿದ ಪುರುಷ ಅಭ್ಯರ್ಥಿಗಳಿಂದ ಭರ್ತಿ ಮಾಡಲಾಗುವುದು.

ಮುಂದುವರೆದು, ಆಯ್ಕೆಪಟ್ಟಿಯನ್ನು ಸಿದ್ಧಪಡಿಸುವಾಗ ಸಮತಳ ಮೀಸಲಾತಿಗೆ ಸಂಬಂಧಿಸಿದಂತೆ ಗೌರವನ್ವಿತ ಸರ್ವೋಚ್ಛ ನ್ಯಾಯಾಲಯವು ವಿವರಿಸಿರುವ ಕಾರ್ಯವಿಧಾನವನ್ನು ಸರ್ಕಾರವು ಸುತ್ತೋಲೆ ಸಂಖ್ಯೆ: ಸಿಆಸುಇ 16 ಸೇನೆನಿ 2008, ದಿ. 1.9.2008ರಲ್ಲಿ ಆದೇಶಿರುವಂತೆ ಅಳವಡಿಸಿಕೊಳ್ಳಲಾಗುವುದು.

ಮಾಜಿ ಸೈನಿಕ, ಯೋಜನಾ ನಿರಾಶ್ರಿತ, ಗ್ರಾಮೀಣ ಅಭ್ಯರ್ಥಿ, ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಅಭ್ಯರ್ಥಿಗಳಿಗೆ ಮೀಸಲಿರಿಸಿದ ರಿಕ್ತ ಸ್ಥಾನಗಳಿಗೆ ಅರ್ಹ ಅಭ್ಯರ್ಥಿಗಳು ಲಭ್ಯವಾಗದಿದ್ದಲ್ಲಿ ಅಂತಹ ರಿಕ್ತ ಸ್ಥಾನಗಳನ್ನು ಆಯಾ ವರ್ಗಕ್ಕೆ ಸೇರಿದ ಇತರೆ ಅರ್ಹ ಅಭ್ಯರ್ಥಿಗಳಿಂದ ಭರ್ತಿ ಮಾಡಲಾಗುವುದು.

ಅರ್ಹ ಅಂಗವಿಕಲ ಅಭ್ಯರ್ಥಿಗಳು ದೊರೆಯದಿದ್ದಲ್ಲಿ ಅಂತಹ ರಿಕ್ತ ಸ್ಥಾನಗಳನ್ನು ಭರ್ತಿ ಮಾಡದೇ ಬ್ಯಾಕ್ ಲಾಗ್ ಹುದ್ದೆಗಳೆಂದು ಪರಿಗಣಿಸಲಾಗುವುದು.

**12. ಹುದ್ದೆಗಳ ವರ್ಗೀಕರಣ;**

ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 08 ಸಹಿಮ 95 ದಿನಾಂಕ 20-06-1995 ಮತ್ತು ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 53 ಸೇ.ನೇ.ನಿ.2007 ದಿನಾಂಕ 04-01-2008 ಪ್ರಕಾರ ವಿಷಯವಾರು ಹುದ್ದೆಗಳನ್ನು ಅನುಬಂಧ-1 ರಲ್ಲಿ ವರ್ಗೀಕರಿಸಿದೆ.

**ಸೂಚನೆ: ಈಗ ಅಧಿಸೂಚಿಸಿರುವ ಹುದ್ದೆಗಳ ಸಂಖ್ಯೆ ಮತ್ತು ವರ್ಗೀಕರಣವು ಅವಶ್ಯವಿದ್ದಲ್ಲಿ ವ್ಯತ್ಯಾಸಕ್ಕೆ ಒಳಪಟ್ಟಿರುತ್ತದೆ.**

**ಮೀಸಲಾತಿ ಸೌಲಭ್ಯ ಪಡೆಯಲು ಅಭ್ಯರ್ಥಿಗಳು ಸಲ್ಲಿಸಬೇಕಾದ ಪ್ರಮಾಣ ಪತ್ರಗಳು:**

ಆ) ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ ಮತ್ತು ಹಿಂದುಳಿದ ಪ್ರವರ್ಗ -1 ಕ್ಕೆ ಸೇರಿದ ಅಭ್ಯರ್ಥಿಗಳು ಸರ್ಕಾರದ ಅಧಿಸೂಚನೆ ಸಂಖ್ಯೆ ಎಸ್‌ಡಬ್ಲ್ಯೂಡಿ 132 ಎಸ್‌ಎಡಿ 97 ದಿನಾಂಕ 08-02-2000 ಮತ್ತು ಹಿಂದುಳಿದ ಪ್ರವರ್ಗಗಳಾದ ಪ್ರವರ್ಗ -2 ಎ , 2ಬಿ, 3 ಎ, ಮತ್ತು 3ಬಿ ಗೆ ಸೇರಿದ ಅಭ್ಯರ್ಥಿಗಳು ಸರ್ಕಾರದ ಆದೇಶ ಸಂಖ್ಯೆ: ಎಸ್‌ಡಬ್ಲ್ಯೂಡಿ 126 ಬಿಸಿಎ ದಿನಾಂಕ 13-02-2003 ರಂದು ಹೊರಡಿಸಿದ **"ಕರ್ನಾಟಕ ಅನುಸೂಚಿತ ಜಾತಿಗಳು, ಅನುಸೂಚಿತ ಬುಡಕಟ್ಟುಗಳು, ಮತ್ತು ಇತರೆ ಹಿಂದುಳಿದ ವರ್ಗಗಳ (ನೇಮಕಾತಿ ಮುಂತಾದ ಮೀಸಲಾತಿ) (ತಿದ್ದುಪಡಿ) ನಿಯಮಗಳು 2000"** ರನ್ವಯ ನಿಗದಿಪಡಿಸಿರುವ ಅಭ್ಯರ್ಥಿಗಳಿಗೆ ಅನ್ವಯಿಸುವ ಕೆಳಕಂಡ ನಮೂನೆಗಳಲ್ಲಿಯೇ ಸಂಬಂಧಿಸಿದ ವ್ಯಾಪ್ತಿಯ ತಹಸೀಲ್ದಾರರ ದರ್ಜೆಗಿಂತ ಕಡಿಮೆ ಇಲ್ಲದ ರೆವಿನ್ಯೂ ಪ್ರಾಧಿಕಾರಿಯಿಂದ ಪ್ರಮಾಣ ಪತ್ರವನ್ನು ಪಡೆದಿರಬೇಕು.

| | | |
|---|---|---|
| 1 | ಅನುಸೂಚಿತ ಜಾತಿ ಅಥವಾ ಅನುಸೂಚಿತ ಪಂಗಡಕ್ಕೆ ಸೇರಿದ ಅಭ್ಯರ್ಥಿಗಳು | ನಮೂನೆ -ಡಿ (ನಿಯಮ 3ಎ(2)(3), ಸರ್ಕಾರದ ಆದೇಶ ಸಂಖ್ಯೆ: ಎಸ್.ಡಬ್ಲ್ಯೂಡಿ 132 ಎಸ್.ಎ.ಡಿ. 97 ದಿನಾಂಕ 08-02-2000. |
| 2 | ಹಿಂದುಳಿದ ಪ್ರವರ್ಗ 1ಕ್ಕೆ ಸೇರಿದ ಅಭ್ಯರ್ಥಿಗಳು | ನಮೂನೆ -ಇ (ನಿಯಮ 3ಎ(2)(3), ಸರ್ಕಾರದ ಆದೇಶ ಸಂಖ್ಯೆ: ಎಸ್.ಡಬ್ಲ್ಯೂಡಿ 132 ಎಸ್.ಎ.ಡಿ. 97 ದಿನಾಂಕ 08-02-2000. |
| 3 | ಹಿಂದುಳಿದ ಪ್ರವರ್ಗ 2ಎ, 2ಬಿ, 3ಎ, ಮತ್ತು 3ಬಿ ಗೆ ಸೇರಿದ ಅಭ್ಯರ್ಥಿಗಳು | ನಮೂನೆ : ಎಫ್. (ನಿಯಮ 3ಎ(2)(3), ಸರ್ಕಾರದ ಆದೇಶ ಸಂಖ್ಯೆ: ಎಸ್.ದಬ್ಲ್ಯೂಡಿ 126 ಬಿಸಿಎ ದಿನಾಂಕ 13-02-2003 |

**ಮೇಲ್ಕಂಡ ಮೀಸಲಾತಿ ಪ್ರಮಾಣ ಪತ್ರಗಳು ಉಲ್ಲೇಖಿಸಿರುವ ನಿಯಮಗಳ ಪ್ರಕಾರ ಚಾಲ್ತಿಯಲ್ಲಿರಬೇಕು. ಚಾಲ್ತಿಯಲ್ಲಿರದ ಮೀಸಲಾತಿ ಪ್ರಮಾಣ ಪತ್ರಗಳನ್ನು ತಿರಸ್ಕರಿಸಲಾಗುವುದು.**

**ಅ) ಗ್ರಾಮೀಣ ಅಭ್ಯರ್ಥಿಗಳು:**

ಗ್ರಾಮೀಣ ಅಭ್ಯರ್ಥಿ ಎಂದರೆ ಕರ್ನಾಟಕ ಪೌರನಿಯಮಗಳ ಅಧಿನಿಯಮ 1976 ಅಥವಾ ಕರ್ನಾಟಕ ಪೌರಸಭೆಗಳ ಅಧಿನಿಯಮ 1964 ರಡಿಯಲ್ಲಿ ನಿರ್ದಿಷ್ಟಪಡಿಸಿದ ಒಂದು ದೊಡ್ಡ ಪ್ರದೇಶ, ಸಣ್ಣನಗರ ಪ್ರದೇಶ ಅಥವಾ ಪರಿವರ್ತನೆ ಹಂತದಲ್ಲಿರುವ

ಪ್ರದೇಶ ಹೊರತಾಗಿ ಇತರೆ ಯಾವುದೇ ಪ್ರದೇಶದಲ್ಲಿರುವ ಶಾಲೆಯಲ್ಲಿ 1ನೇ ತರಗತಿಯಿಂದ 10 ನೇ ತರಗತಿಯವರೆಗೆ ವ್ಯಾಸಂಗ ಮಾಡಿದ ಅಭ್ಯರ್ಥಿ.

**ಗ್ರಾಮೀಣ ಅಭ್ಯರ್ಥಿಗಳ ಮೀಸಲಾತಿ ಅಡಿಯಲ್ಲಿ ಅರ್ಜಿ ಸಲ್ಲಿಸುವ ಅಭ್ಯರ್ಥಿಗಳು ಸಂಬಂಧಿಸಿದ ಪ್ರಮಾಣ ಪತ್ರಗಳನ್ನ** ಸರಕಾರಿ ಆದೇಶ ಸಂಖ್ಯೆ: ಡಿಪಿಎಆರ್ 96 ಸೇನೆನಿ 2005 ದಿನಾಂಕ 10–08–2005 **ರಲ್ಲಿ ನೀಡಿದ ನಿಗದಿತ ನಮೂನೆಯಲ್ಲಿ ಮಾತ್ರ ಸಲ್ಲಿಸಬೇಕು.**

**ಸೂಚನೆಗಳು :**

ಸದರಿ ಅಧಿನಿಯಮದಲ್ಲಿ "**ಗ್ರಾಮೀಣ ಅಭ್ಯರ್ಥಿಯನ್ನು**" ಈ ಕೆಳಗೆ ಉದ್ಧರಿಸಿದಂತೆ ಪರಿಭಾಷಿಸಲಾಗಿದೆ.

1. ಗ್ರಾಮೀಣ ಅಭ್ಯರ್ಥಿ ಎಂದರೆ ಒಂದು ಹುದ್ದೆಗಾಗಿ ನಿಗಧಿಪಡಿಸಲಾದ ಅರ್ಹತಾ ಪರೀಕ್ಷೆಯು ಎಸ್.ಎಸ್.ಎಲ್.ಸಿ ಅಥವಾ ಉನ್ನತ ಪರೀಕ್ಷೆಯಾಗಿದ್ದಲ್ಲಿ 1ನೇ ತರಗತಿಯಿಂದ 10ನೇ ತರಗತಿಯವರೆಗೆ.
2. ಒಂದು ಹುದ್ದೆಗೆ ನಿಗಧಿ ಪಡಿಸಲಾದ ಅರ್ಹತಾ ಪರೀಕ್ಷೆಯು ಎಸ್.ಎಸ್.ಎಲ್.ಸಿಗಿಂತ ಕಡಿಮೆಯಾಗಿದ್ದಲ್ಲಿ 1ನೇ ತರಗತಿಯಿಂದ ಅರ್ಹತಾ ಪರೀಕ್ಷೆಯವರೆಗೆ:
3. ಸಾಮಾನ್ಯ ವರ್ಗದ ಅಭ್ಯರ್ಥಿಗಳು ನಮೂನೆ–1ರಲ್ಲಿ ಅಂದರೆ, ಮೇಲುಸ್ಥರದಲ್ಲಿ (Creamy layer) ಬರುವುದಿಲ್ಲವೆಂದು ಸಂಬಂಧಿಸಿದ ತಹಸೀಲ್ದಾರರವರಿಂದ ಪಡೆದ ಪ್ರಮಾಣ ಪತ್ರ ನಮೂನೆ–1ರಲ್ಲಿ ಪತ್ರವನ್ನು ಸಲ್ಲಿಸತಕ್ಕದ್ದು.
4. ಪ್ರವರ್ಗ–1, 2ಎ, 2ಬಿ, 3ಎ, 3ಬಿ, ಪರಿಶಿಷ್ಠ ಜಾತಿ ಮತ್ತು ಪರಿಶಿಷ್ಠ ಪಂಗಡಕ್ಕೆ ಸೇರಿದ ಅಭ್ಯರ್ಥಿಗಳು ತಮ್ಮ ಮೀಸಲಾತಿ ಪ್ರಮಾಣ ಪತ್ರದ ಜೊತೆಗೆ ಸರ್ಕಾರದ ಆದೇಶ ದಿನಾಂಕ:10/08/2005 ರಲ್ಲಿ ನಿಗಧಿ ಪಡೆಸಲಾದ ನಮೂನೆ–2ರಲ್ಲಿ ಗ್ರಾಮೀಣ ವ್ಯಾಸಂಗ ಪ್ರಮಾಣ ಪತ್ರವನ್ನು ಸಲ್ಲಿಸತಕ್ಕದ್ದು.

**ಈ ಬಗ್ಗೆ ನಿಖರ ಮಾಹಿತಿಗಾಗಿ ಸಂಬಂಧಪಟ್ಟ ಮಹಾನಗರಸಭೆ/ ನಗರ ಸಭೆ/ ಪುರಸಭೆ/ ಪಟ್ಟಣ ಪಂಚಾಯ್ತಿ/** ಮಂಡಲ **ಪಂಚಾಯ್ತಿ/ ಗ್ರಾಮ ಪಂಚಾಯ್ತಿಯ ಅಧಿಕಾರಿಗಳನ್ನು ಸಂಪರ್ಕಿಸಲು ತಿಳಿಸಿದೆ.**

**ವಿಶೇಷ ಸೂಚನೆ :– (1)** ಸರ್ಕಾರದ ಆದೇಶ ಸಂಖ್ಯೆ : ಡಿಪಿಎಆರ್ 96 ಸೇನೇನಿ 2005 ದಿನಾಂಕ : 10.8.2005ರ ನಮೂನೆ–2ರಲ್ಲಿ ನೀಡಿದ ವ್ಯಾಸಂಗ ಪ್ರಮಾಣ ಪತ್ರಗಳನ್ನು ನೇಮಕಾತಿ ಅಧಿಸೂಚನೆ ದಿನಾಂಕದ ನಂತರ, ಅರ್ಜಿ ಸಲ್ಲಿಸುವ ಕೊನೆಯ ದಿನಾಂಕದೊಳಗೆ ಪಡೆದು ಅರ್ಜಿಯೊಡನೆ ಲಗತ್ತಿಸತಕ್ಕದ್ದು. ಈ ಹಿಂದೆ ಪಡೆಯಲಾದ ಪ್ರಮಾಣ ಪತ್ರಗಳನ್ನು ಪರಿಗಣಿಸಲಾಗುವುದಿಲ್ಲ.

**(2)** 1995 ರಿಂದ ಅನೇಕ ಪ್ರದೇಶಗಳು ಪರಿವರ್ತಿತ ಪ್ರದೇಶಗಳೆಂದು ಗುರುತಿಸಲ್ಪಟ್ಟಿದ್ದು, ತದನಂತರ ಪುರಸಭೆ/ನಗರ ಸಭೆಗಳಾಗಿ ಅಧಿಸೂಚಿಸಲ್ಪಟ್ಟಿದೆ. ಅಭ್ಯರ್ಥಿಯು ವ್ಯಾಸಂಗ ಮಾಡುವ ಅವಧಿಯಲ್ಲಿ ಸದರಿ ಪ್ರದೇಶವು ಗ್ರಾಮೀಣ ಪ್ರದೇಶವೋ ಅಥವಾ ಪರಿವರ್ತಿತ ಪ್ರದೇಶ ಎಂದು ಗುರುತಿಸಲ್ಪಟ್ಟಿದೆಯೋ ಇಲ್ಲವೋ ಎಂಬ ಬಗ್ಗೆ ಸ್ಥಳೀಯ ಪುರಸಭೆ, ನಗರ ಸಭೆ ಅಥವಾ ಪಟ್ಟಣ ಪಂಚಾಯಿತಿಯ ಅಧಿಕಾರಿಗಳಿಂದ ನಿಖರ ಮಾಹಿತಿ (ಸರ್ಕಾರದ ಅಧಿಸೂಚನೆಯೊಂದಿಗೆ) ಪಡೆದ ನಂತರ ಪ್ರಮಾಣ ಪತ್ರ ನೀಡಲು, ಮೇಲು ಸಹಿ ಮಾಡಲು ಸಕ್ಷಮ ಪ್ರಾಧಿಕಾರಿಗಳು ಕ್ರಮ ತೆಗೆದುಕೊಳ್ಳುವುದು.

**ಆ) ಅಂಗವಿಕಲ ಅಭ್ಯರ್ಥಿಗಳು:**

ಸರ್ಕಾರದ ಆದೇಶ ಸಂಖ್ಯೆ: ಡಿಪಿಎಆರ್ 52 ಎಸ್.ಆರ್..ಆರ 99 ದಿನಾಂಕ; 29–11–2002 ರಲ್ಲಿ ನಿಗದಿಪಡಿಸಿರುವ ಅಂಗವಿಕಲ ಅಭ್ಯರ್ಥಿಗಳನ್ನು ಮಾತ್ರ ಪರಿಗಣಿಸಲಾಗುವುದು. ಸರ್ಕಾರಿ ಆದೇಶ ಸಂಖ್ಯೆ:ಎಂ.ಎಂ.ಇ.107. ಪಿ.ಹೆಚ್.ಪಿ/2003 ದಿನಾಂಕ 11/07/2003 ರಲ್ಲಿ ವೈದ್ಯಕೀಯ ಪ್ರಮಾಣ ಪತ್ರವನ್ನು ಸಕ್ಷಮ ವೈದ್ಯಾಧಿಕಾರಿಗಳಿಂದ ಪಡೆದಿರಬೇಕು. ಈ ಪ್ರಮಾಣ ಪತ್ರವನ್ನು ಅರ್ಜಿ ಸ್ವೀಕರಿಸಲು ನಿಗದಿಪಡಿಸಿರುವ ಕಡೆಯ ದಿನಾಂಕದೊಳಗೆ ಅಭ್ಯರ್ಥಿಯು ಪಡೆದುಕೊಂಡಿರಬೇಕು. ಹಾಗೂ ನಿಯಮಾನುಸಾರ ಕನಿಷ್ಠ ಅಂಗವಿಕಲತೆ ಪ್ರಮಾಣವನ್ನು ಹೊಂದಿರಬೇಕು.

ಸರ್ಕಾರಿ ಅಧಿಸೂಚನೆ ಸಂಖ್ಯೆ: ಡಿಪಿಎಆರ್.52 ಎಸ್.ಆರ್ಆರ್99 ದಿನಾಂಕ: 29–11–2002 ರ ಪ್ರಕಾರ Persons with disabilities (equal opportunities, protection of rights & full participation) Act 1995 ಅಧಿನಿಯಮದ ಸೆಕ್ಷನ್ 32 ರ ಪ್ರಕಾರ ರಾಜ್ಯ ಸರ್ಕಾರವು ವಿವಿಧ ಇಲಾಖೆಗಳಲ್ಲಿ ಅಂಗವಿಕಲರು ನಿರ್ವಹಿಸಬಹುದಾದ ಹುದ್ದೆಗಳನ್ನು ಗುರುತಿಸಿದೆ. ಸದರಿ ಅಧಿಸೂಚನೆಯ ಪುಟ–21 ರಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆಗೆ ಸಂಬಂಧಿಸಿದಂತೆ ಅಂಗವಿಕಲ ಅಭ್ಯರ್ಥಿಗಳಿಗೆ ಗುರುತಿಸಿರುವ ಹುದ್ದೆಗಳ ಉದ್ಧೃತವನ್ನು ಈ ಕೆಳಗೆ ನೀಡಲಾಗಿದೆ.

| Sl.No. 68. | |
|---|---|
| Name of the Dept - Public Instruction | |
| Blind | Music Teacher Gr.1 & II (HS) |
| Low Vision | MusicTr Gr.1 & II (HS) Packer, Counter, Grp. D - Sweeper, Cleaner, Peon |
| Leprosy Cured | Pri School HM, Sr Librarian, Gr.1 & II Pry. School Teacher /Drawing, Music, Art Master (SSLC with Asst.Master Certi)Sec.sch Asst II,Tr-1, Asst. Agri. Teacher, Pri.Sch Tr, Trained & Untrained, FDA, SDA, Drama, Craft, Hindi Trs. Group-D Post: Lift Attender, Peon/Packer/Carrien Counter Cleaner, Pacher, Attender |

| | |
|---|---|
| Hearing Impaired | PriSchool HM, Sr Librarian, Pry. Schools Nursery school Tr Drawing, Art Master(SSLC with Asst.MasterCertificate) Sec School Assistant-II, Tr Gr-I , Asst Agricultural Teacher, Pry. School Tr, Trained & Untrained Drama Teacher, FDA, SDA, Craft, Hindi Tr, Group D Post. Attender/Lift Attender/ Packers/Caariern/Counter/Pacher/Peon/Cleaner,Sweeper |
| Locomotor Disability | Primary School HM, Nursery School Teacher / Mother, Librarian State education Library, FDA, Drawing Art master(SSLC with Asst Master cert) Secondary school Asst Gr II, Teacher, Gr-1, Asst.craft and Hindi teacher, Group D, Post Attender/Lift Attender, Packers / Carriern/Counter/Pacher, Peon/Cleaner |
| Mentally Ill | Pry.School HM, Sr.Librarian, Pry.Schools,Nursery school Teacher/Drawing Asst Master(SSLC with Asst Master Certificate), Sec.School Asst-II, Teacher-I, Asst.Agri. Teacher, Pry.Sch. Tr, Trained & Untrained, FDA, SDA, Craft & Hindi Teacher, Group D Post. Lift Attender/Pachers/Caarreon/ Counter / Pacher / Peon / Cleaner, Sweeper |
| Mentally Retarded | |

ಅಂಗವಿಕಲ ಅಭ್ಯರ್ಥಿಗಳು ಸರ್ಕಾರದ ಆದೇಶ ಸಂಖ್ಯೆ ಎಂ.ಎಂ.ಇ.107ಪಿಹೆಚ್.ಪಿ 2003 ದಿನಾಂಕ: 11–07–2003 ರನ್ವಯ ನಿಗದಿತ ನಮೂನೆಯಲ್ಲಿ ಅಂಗವಿಕಲತೆಯ ಬಗ್ಗೆ ಸಂಬಂಧಪಟ್ಟ ಜಿಲ್ಲಾ ವೈದ್ಯಕೀಯ ಮಂಡಳಿಯು ನೀಡುವ ಪ್ರಮಾಣ ಪತ್ರವನ್ನು ಪಡೆದು ಅದರ ಸ್ವದೃಢೀಕೃತ ಪ್ರತಿಯನ್ನು ಅರ್ಜಿಗೆ ಲಗತ್ತಿಸಬೇಕು. ಅವರು ಆಯ್ಕೆಯಾದ ಪಕ್ಷದಲ್ಲಿ ಅದರ ಮೂಲ ಪ್ರತಿಯನ್ನು ನೇಮಕಾತಿ ಪ್ರಾಧಿಕಾರಿಗಳಿಗೆ ಸಲ್ಲಿಸಬೇಕು. ಅಂಗವಿಕಲರೆಂದು ವೈದ್ಯಕೀಯ ಪ್ರಮಾಣ ಪತ್ರದ ಆಧಾರದ ಮೇಲೆ ಅಂಗವಿಕಲ ಮೀಸಲಾತಿ ಹುದ್ದೆಯಲ್ಲಿ ನೇಮಕಾತಿ ಹೊಂದಿ ಸೇವೆ ಸಲ್ಲಿಸುತ್ತಿದ್ದವರು ಬೇರೆ ಯಾವುದೇ ಹುದ್ದೆಗೆ ಕಛೇರಿ ಮುಖ್ಯಸ್ಥರ ಮುಖಾಂತರ ಅರ್ಜಿಯನ್ನು ಸಲ್ಲಿಸಿದಾಗ ಅವರು ಪುನಃ ವೈದ್ಯಕೀಯ ಪ್ರಮಾಣ ಪತ್ರವನ್ನು ಸಲ್ಲಿಸುವ ಅವಶ್ಯಕತೆ ಇರುವುದಿಲ್ಲ. ಅರ್ಜಿಯನ್ನು ಆಯ್ಕೆ ಪ್ರಾಧಿಕಾರಿಗೆ ಕಳುಹಿಸುವಾಗ, ಅರ್ಜಿದಾರನು ಅಂಗವಿಕಲ ಮೀಸಲಾತಿಯ ಹುದ್ದೆಗೆ ಆಯ್ಕೆಯಾದವನು ಎಂಬ ಪ್ರಮಾಣ ಪತ್ರದೊಡನೆ ಮೇಲಾಧಿಕಾರಿಗಳು ಅರ್ಜಿಯನ್ನು ಕಳುಹಿಸಿಕೊಡುವುದು.

**ಇ) ಮಾಜಿ ಸೈನಿಕರ ಗುಂಪಿನಲ್ಲಿ ಆಯ್ಕೆ ಬಯಸುವ ಅಭ್ಯರ್ಥಿಗಳಿಗೆ ಸೂಚನೆಗಳು:**

ಮಾಜಿ ಸೈನಿಕರ ಗುಂಪಿನಲ್ಲಿ ಆಯ್ಕೆಗೆ ಕೆಳಗಿನವರು ಅರ್ಹರು:–

(1) ಮಾಜಿ ಸೈನಿಕ ಎಂದರೆ ಸಶಸ್ತ್ರ ದಳಗಳಾದ ನಿಯಮಿತ ಭೂದಳ, ನೌಕಾದಳ ಮತ್ತು ವಾಯುದಳದಲ್ಲಿ ಯಾವುದೇ ಶ್ರೇಣಿಯಲ್ಲಿ (ಯೋಧ ಅಥವಾ ಅಯೋಧನಾಗಿ) ಸೇವೆ ಸಲ್ಲಿಸಿದ ವ್ಯಕ್ತಿ. ಅಂದರೆ:–

(ಅ) ಅಂತಹ ಸೇವೆಯಿಂದ ನಿವೃತ್ತಿ ಹೊಂದಿದ ನಂತರ ನಿವೃತ್ತಿ ವೇತನ ಪಡೆಯುತ್ತಿರುವ ವ್ಯಕ್ತಿ.

**ಅಥವಾ**

(ಆ) ವೈದ್ಯಕೀಯ ಕಾರಣಗಳಿಂದ ಮಿಲಿಟರಿ ಸೇವೆಗೆ ಅನರ್ಹನಾದವನೆಂದೋ ಅಥವಾ ವ್ಯಕ್ತಿಯ ಹಿಡಿತಕ್ಕೂ ಮೀರಿದ ಪರಿಸ್ಥಿತಿಗಳಿಂದ ಮತ್ತು ವೈದ್ಯಕೀಯ ಅಥವಾ ಅಸಾಮರ್ಥ್ಯದ ಪಿಂಚಣಿ ಪಡೆದು ಸೇವೆಯಿಂದ ಬಿಡುಗಡೆಯಾದ ವ್ಯಕ್ತಿ.

**ಅಥವಾ**

(ಇ) ಸ್ವಂತ ಕೋರಿಕೆ ಹೊರತುಪಡಿಸಿ ಸಿಬ್ಬಂದಿ ಕಡಿತದ ಪರಿಣಾಮದಿಂದ ಅಂತಹ ಸೇವೆಯಿಂದ ಬಿಡುಗಡೆ ಹೊಂದಿದ ವ್ಯಕ್ತಿ.

**ಅಥವಾ**

(ಈ) ತನ್ನ ಸ್ವಂತ ಕೋರಿಕೆಯ ಮೇರೆಗೆ ಅಥವಾ ದುರ್ನಡತೆ ಅಥವಾ ಅಸಾಮರ್ಥ್ಯದ ಕಾರಣದಿಂದಾಗಿ ತೆಗೆದು ಹಾಕಿರುವ ಅಥವಾ ಕರ್ತವ್ಯದಿಂದ ವಜಾ ಮಾಡಿದ ವ್ಯಕ್ತಿಗಳನ್ನು ಹೊರತುಪಡಿಸಿ, ನಿರ್ಧಿಷ್ಟ ಅವಧಿಯನ್ನು ಪೂರೈಸಿದ ತರುವಾಯ ಬಿಡುಗಡೆ ಹೊಂದಿದ ವ್ಯಕ್ತಿ ಮತ್ತು ಗ್ರಾಚ್ಯುಟಿ ಪಡೆಯುತ್ತಿರುವ ವ್ಯಕ್ತಿ.

**ಅಥವಾ**

(ಉ) ಪ್ರಾಂತೀಯ ಸೇವೆಯ ಈ ಕೆಳಗೆ ಹೆಸರಿಸಿದ ವರ್ಗದ ಸಿಬ್ಬಂದಿ.

1) ನಿರಂತರ ಸೇವೆ ಸಲ್ಲಿಸಿ ನಿವೃತ್ತಿ ಹೊಂದಿದ ಪಿಂಚಣಿದಾರರು.

2) ಮಿಲಿಟರಿ ಸೇವೆಯಿಂದ ಉಂಟಾದ ದೈಹಿಕ ಅಸಾಮರ್ಥ್ಯತೆ ಹೊಂದಿ ಬಿಡುಗಡೆಯಾದ ವ್ಯಕ್ತಿ.

3) ಗ್ಯಾಲಂಟ್ರಿ ಪ್ರಶಸ್ತಿ ವಿಜೇತರು.

(2) ಮಾಜಿ ಸೈನಿಕ ಅವಲಂಬಿತರ ಗುಂಪಿನಲ್ಲಿ ಆಯ್ಕೆ ಬಯಸುವ ಅಭ್ಯರ್ಥಿಗಳು ಅಂದರೆ:–

ಕೇಂದ್ರ ಸಶಸ್ತ್ರ ದಳದಲ್ಲಿ ಸೇವೆ ಸಲ್ಲಿಸುವಾಗ ಕೊಲ್ಲಲ್ಪಟ್ಟ ಅಥವಾ ಶಾಶ್ವತವಾಗಿ ದೈಹಿಕ ವಿಕಲತೆ ಹೊಂದಿದ ವ್ಯಕ್ತಿಗಳ ಕುಟುಂಬದವರು. (ಸಂಬಂಧಾನುಸಾರ ಹೆಂಡತಿ ಅಥವಾ ಗಂಡ ಮತ್ತು ಮಕ್ಕಳು ಮತ್ತು ಮಲ ಮಕ್ಕಳು ಮಾಜಿ ಸೈನಿಕರ ಅವಲಂಬಿತರಡಿಯಲ್ಲಿ ಮೀಸಲಾತಿಗೆ ಅರ್ಹರಾಗಿರುತ್ತಾರೆ. ಆದರೆ ಅಂತಹವರಿಗೆ ವಯೋಮಿತಿ ಸಡಿಲಿಕೆ ಇಲ್ಲ)

**ವಿವರಣೆ:**

1. ಈ ಸೌಲಭ್ಯಕ್ಕೆ ಡಿಫೆನ್ಸ್ ಸೆಕ್ಯುರಿಟಿ ಕೋರ್ಸ್, ಜನರಲ್ ರಿಸರ್ವ್ ಇಂಜಿನಿಯರಿಂಗ್ ಕೋರ್ಸ್ ಲೋಕ ಸಹಾಯಕ ಸೇವೆ ಮತ್ತು ಪ್ಯಾರಾ ಮಿಲಿಟರಿ ದಳದಲ್ಲಿ ಸೇವೆ ಸಲ್ಲಿಸಿದ ವ್ಯಕ್ತಿ ಅರ್ಹರಲ್ಲ.

2. ಕೇಂದ್ರ ಸಶಸ್ತ್ರದಳದ ಸೇವೆಯಲ್ಲಿ ವ್ಯಕ್ತಿಗಳು ಸೇವೆಯಿಂದ ನಿವೃತ್ತಿ ಹೊಂದಿದ ನಂತರ ಮಾಜಿ ಸೈನಿಕರ ವರ್ಗದಡಿ ಬರುವ ವ್ಯಕ್ತಿಗೆ ಒಪ್ಪಂದವು ಪೂರ್ಣವಾಗಲು ಒಂದು ವರ್ಷಕ್ಕೆ ಮುನ್ನ ಪುನರ್ ಉದ್ಯೋಗಕ್ಕೆ ಅರ್ಜಿ ಹಾಕಿಕೊಳ್ಳಲು ಹಾಗೂ ಅವರಿಗೆ ಮಾಜಿ ಸೈನಿಕರಿಗೆ ದೊರೆಯುವ ಎಲ್ಲಾ ಸೌಲಭ್ಯಗಳನ್ನು ಹೊಂದಲು ಅನುಮತಿ ನೀಡಲಾಗಿದ್ದು, ಆದರೆ, ಸಮವಸ್ತ್ರವನ್ನು ತ್ಯಜಿಸಲು ಅನುಮತಿ ನೀಡುವವರೆಗೆ ರಾಜ್ಯ ನಾಗರೀಕ ಸೇವೆ ಅಥವಾ ಹುದ್ದೆಗೆ ನೇಮಕ ಹೊಂದುವಂತಿಲ್ಲ.

**ಈ) ಯೋಜನಾ ನಿರಾಶ್ರಿತರ ಗುಂಪಿನಲ್ಲಿ ಆಯ್ಕೆ ಬಯಸುವ ಅಭ್ಯರ್ಥಿಗಳಿಗೆ ಸೂಚನೆಗಳು:–**

ಅಧಿಸೂಚನಾ ಸಂಖ್ಯೆ: ಡಿಪಿಎಆರ್ 23 ಎಸ್.ಆರ್.ಆರ್. 99 ದಿನಾಂಕ 23–11–2000 ದಲ್ಲಿ ಸರ್ಕಾರ ರಾಜ್ಯ ಸಿವಿಲ್ ಸೇವೆಗಳಲ್ಲಿನ "ಗ್ರೂಪ್ ಸಿ ಮತ್ತು ಡಿ" ಹುದ್ದೆಗಳ ನೇರ ನೇಮಕಾತಿಗಾಗಿ ಶೇಕಡ 5% ರಷ್ಟು ರಿಕ್ತ ಸ್ಥಾನಗಳನ್ನು "ಯೋಜನೆಗಳಿಂದ ನಿರಾಶ್ರಿತರಾದವರ ಕುಟುಂಬಗಳ" ಅಭ್ಯರ್ಥಿಗಳಿಂದ ಭರ್ತಿ ಮಾಡಲು ಆಸ್ಪದ ಕಲ್ಪಿಸಿದ್ದು, ಎಲ್ಲಾ ಅಂಶಗಳು (ಪಡೆದಿರುವ ಪ್ರತಿಶತ ಅಂಕಗಳು ಹಾಗೂ ಜನ್ಮ ದಿನಾಂಕ ಸರಿಸಮಾನ ಇದ್ದಲ್ಲಿ) (when all things are being equal) ಈ ಕೆಳಕಂಡ ಆದ್ಯತೆಯಾನುಸಾರ ಭರ್ತಿ ಮಾಡಲು ನಿಗದಿಪಡಿಸಿದೆ:–

(i) ಯೋಜನೆಗಾಗಿ ಯಾವುದೇ ವ್ಯಕ್ತಿಯು ತನಗೆ ಆಧಾರವಾಗಿದ್ದ ವಾಸದ ಮನೆಯನ್ನು ಮತ್ತು ಕೊನೆಪಕ್ಷ ಶೇಕಡ 50 ರಷ್ಟು ಕೃಷಿ ಜಮೀನನ್ನು ಯೋಜನೆಗಾಗಿ ಕಳೆದುಕೊಳ್ಳಲಾದ ಅವನ ಕುಟುಂಬದ ಸದಸ್ಯರು.

(ii) ಯೋಜನೆಯ ಪೂರ್ವದ ಅವಧಿಯಲ್ಲಿ ಯಾವುದೇ ವ್ಯಕ್ತಿಯು ಭೂರಹಿತನಾಗಿದ್ದು, ತದನಂತರ ತನ್ನ ವಾಸದ ಮನೆಯನ್ನು ಯೋಜನೆಗಾಗಿ ಕಳೆದುಕೊಂಡ ವ್ಯಕ್ತಿಯ ಕುಟುಂಬದ ಸದಸ್ಯರು.

(iii) ಯೋಜನೆಗಾಗಿ ಯಾವುದೇ ವ್ಯಕ್ತಿಯು ತನಗೆ ಆಧಾರವಾಗಿದ್ದ ಶೇಕಡ 50ರಷ್ಟು ಮಾತ್ರ ಅಥವಾ ಅದಕ್ಕಿಂತ ಕಡಿಮೆ ಬೇಸಾಯದ ಭೂಮಿಯನ್ನು ಕಳೆದುಕೊಂಡ ವ್ಯಕ್ತಿಯ ಕುಟುಂಬದ ಸದಸ್ಯರು.

(iv) ಯೋಜನೆಗಾಗಿ ಇನ್ನಾವುದೇ ಪ್ರಕರಣದಲ್ಲಿ ನಿರಾಶ್ರಿತರಾದವರ ಕುಟುಂಬದ ಸದಸ್ಯರು.

**ವಿವರಣೆ:–** ಈ ಮೇಲ್ಕಂಡ ಉಪ ನಿಯಮದ ಉದ್ದೇಶ:–

(1) "ಯೋಜನೆಗಳಿಂದ ನಿರಾಶ್ರಿತರಾದ ವ್ಯಕ್ತಿ" ಎಂದರೆ, ಬಾಡಿಗೆ ಆಧಾರದ ಮೇಲೆ, ಅನುಭೋಗದ ಅವಧಿಗೆ ಜಮೀನು ಪಡೆದ ವ್ಯಕ್ತಿ ಸರ್ಕಾರದಿಂದ ಗುತ್ತಿಗೆ ಪಡೆದ, ಅಥವಾ ಇತರೆ ಆಸ್ತಿಗಳನ್ನು ಹೊಂದಿದ ಮಾಲೀಕನಾಗಿದ್ದು, ಯೋಜನೆಗಾಗಿ ಭೂಮಿಯನ್ನು : ಜಮೀನನ್ನು ಸ್ವಾಧೀನ ಪಡಿಸಿಕೊಳ್ಳುವುದಕ್ಕಿಂತ ಪೂರ್ವಭಾವಿಯಾಗಿ ಅಧಿಸೂಚನೆ ಹೊರಡಿಸುವ 5 ವರ್ಷಗಳ ಮುಂಚಿತವಾಗಿ ಯಾವುದೇ ವ್ಯಕ್ತಿಯ ಸ್ವಾಧೀನದಲ್ಲಿರುವ ಗ್ರಾಮಠಾಣದಲ್ಲಿನ ಅಥವಾ ಯೋಜನೆಯ ಪರಿಣಾಮದಿಂದಾಗಿ ಅದರ ವ್ಯಾಪ್ತಿಯಲ್ಲಿ ಬರುವಂತಹ ಜಮೀನು ಅಥವಾ ಆಸ್ತಿಯನ್ನು ಯೋಜನೆಯ ಉದ್ದೇಶಕ್ಕಾಗಿ ಸ್ವಾಧೀನ ಪಡಿಸಿಕೊಳ್ಳಲಾದ ಕಾರಣದಿಂದಾಗಿ ನಿರಾಶ್ರಿತನಾದ ವ್ಯಕ್ತಿ.

(2) "ಕುಟುಂಬ ಸದಸ್ಯರು" ಯೋಜನೆಗಳಿಂದ ನಿರಾಶ್ರಿತರಾದ ವ್ಯಕ್ತಿಗಳ ಸಂಬಂಧವೇನೆಂದರೆ ಅಂತಹ ವ್ಯಕ್ತಿಯ ಕುಟುಂಬವು ಆತನೊಂದಿಗೆ ವಾಸವಾಗಿರುವ ಮತ್ತು ಅವನ / ಅವಳ ಮೇಲೆ ಪಾಲನೆ ಹಾಗೂ ಪೋಷಣೆಗಾಗಿ ಅವಲಂಬಿತರಾಗಿರುವ ಗಂಡ / ಹೆಂಡತಿ, ಗಂಡು ಮಕ್ಕಳು, ಅವಿವಾಹಿತ ಹೆಣ್ಣು ಮಕ್ಕಳು, ಸೋದರರು ಮತ್ತು ಸೋದರಿಯರು.

(3) "ಯೋಜನೆ" ಎಂದರೆ, ನಿರಾಶ್ರಿತ ವ್ಯಕ್ತಿಗಳಿಂದ ಪಡೆಯಲಾದ ಜಮೀನನ್ನು ನಿರ್ಮಾಣ ಅಥವಾ ನೀರಾವರಿಯ ಉದ್ದೇಶಕ್ಕಾಗಿ ಅಥವಾ ನೀರು ಸರಬರಾಜು ಮಾಡುವ ಅಭಿವೃದ್ಧಿ ಕಾರ್ಯದ ವಿಸ್ತರಣೆ ಅಥವಾ ವಿದ್ಯುಚ್ಛಕ್ತಿ ಉತ್ಪಾದನೆ ಮತ್ತು ಪೂರೈಕೆ ಅಥವಾ ವಿದ್ಯುಚ್ಛಕ್ತಿ ಕಾರ್ಯಗಳ ಅನುಕೂಲಕರ ಅಭಿವೃದ್ಧಿಯೂ ಸೇರಿದಂತೆ ಸಾರ್ವಜನಿಕ ಉಪಯೋಗಗಳಿಗಾಗಿ ನಿರ್ಮಾಣ ಸುಧಾರಣೆ ಅಥವಾ ಅಭಿವೃದ್ಧಿ ಕಾರ್ಯಗಳ ಯೋಜನೆ.

**ವಿಶೇಷ ಸೂಚನೆ:–**

ಈ ಮೇಲ್ಕಂಡ ನಿಯಮಗಳು ಪ್ರಾರಂಭವಾಗುವುದಕ್ಕಿಂತ 20 ವರ್ಷಗಳ ಮುಂಚಿತವಾಗಿ ಯಾವುದೇ ಭೂಮಿ, ಗ್ರಾಮಠಾಣದಲ್ಲಿನ ಫ್ಲಾಟ್ ಅಥವಾ ಇನ್ನಿತರ ಯಾವುದೇ ಆಸ್ತಿಗಳನ್ನು ಹೊಂದಿದ್ದು, ಅಂತಹ ಆಸ್ತಿಗಳನ್ನು ಯೋಜನೆಗಳ ಉದ್ದೇಶಕ್ಕಾಗಿ ಸ್ವಾಧೀನಪಡಿಸಿಕೊಂಡ ಕಾರಣದಿಂದಾಗಿ ನಿರಾಶ್ರಿತರಾದ ಕುಟುಂಬದ ಸದಸ್ಯರು/ವ್ಯಕ್ತಿಗಳು ಈ ನಿಯಮಗಳ ಸೌಲಭ್ಯ ಪಡೆಯಲು ಅರ್ಹರಿರುವುದಿಲ್ಲ.

ಯೋಜನೆಗಳಿಂದ ನಿರಾಶ್ರಿತರಾದ ಕುಟುಂಬದ ಅಭ್ಯರ್ಥಿಗಳು ಸರ್ಕಾರಿ ಸುತ್ತೋಲೆ ಸಂಖ್ಯೆ: ಸಿ.ಆ.ಸು.ಇ.44:ಸೇ.ನೇ.ನಿ ದಿನಾಂಕ 27–07–2001ರಲ್ಲಿ ನಿಗದಿಪಡಿಸಲಾದ ನಮೂನೆಯಲ್ಲಿ ಪ್ರಮಾಣ ಪತ್ರವನ್ನು ಸಕ್ಷಮ ಪ್ರಾಧಿಕಾರದಿಂದ ಪಡೆದು ಅದರ ಎರಡು ನಕಲು ಪ್ರತಿಗಳನ್ನು ಅರ್ಜಿಯೊಂದಿಗೆ ಲಗತ್ತಿಸತಕ್ಕದ್ದು.

**ಉ) ಕನ್ನಡ ಮಾಧ್ಯಮದ ಅಭ್ಯರ್ಥಿ:–**

ಸರ್ಕಾರವು ಅಧಿಸೂಚನೆ ಸಂಖ್ಯೆ:ಡಿಪಿಎಆರ್71/ಎಸ್ಆರ್ಆರ್ 2001, ದಿನಾಂಕ: 24/10/2002ರಲ್ಲಿ ಹೊರಡಿಸಿದ ಕರ್ನಾಟಕ ಸರ್ಕಾರಿ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ (9)(1)(ಸಿ)ರ ಅನ್ವಯ ಅಭ್ಯರ್ಥಿಯು 01 ರಿಂದ 10ನೇ ತರಗತಿವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರುತ್ತಾರೆ ಎನ್ನುವ ಬಗ್ಗೆ ಸಂಬಂಧಪಟ್ಟ ಶಾಲಾ ಮುಖ್ಯಸ್ಥರಿಂದ ಪ್ರಮಾಣ ಪತ್ರವನ್ನು ಪಡೆದು, ಸಂಬಂಧಿಸಿದ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೇಲು ಸಹಿ ಮಾಡಿಸಿ ಅರ್ಜಿಯೊಂದಿಗೆ ಲಗತ್ತಿಸಬೇಕು.

**13. ತಾತ್ಕಾಲಿಕ ಆಯ್ಕೆಪಟ್ಟಿ:–**

ಅರ್ಹತೆ (ಮೇರಿಟ್) ಮತ್ತು ಮೀಸಲಾತಿ ನಿಯಮಗಳನ್ವಯ ವಿವಿಧ ವರ್ಗದ ಹುದ್ದೆಗಳಿಗೆ ಅಭ್ಯರ್ಥಿಗಳನ್ನು ಆಯ್ಕೆಮಾಡಿ ತಾತ್ಕಾಲಿಕ ಆಯ್ಕೆಪಟ್ಟಿಯನ್ನು ಆಯ್ಕೆ ಪ್ರಾಧಿಕಾರಿಯಾದ ವಿಭಾಗೀಯ ಕಾರ್ಯದರ್ಶಿಗಳು, ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ ಮತ್ತು

ಪದನಿಮಿತ್ತ ಸಹ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಮೈಸೂರು ವಿಭಾಗ, ಮೈಸೂರು ಇವರ ಕಚೇರಿ ಮತ್ತು ಈ ವಿಭಾಗದ ಎಲ್ಲಾ ಜಿಲ್ಲಾ ಉಪನಿರ್ದೇಶಕರು (ಆಡಳಿತ) ರವರ ಕಛೇರಿಗಳಲ್ಲಿ ಪ್ರಕಟಿಸಲಾಗುವುದು ಹಾಗೂ ಈ ಬಗ್ಗೆ ರಾಜ್ಯ ಮಟ್ಟದ ಕನಿಷ್ಠ ಎರಡು ದಿನಪತ್ರಿಕೆಗಳಲ್ಲಿ ಸಂಕ್ಷಿಪ್ತ ಸೂಚನೆಯನ್ನು ಪ್ರಕಟಿಸಲಾಗುವುದು. ಅಭ್ಯರ್ಥಿಗಳು ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು ಪರಿಶೀಲಿಸಿ ತಮ್ಮ ಆಕ್ಷೇಪಣೆಗಳು ಏನಾದರೂ ಇದ್ದಲ್ಲಿ ಮುಂದೆ ತಿಳಿಸುವ ನಿಗದಿತ ದಿನಾಂಕದೊಳಗೆ ಆಕ್ಷೇಪಣೆಗಳನ್ನು ಸಲ್ಲಿಸಬಹುದಾಗಿದೆ. ಈ ದಿನಾಂಕದ ನಂತರ ಸಲ್ಲಿಸುವ ಯಾವುದೇ ಆಕ್ಷೇಪಣೆಗಳನ್ನು ಪರಿಗಣಿಸದೆ ತಿರಸ್ಕರಿಸಲಾಗುವುದು. ನಿಗದಿತ ಸಮಯದೊಳಗೆ ಆಕ್ಷೇಪಣೆಗಳನ್ನು ಸಲ್ಲಿಸದೆ ಇರುವ ಅಭ್ಯರ್ಥಿಗಳು ಅಂತಿಮ ಆಯ್ಕೆ ಪಟ್ಟಿ ಪ್ರಕಟವಾದ ನಂತರ ಯಾವುದೇ ರೀತಿಯ ಪರಿಹಾರಕ್ಕೆ ಅರ್ಹರಾಗುವುದಿಲ್ಲ. ಮತ್ತು ಈ ಬಗ್ಗೆ ವೈಯಕ್ತಿಕವಾಗಿ ಯಾವುದೇ ಅಭ್ಯರ್ಥಿಗೂ ಸೂಚನೆ ನೀಡಲಾಗುವುದಿಲ್ಲ.

**ವಿಶೇಷ ಸೂಚನೆ:–**

ತಾತ್ಕಾಲಿಕ ಆಯ್ಕೆಪಟ್ಟಿ ಪ್ರಕಟಿಸಿದ ನಂತರ ಅಭ್ಯರ್ಥಿಗಳು ಆಕ್ಷೇಪಣೆ ಸಲ್ಲಿಸುವಾಗ ಮೂಲ ಅರ್ಜಿಯಲ್ಲಿ ದಾಖಲಿಸಿದ ವಿಷಯಗಳಿಗೆ ಸಂಬಂಧಿಸಿದಂತೆ ಮಾತ್ರ ಆಕ್ಷೇಪಣೆ ಸಲ್ಲಿಸಬಹುದು. (ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ) ನಮೂದಿಸಲು ಬಿಟ್ಟು ಹೋಗಿದ್ದ / ಮರೆತು ಹೋಗಿದ್ದ ಯಾವುದೇ ಮಾಹಿತಿಗಳನ್ನು ಅಂದರೆ ಅಂಕಗಳ ವಿವರ, ಮಿಸಲಾತಿ ಪ್ರವರ್ಗ / ಗೌರವ ಶಿಕ್ಷಕರಾಗಿ / ಅರೆಕಾಲಿಕ ಶಿಕ್ಷಕರಾಗಿ / ಜನಗಣಗತಿ ಸಂಸ್ಥೆಯಲ್ಲಿ ಗುತ್ತಿಗೆ ಆಧಾರದ ಮೇಲೆ ಸೇವೆ ಸಲ್ಲಿಸಿದ ವರ್ಷಗಳ ಬಗ್ಗೆ ಮಾಹಿತಿಗಳು ಇತ್ಯಾದಿ ಆಯ್ಕೆಗೆ ಸಂಬಂಧಿಸಿದ ಮಾಹಿತಿಗಳನ್ನು ಅಥವಾ ಹೊಸದಾಗಿ ದಾಖಲಿಸಲು ಬಯಸುವ ಮಾಹಿತಿಗಳನ್ನು ಸಲ್ಲಿಸಲು ಅವಕಾಶವಿರುವುದಿಲ್ಲ. ಅಂತಹ ಆಕ್ಷೇಪಣೆ ಮತ್ತು ಲಗತ್ತುಗಳನ್ನು ಪರಿಗಣಿಸದೆ ತಿರಸ್ಕರಿಸಲಾಗುವುದು.

**14. ಅಂತಿಮ ಆಯ್ಕೆ ಪಟ್ಟಿ:–**

1) ತಾತ್ಕಾಲಿಕ ಆಯ್ಕೆಪಟ್ಟಿಯಲ್ಲಿ ಆಯ್ಕೆ ಹೊಂದಿರುವ ಎಲ್ಲಾ ಅಭ್ಯರ್ಥಿಗಳ ಮೂಲ ಅಂಕಪಟ್ಟಿ ಮತ್ತು ಪ್ರಮಾಣ ಪತ್ರಗಳನ್ನು ಪರಿಶೀಲಿಸಿ ದೃಢಪಡಿಸಿಕೊಂಡ ನಂತರ ಅಂತಿಮ ತಾತ್ಕಾಲಿಕ ಆಯ್ಕೆಪಟ್ಟಿಯನ್ನು ಪ್ರಕಟಿಸಲಾಗುವುದು. ಮೂಲ ಪ್ರಮಾಣ ಪತ್ರಗಳನ್ನು ಪರಿಶೀಲನೆಗೆ ಸಲ್ಲಿಸದೇ ಇರುವ ಅಭ್ಯರ್ಥಿಗಳು ಅಂತಿಮ ಆಯ್ಕೆಪಟ್ಟಿಯಲ್ಲಿ ಪರಿಗಣನೆಗೆ ಬರುವುದಿಲ್ಲ.

2) ಆಯ್ಕೆ ಪಟ್ಟಿಯಲ್ಲಿ ಆಯ್ಕೆಯಾದ ಅರ್ಹ ಅಭ್ಯರ್ಥಿಗಳ ಅರ್ಹತೆ ಮತ್ತು ಮೀಸಲಾತಿಗಳನ್ನು ಖಚಿತಪಡಿಸಿಕೊಂಡು ಸಂಬಂಧಿಸಿದ ಜಿಲ್ಲಾ ಉಪನಿರ್ದೇಶಕರು (ಆಡಳಿತ) ರವರು ನೇಮಕಾತಿ ಆದೇಶವನ್ನು ಕೌನ್ಸಿಲಿಂಗ್ ಮೂಲಕ ನೀಡುತ್ತಾರೆ.

**15. ನಿಬಂಧನೆಗಳು:–**

1) ಅಭ್ಯರ್ಥಿಗಳು ನಿಗದಿತ ನಮೂನೆಯಲ್ಲಿ ಮಾತ್ರ ಅರ್ಜಿಗಳನ್ನು ಭರ್ತಿಸಿ, ಸಹಿ ಮಾಡಿ ಸಲ್ಲಿಸಬೇಕು. ನಿಗದಿತ ನಮೂನೆಯಲ್ಲಿ ಇಲ್ಲದ ಅರ್ಜಿಗಳನ್ನು ತಿರಸ್ಕರಿಸಲಾಗುವುದು. ಈ ಬಗ್ಗೆ ಯಾವುದೇ ಸೂಚನೆಗಳನ್ನು ವೈಯಕ್ತಿಕವಾಗಿ ನೀಡಲಾಗುವುದಿಲ್ಲ.

2) ಮೂಲ ಅರ್ಜಿಯಲ್ಲಿ ನೀಡಿರುವ ಮಾಹಿತಿಗಳ ಬದಲಾವಣೆಗೆ ಯಾವುದೇ ಹಂತದಲ್ಲೂ ಅವಕಾಶವಿರುವುದಿಲ್ಲ.

3) ಅರ್ಜಿ ನಮೂನೆಯಲ್ಲಿ ನಿಗಧಿತ ಸ್ಥಳದಲ್ಲಿ ಎಡಗೈ ಹೆಬ್ಬೆರಳ ಗುರುತನ್ನು ಹಾಕುವುದು. ಎಡಗೈ ಹೆಬ್ಬೆರಳು ಗುರುತು ರಹಿತ ಅರ್ಜಿಯನ್ನು ಯಾವುದೇ ಸೂಚನೆ ನೀಡದೇ ತಿರಸ್ಕರಿಸಲಾಗುವುದು. ಎಡಗೈ ಹೆಬ್ಬೆರಳ ಗುರುತು ಸ್ಪಷ್ಟವಾಗಿರಬೇಕು.

4) ಅಭ್ಯರ್ಥಿಯು ಮೀಸಲಾತಿ ಮತ್ತು ಕೋರುವ ಇತರ ಯಾವುದೇ ಸೌಲಭ್ಯಗಳಿಗೆ ಸಂಬಂಧಿಸಿದಂತೆ ಎಲ್ಲಾ ಪ್ರಮಾಣ ಪತ್ರಗಳ ದೃಢೀಕೃತ ಪ್ರತಿಗಳನ್ನು ಅರ್ಜಿಯೊಡನೆ ಲಗತ್ತಿಸಬೇಕು. ಹಾಗೂ ಅದರ ವಿವರಗಳನ್ನು ಅರ್ಜಿಯಲ್ಲಿ ನೀಡಿರುವ ಸಂಬಂಧಿಸಿದ ಕಲಂಗಳಲ್ಲಿ ತಪ್ಪದೇ ನಮೂದಿಸಬೇಕು. ಒಂದು ವೇಳೆ ವಿವರಗಳನ್ನು ನಮೂದಿಸದೇ ಇದ್ದಲ್ಲಿ ಮತ್ತು ಅದರ ದಾಖಲೆಗಳನ್ನು ಲಗತ್ತಿಸದೇ ಇದ್ದಲ್ಲಿ ಅಂತಹ ಮೀಸಲಾತಿ ಮತ್ತು ಸೌಲಭ್ಯಗಳ ಕೋರಿಕೆಗಳನ್ನು ತಿರಸ್ಕರಿಸಲಾಗುವುದು. ಅರ್ಜಿಯಲ್ಲಿ ಮೀಸಲಾತಿ (ನೇರ ಮತ್ತು ಸಮತಳ) ಕಲಂಗಳನ್ನು ಭರ್ತಿಸದೇ ಹಾಗೆಯೇ ಖಾಲಿ ಬಿಟ್ಟು ಪ್ರಮಾಣಪತ್ರಗಳ ಪ್ರತಿಗಳನ್ನು ಮಾತ್ರ ಸಲ್ಲಿಸಿದ್ದಲ್ಲಿ ಅಂತಹ ಮೀಸಲಾತಿ ಸೌಲಭ್ಯಗಳನ್ನು ಅಭ್ಯರ್ಥಿಗಳಿಗೆ ನೀಡದೆ ಸಾಮನ್ಯ ಅರ್ಹತೆಯ ಅಭ್ಯರ್ಥಿ ಎಂದು ಪರಿಗಣಿಸಲಾಗುವುದು.

5) ಅಭ್ಯರ್ಥಿಯು ಉಪಯೋಗಿಸುವ ಪಾಸ್‌ಪೋರ್ಟ್ ಅಳತೆಯ ಭಾವಚಿತ್ರವು ಅಧಿಸೂಚನೆ ದಿನಾಂಕದ ನಂತರ ತೆಗೆಸಿದ್ದಾಗಿರಬೇಕು. ಎಲ್ಲಾ ಭಾವ ಚಿತ್ರಗಳೂ ಒಂದೇ ಸಮಯದಲ್ಲಿ ತೆಗೆದವುಗಳಾಗಿರಬೇಕು.

6) ಆಯ್ಕೆಯಾದ ಅಭ್ಯರ್ಥಿಯು ತಾನು ಆಯ್ಕೆಯಾಗಿ ನೇಮಕಾತಿ ಹೊಂದಿರುವ ಜೇಷ್ಟತಾ ಘಟಕ (ಜಿಲ್ಲೆ) (Unit of Seniority)ದಲ್ಲಿ ಕಡ್ಡಾಯವಾಗಿ ಸೇವೆ ಸಲ್ಲಿಸತಕ್ಕದ್ದು.

7) ಭರ್ತಿ ಮಾಡಿದ ಅರ್ಜಿಗಳನ್ನು ಅನ್ವಯಿಸುವ ವಿದ್ಯಾರ್ಹತೆ ಪರೀಕ್ಷೆಗಳ ಅಂಕಪಟ್ಟಿ ಮತ್ತು ಇತರೆ ಎಲ್ಲಾ ಮಾಹಿತಿಗಳನ್ನು ನಮೂದಿಸಿ ನಿಗಧಿತ ದಿನಾಂಕವಾದ 08/07/2009 ರ ಸಂಜೆ 05–30 ರೊಳಗೆ ಅಥವಾ ಅದಕ್ಕೂ ಮುಂಚಿತವಾಗಿ ತಲುಪುವಂತೆ ಆಯ್ಕೆ ಪ್ರಾಧಿಕಾರದ ವ್ಯಾಪ್ತಿಯಲ್ಲಿನ ಜಿಲ್ಲಾ ಉಪನಿರ್ದೇಶಕರ ಕಛೇರಿಗೆ ಖುದ್ದಾಗಿ ಸಲ್ಲಿಸಿ ಸ್ವೀಕೃತಿ ಪಡೆಯತಕ್ಕದ್ದು. ಕೊನೆಯ ದಿನಾಂಕ ಮತ್ತು ವೇಳೆ ನಂತರ ಸಲ್ಲಿಸುವ, ಅಥವಾ ಅಂಚೆಯಲ್ಲಿ ಬರುವ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

8) ಅರ್ಜಿ ಸಲ್ಲಿಸುವ ಕೊನೆಯ ದಿನಾಂಕ ಹಾಗೂ ವೇಳೆಯು ಎಲ್ಲಾ ಅಭ್ಯರ್ಥಿಗಳಿಗೂ ಮತ್ತು ಸೇವೆಯಲ್ಲಿರುವ ಅಭ್ಯರ್ಥಿಗಳಿಗೂ ಸಹ ಅನ್ವಯಿಸುತ್ತದೆ.

9) ಅಭ್ಯರ್ಥಿಯು ಯಾವುದೇ ಸರ್ಕಾರಿ ಇಲಾಖೆಯಲ್ಲಿ ಖಾಯಂ ನೌಕರಿಯಲ್ಲಿದ್ದರೆ ಅವನು/ಳು ತಾನು ಸೇವೆ ಸಲ್ಲಿಸುತ್ತಿರುವ ಹುದ್ದೆಯ ನೇಮಕಾತಿ ಪ್ರಾಧಿಕಾರಿಯವರ ಸಮ್ಮತಿ ಇಲ್ಲದೇ ಅಥವಾ ಇಲಾಖಾ ಮುಖಾಂತರ ಅರ್ಜಿಯನ್ನು ಸಲ್ಲಿಸದೇ ಇದ್ದಲ್ಲಿ ಅಂತಹ ಅಭ್ಯರ್ಥಿ ನೇಮಕಾತಿಗೆ ಅರ್ಹರಾಗುವುದಿಲ್ಲ.

10) ಭರ್ತಿ ಮಾಡಿದ ಅರ್ಜಿಯನ್ನು ಸಂಬಂಧಿಸಿದ ಸ್ವಯಂ ದೃಢೀಕೃತ ಜೆರಾಕ್ಸ್ ಪ್ರತಿಗಳ ಲಗತ್ತುಗಳೊಂದಿಗೆ ದಿನಾಂಕ 08/07/2009 ರಂದು ಸಾಯಂಕಾಲ 5–30 ಗಂಟೆಯೊಳಗೆ ಅಥವಾ ಅದಕ್ಕೂ ಮುಂಚಿತವಾಗಿ ಜಿಲ್ಲಾ ಉಪನಿರ್ದೇಶಕರ (ಆಡಳಿತ) ಕಚೇರಿಗೆ ಖುದ್ದಾಗಿ ಸಲ್ಲಿಸಿ ಸ್ವೀಕೃತಿಯನ್ನು ಪಡೆದಿರಬೇಕು. ನಿಗದಿತ ದಿನಾಂಕ ಮತ್ತು ವೇಳೆಯ ನಂತರ ಬರುವ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

11) ಯಾವುದೇ ವ್ಯಕ್ತಿಯು ಸರ್ಕಾರಿ ನೇಮಕಾತಿಗೆ ಈ ಕೆಳಕಂಡ ಸಂದರ್ಭದಲ್ಲಿ ಅರ್ಹನಾಗುವುದಿಲ್ಲ.

8) ಯಾವುದೇ ನಿಷೇಧಿತ ಸಂಘ ಸಂಸ್ಥೆಯ ಸದಸ್ಯನಾಗಿರುವಲ್ಲಿ ಅಥವಾ ಸದಸ್ಯರಾಗಿದ್ದಲ್ಲಿ ಅಥವಾ ಯಾವುದೇ ನಿಷೇಧಿತ ಸಂಸ್ಥೆಯ ಕಾರ್ಯ ಚಟುವಟಿಕೆಯಲ್ಲಿ ಸಕ್ರಿಯವಾಗಿ ಭಾಗವಹಿಸಿದ್ದಲ್ಲಿ.

9) ಭಾರತ ಸಂವಿಧಾನಕ್ಕೆ ಚ್ಯುತಿ ತರುವ ಕಾರ್ಯದಲ್ಲಿ ಪ್ರವೃತ್ತನಾದಲ್ಲಿ.

10) ಕಾನೂನು ಭಂಗ ಮಾಡಿ ಹಿಂಸಾಕೃತ್ಯದಲ್ಲಿ ತೊಡಗಿದವರಾಗಿದ್ದರೆ.

11) ಭಾರತ ದೇಶದ ಸಾರ್ವಭೌಮ ಹಾಗೂ ಸುಭದ್ರತೆಗೆ ಧಕ್ಕೆ ತರುವ ಕಾರ್ಯದಲ್ಲಿ ಪ್ರವೃತ್ತರಾಗಿದ್ದರೆ.

12) ಭಾರತ ಸರ್ಕಾರದ ಅಥವಾ ಯಾವುದೇ ರಾಜ್ಯ ಸರ್ಕಾರದ ಸೇವೆಯಿಂದ ಉಚ್ಚಾಟನೆಗೊಂಡ ಪ್ರಸಂಗಗಳಲ್ಲಿ.

13) ನ್ಯಾಯಬಾಹಿರ ಕೃತ್ಯಗಳಲ್ಲಿ ತೊಡಗಿ ಅಪರಾಧಕ್ಕೆ ಒಳಗಾದ ಪ್ರಸಂಗಗಳಲ್ಲಿ.

14) ಒಬ್ಬ ಜೀವಂತ ಪತ್ನಿಗಿಂತ ಹೆಚ್ಚು ಮಂದಿ ಪತ್ನಿಯರನ್ನು ಹೊಂದಿರುವ ಪುರುಷ ಅಭ್ಯರ್ಥಿಯು ಮತ್ತು ಈಗಾಗಲೇ ಇನ್ನೊಬ್ಬ ಹೆಂಡತಿಯಿರುವ ವ್ಯಕ್ತಿಯನ್ನು ಮದುವೆಯಾಗಿರುವ ಮಹಿಳಾ ಅಭ್ಯರ್ಥಿಯು ಸರ್ಕಾರದಿಂದ ಪೂರ್ವಾನುಮತಿಯನ್ನು ಪಡೆಯದೆ ನೇಮಕಾತಿಗೆ ಅರ್ಹರಾಗುವುದಿಲ್ಲ.

12) ಅಭ್ಯರ್ಥಿಯು ಮತ್ತೊಬ್ಬ ವ್ಯಕ್ತಿಯಂತೆ ನಟಿಸಿ ವಂಚಿಸಿದ ಅಥವಾ ದಾಖಲೆಗಳನ್ನು ತಿದ್ದಿದ ಅಥವಾ ಸೃಷ್ಟಿಸಿದ ಅಥವಾ ಸರಿಯಿಲ್ಲದ ಅಥವಾ ಸುಳ್ಳು ಅಥವಾ ದೋಷಪೂರ್ಣ ವಿವರಗಳನ್ನು ನೀಡುವ ಅಥವಾ ಅವನ/ಅವಳ ನೇಮಕಾತಿಗಾಗಿ ಸಂಬಂಧಿಸಿದಂತೆ ಯಾವುದೇ ಇತರ ಅಕ್ರಮ ಅನುಚಿತ ವಿಧಾನಗಳನ್ನು ಅನುಸರಿಸಿದ ಕಾರಣದಿಂದಾಗಿ ತಪ್ಪಿತಸ್ಥನೆಂದು ಕಂಡು ಬಂದಲ್ಲಿ ಅವನ/ಅವಳ ಅಭ್ಯರ್ಥಿತನವನ್ನು ಯಾವುದೇ ಸೂಚನೆ ನೀಡದೆ ರದ್ದುಗೊಳಿಸಲಾಗುವುದು ಮತ್ತು ಅಂತಹವರನ್ನು ಕ್ರಿಮಿನಲ್ ಪ್ರಾಸಿಕ್ಯೂಷನ್‌ಗೆ ಮತ್ತು ಶಿಸ್ತು ಕ್ರಮಕ್ಕೆ ಒಳಪಡಿಸಲಾಗುವುದು.

13) ಅರ್ಜಿ ಜೊತೆಗೆ ದೃಢೀಕರಿಸಲ್ಪಟ್ಟ ಎಲ್ಲಾ ಅಂಕಪಟ್ಟಿಗಳು, ಮೀಸಲಾತಿ ಹಾಗೂ ಇತರೆ ಪತ್ರಗಳ ಪ್ರತ್ರಿಗಳನ್ನು ಲಗತ್ತಿಸಬೇಕು.

14) ಅರ್ಹತಾ ಪರೀಕ್ಷೆಗಳಲ್ಲಿ ಪಡೆದಿರುವ ಅಂಕಗಳ ಆಧಾರದ ಮೇಲೆ ಆಯ್ಕೆ ಮಾಡಿದ ಆಯ್ಕೆಪಟ್ಟಿಯಲ್ಲಿ ಅವನ/ ಅವಳ ಆಯ್ಕೆಯು ಖಾಯಂ ಆಗದ ಹೊರತು ನೇಮಕಾತಿಗಾಗಿ ಹಕ್ಕನ್ನು ಪಡೆದುಕೊಳ್ಳುವುದಿಲ್ಲ.

15) ಈ ನೇಮಕಾತಿಯು, ಮತ್ತು ಈ ಅಧಿಸೂಚನೆಯಲ್ಲಿ ತಿಳಿಸಿರುವ ಆದೇಶಗಳು, ಜ್ಞಾಪನಗಳು, ಸುತ್ತೋಲೆಗಳು ಕಾಲದಿಂದ ಕಾಲಕ್ಕೆ ಹೊರಡಿಸಿರುವ ಆದೇಶಗಳು ಮತ್ತು ತಿದ್ದುಪಡಿಗೆ ಒಳಪಟ್ಟಿರುತ್ತದೆ.

**16) ಅಭ್ಯರ್ಥಿಗಳು ಅರ್ಜಿ ಸಲ್ಲಿಸುವ ಸಮಯದಲ್ಲಿ ಅರ್ಜಿಯೊಂದಿಗೆ ವಿದ್ಯಾರ್ಹತೆಗಳ ಎಲ್ಲಾ ವರ್ಷಗಳ, ಎಲ್ಲಾ ಪ್ರಯತ್ನಗಳ ಅಂಕಪಟ್ಟಿಗಳು, ಹಾಗೂ ಆ ಪರೀಕ್ಷೆಗಳ ತೇರ್ಗಡೆ ಪ್ರಮಾಣ ಪತ್ರಗಳು, ವಯಸ್ಸಿನ ದೃಢೀಕರಣದ ಬಗ್ಗೆ ಎಸ್.ಎಸ್.ಎಲ್.ಸಿ ಅಂಕಪಟ್ಟ, ಮೀಸಲಾತಿ ಪ್ರಮಾಣ ಪತ್ರಗಳು ಅರೆಕಾಲಿಕ, ಗೌರವ ಶಿಕ್ಷಕ, ಜನಗಣತಿ ಸಂಸ್ಥೆಯಲ್ಲಿ ಸೇವೆ ಸಲ್ಲಿಸುತ್ತಿರುವ/ ಸಲ್ಲಿಸಿರುವ ಬಗ್ಗೆ ಸೇವಾ ದೃಢೀಕರಣ ಪ್ರಮಾಣ ಪತ್ರಗಳ ಪ್ರತಿಗಳನ್ನು (ನಮೂನೆಗಳ ಮಾದರಿಯನ್ನು ಅರ್ಜಿ–ಸಹಿತ–ಮಾಹಿತಿ ಪುಸ್ತಕದಲ್ಲಿ ನೀಡಲಾಗಿದೆ) ಅಭ್ಯರ್ಥಿಗಳಿಗೆ ಅನ್ವಯಿಸುವ ಅವಶ್ಯಕತೆಗೆ ಅನುಗುಣವಾಗಿ ತಪ್ಪದೇ ಲಗತ್ತಿಸುವುದು. ಈ ಲಗತ್ತುಗಳನ್ನು ಅರ್ಜಿ ಸ್ವೀಕರಿಸಲು ನಿಗಧಿಪಡಿಸಿರುವ ಕೊನೆಯ ದಿನಾಂಕ ಮತ್ತು ಸಮಯದೊಳಗೆ ಅರ್ಜಿ ಜೊತೆಯಲ್ಲಿ ತಪ್ಪದೇ ಲಗತ್ತಿಸಿರಬೇಕು. ಇವುಗಳನ್ನು ಅರ್ಜಿ ಜೊತೆ ಸಲ್ಲಿಸಲು ಸಾಧ್ಯವಾಗಲಿಲ್ಲವೆಂದು ತಿಳಿಸಿ, ತಾತ್ಕಾಲಿಕ ಪಟ್ಟಿ ಪ್ರಕಟಿಸಿದ ನಂತರ ಆಕ್ಷೇಪಣೆಯೊಂದಿಗೆ ಸಲ್ಲಿಸಲು ಅವಕಾಶವಿಲ್ಲ. ಅಂತಹ ಆಕ್ಷೇಪಣೆಗಳನ್ನು ತಿರಸ್ಕರಿಸಲಾಗುವುದು.**

17) ಹೆಚ್ಚಿನ ಮಾಹಿತಿಗಾಗಿ ಮಾಹಿತಿ ಪುಸ್ತಕವನ್ನು ಅವಲೋಕಿಸಬಹುದು, ಅಥವಾ ಆಯ್ಕೆಪ್ರಾಧಿಕಾರಿಗಳನ್ನು ಅಥವಾ ಸಂಬಂಧಿಸಿದ ಜಿಲ್ಲಾ ಉಪನಿರ್ದೇಶಕರು (ಆಡಳಿತ) ರವರನ್ನು ಸಂಪರ್ಕಿಸಬಹುದು.

| 2009–10ನೇ ಸಾಲಿನಲ್ಲಿ ನೇಮಕಾತಿಗಾಗಿ ಪ್ರೌಢ ಶಾಲಾ ಸಂಗೀತ ಶಿಕ್ಷಕ ಗ್ರೇಡ್–2 (ಹಾಡುಗಾರಿಕೆ) ಜಿಲ್ಲಾವಾರು ಹುದ್ದೆಗಳ ಸಂಖ್ಯೆ | | |
|---|---|---|
| ಕ್ರ ಸಂ. | ಜಿಲ್ಲೆ | ಹುದ್ದೆಗಳ ಸಂಖ್ಯೆ |
| 1 | ಬೆಳಗಾವಿ | 04 |
| 2 | ಚಿಕ್ಕೋಡಿ | 08 |
| 3 | ಬಾಗಲಕೋಟ | 10 |
| 4 | ಬಿಜಾಪೂರ | 08 |
| 5 | ಧಾರವಾಡ | 08 |
| 6 | ಗದಗ | 03 |
| 7 | ಹಾವೇರಿ | 08 |
| 8 | ಕಾರವಾರ | 11 |
| | ಒಟ್ಟು | 60 |

**ಕುಮುದಿನಿ ಅ. ಭೈರಣ್ಣವರ್**
ಆಯ್ಕೆ ಪ್ರಾಧಿಕಾರಿ ಹಾಗೂ ವಿಭಾಗೀಯ ಕಾರ್ಯದರ್ಶಿಗಳು
ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ ಮತ್ತು
ಪದನಿಮಿತ್ತ ಸಹ ನಿರ್ದೇಶಕರು, ಸಾ.ಶಿ.ಇ., ಬೆಳಗಾವಿ ವಿಭಾಗ, ಬೆಳಗಾವಿ.

**ಅನುಬಂಧ**

2009–10ನೇ ಸಾಲಿಗಾಗಿ ಬೆಳಗಾವಿ ವಿಭಾಗದ ಬೆಳಗಾವಿ ಜಿಲ್ಲೆಯ ಪ್ರೌಢ ಶಾಲೆಗಳಲ್ಲಿ ಸಂಗೀತ ಶಿಕ್ಷಕರ ಹುದ್ದೆಗಳಿಗೆ ನೇರ ನೇಮಕಾತಿಗಾಗಿ ರೋಸ್ಟರ್

**<u>ಬೆಳಗಾವಿ ಜಿಲ್ಲೆ</u>**

| ಜಿಲ್ಲೆ | ವಿಷಯ | ಒಟ್ಟು ಹುದ್ದೆಗಳು | | ಪ.ಜಾ | ಪ. ಪಂ | ಪ್ರ–1 | 2ಎ | 2ಬಿ | 3ಎ | 3ಬಿ | ಸಾ.ಅ | ಒಟ್ಟು |
|---|---|---|---|---|---|---|---|---|---|---|---|---|
| ಬೆಳಗಾವಿ | ಸಂಗೀತ | 04 | **ಇತರೆ** | 1 | 1 | – | – | – | – | – | 1 | 3 |
| | | | ಗ್ರಾಮೀಣ | – | – | – | – | – | – | – | – | **0** |
| | | | ಕ.ಮಾ.ಅ. | – | – | – | – | – | – | – | – | **0** |
| | | | ಯೋ.ಅ. | – | – | – | – | – | – | – | – | **0** |
| | | | ಮಾ.ಸೈ. | – | – | – | – | – | – | – | – | **0** |
| | | | ಅಂ.ವಿ. | – | – | – | – | – | – | – | – | **0** |
| | | | ಮ.ಅ. | – | – | – | – | – | – | – | 1 | **1** |
| | | | **ಒಟ್ಟು** | **1** | **1** | – | **0** | **0** | **0** | **0** | **2** | **4** |

**<u>ಸರಕಾರಿ ಆದೇಶ ದಿನಾಂಕ 04/01/2008 ರ ಸಮತಳ ಮೀಸಲಾತಿ ಪ್ರಕಾರ ಹುದ್ದೆಗಳನ್ನು ಅಧಿಸೂಚಿಸಲಾಗಿದೆ.</u>**

2009–10ನೇ ಸಾಲಿಗಾಗಿ ಬೆಳಗಾವಿ ವಿಭಾಗದಲ್ಲಿ ಚಿಕ್ಕೋಡಿ ಜಿಲ್ಲೆಯ ಪ್ರೌಢ ಶಾಲೆಗಳಲ್ಲಿ ಸಂಗೀತ ಶಿಕ್ಷಕರ ಹುದ್ದೆಗಳಿಗೆ ನೇರ ನೇಮಕಾತಿಗಾಗಿ ರೋಸ್ಟರ್

**<u>ಚಿಕ್ಕೋಡಿ ಜಿಲ್ಲೆ</u>**

| ಜಿಲ್ಲೆ | ವಿಷಯ | ಒಟ್ಟು ಹುದ್ದೆಗಳು | | ಪ.ಜಾ | ಪ. ಪಂ | ಪ್ರ–1 | 2ಎ | 2ಬಿ | 3ಎ | 3ಬಿ | ಸಾ.ಅ | ಒಟ್ಟು |
|---|---|---|---|---|---|---|---|---|---|---|---|---|
| ಚಿಕ್ಕೋಡಿ | ಸಂಗೀತ | 08 | **ಇತರೆ** | 1 | 1 | 1 | 1 | – | – | – | 1 | 5 |
| | | | ಗ್ರಾಮೀಣ | – | – | – | – | – | – | – | 1 | **1** |
| | | | ಕ.ಮಾ.ಅ. | – | – | – | – | – | – | – | – | **0** |
| | | | ಯೋ.ಅ. | – | – | – | – | – | – | – | – | **0** |
| | | | ಮಾ.ಸೈ. | – | – | – | – | – | – | – | – | **0** |
| | | | ಅಂ.ವಿ. | – | – | – | – | – | – | – | 1 | **1** |
| | | | ಮ.ಅ. | – | – | – | – | – | – | – | 1 | **1** |
| | | | **ಒಟ್ಟು** | **1** | **1** | **1** | **1** | **0** | **0** | **0** | **4** | **08** |

**ಸರಕಾರಿ ಆದೇಶ ದಿನಾಂಕ 04/01/2008 ರ ಸಮತಳ ಮೀಸಲಾತಿ ಪ್ರಕಾರ ಹುದ್ದೆಗಳನ್ನು ಅಧಿಸೂಚಿಸಲಾಗಿದೆ.**

2009–10ನೇ ಸಾಲಿಗಾಗಿ ಬೆಳಗಾವಿ ವಿಭಾಗದ ಬಾಗಲಕೋಟ ಜಿಲ್ಲೆಯ ಪ್ರೌಢ ಶಾಲೆಗಳಲ್ಲಿ ಸಂಗೀತ ಶಿಕ್ಷಕರ ಹುದ್ದೆಗಳಿಗೆ ನೇರ ನೇಮಕಾತಿಗಾಗಿ ರೋಸ್ಟರ್

**ಬಾಗಲಕೋಟ ಜಿಲ್ಲೆ**

| ಜಿಲ್ಲೆ | ವಿಷಯ | ಒಟ್ಟು ಹುದ್ದೆಗಳು | | ಪ.ಜಾ | ಪ. ಪಂ | ಪ್ರ–1 | 2ಎ | 2ಬಿ | 3ಎ | 3ಬಿ | ಸಾ.ಅ | ಒಟ್ಟು |
|---|---|---|---|---|---|---|---|---|---|---|---|---|
| **ಬಾಗಲಕೋಟೆ** | **ಸಂಗೀತ** | **10** | **ಇತರೆ** | 1 | 1 | 1 | 1 | – | – | – | 1 | 5 |
| | | | ಗ್ರಾಮೀಣ | – | – | – | – | – | – | – | 1 | **1** |
| | | | ಕ.ಮಾ.ಅ. | – | – | – | – | – | – | – | – | **0** |
| | | | ಯೋ.ಅ. | – | – | – | – | – | – | – | – | **0** |
| | | | ಮಾ.ಸೈ. | – | – | – | – | – | – | – | – | **0** |
| | | | ಅಂ.ವಿ. | – | – | – | – | – | – | – | 1 | **1** |
| | | | ಮ.ಅ. | 1 | – | – | – | – | – | – | 2 | **3** |
| | | | **ಒಟ್ಟು** | **2** | **1** | **1** | **1** | **–** | **–** | **–** | **5** | **10** |

**ಸರಕಾರಿ ಆದೇಶ ದಿನಾಂಕ 04/01/2008 ರ ಸಮತಳ ಮೀಸಲಾತಿ ಪ್ರಕಾರ ಹುದ್ದೆಗಳನ್ನು ಅಧಿಸೂಚಿಸಲಾಗಿದೆ.**

2009–10ನೇ ಸಾಲಿಗಾಗಿ ಬೆಳಗಾವಿ ವಿಭಾಗದ ಬಿಜಾಪೂರ ಜಿಲ್ಲೆಯ ಪ್ರೌಢ ಶಾಲೆಗಳಲ್ಲಿ ಸಂಗೀತ ಶಿಕ್ಷಕರ ಹುದ್ದೆಗಳಿಗೆ ನೇರ ನೇಮಕಾತಿಗಾಗಿ ರೋಸ್ಟರ್

**ಬಿಜಾಪೂರ ಜಿಲ್ಲೆ**

| ಜಿಲ್ಲೆ | ವಿಷಯ | ಒಟ್ಟು ಹುದ್ದೆಗಳು | | ಪ.ಜಾ | ಪ. ಪಂ | ಪ್ರ–1 | 2ಎ | 2ಬಿ | 3ಎ | 3ಬಿ | ಸಾ.ಅ | ಒಟ್ಟು |
|---|---|---|---|---|---|---|---|---|---|---|---|---|
| **ಬಿಜಾಪೂರ** | **ಸಂಗೀತ** | **08** | **ಇತರೆ** | 1 | 1 | 1 | 1 | – | – | – | 1 | 5 |
| | | | ಗ್ರಾಮೀಣ | – | – | – | – | – | – | – | 1 | **1** |
| | | | ಕ.ಮಾ.ಅ. | – | – | – | – | – | – | – | – | **0** |
| | | | ಯೋ.ಅ. | – | – | – | – | – | – | – | – | **0** |
| | | | ಮಾ.ಸೈ. | – | – | – | – | – | – | – | – | **0** |
| | | | ಅಂ.ವಿ. | – | – | – | – | – | – | – | 1 | **1** |
| | | | ಮ.ಅ. | – | – | – | – | – | – | – | 1 | **1** |
| | | | **ಒಟ್ಟು** | **1** | **1** | **1** | **1** | **0** | **0** | **0** | **4** | **8** |

**ಸರಕಾರಿ ಆದೇಶ ದಿನಾಂಕ 04/01/2008 ರ ಸಮತಳ ಮೀಸಲಾತಿ ಪ್ರಕಾರ ಹುದ್ದೆಗಳನ್ನು ಅಧಿಸೂಚಿಸಲಾಗಿದೆ.**

2009–10ನೇ ಸಾಲಿಗಾಗಿ ಬೆಳಗಾವಿ ವಿಭಾಗದ ಧಾರವಾಡ ಜಿಲ್ಲೆಯ ಧಾರವಾಡ ಪ್ರೌಢ ಶಾಲೆಗಳಲ್ಲಿ ಸಂಗೀತ ಶಿಕ್ಷಕರ ಹುದ್ದೆಗಳಿಗೆ ನೇರ ನೇಮಕಾತಿಗಾಗಿ ರೋಸ್ಟರ್

**ಧಾರವಾಡ ಜಿಲ್ಲೆ**

| ಜಿಲ್ಲೆ | ವಿಷಯ | ಒಟ್ಟು ಹುದ್ದೆಗಳು | | ಪ.ಜಾ | ಪ. ಪಂ | ಪ್ರ–1 | 2ಎ | 2ಬಿ | 3ಎ | 3ಬಿ | ಸಾ.ಅ | ಒಟ್ಟು |
|---|---|---|---|---|---|---|---|---|---|---|---|---|
| **ಧಾರವಾಡ** | **ಸಂಗೀತ** | **08** | **ಇತರೆ** | 1 | 1 | 1 | 1 | – | – | – | 1 | 5 |
| | | | ಗ್ರಾಮೀಣ | – | – | – | – | –– | – | – | 1 | **1** |
| | | | ಕ.ಮಾ.ಅ. | – | – | – | – | – | –– | – | – | **0** |
| | | | ಯೋ.ಅ. | – | – | – | – | – | – | – | – | **0** |
| | | | ಮಾ.ಸೈ. | – | – | – | – | – | –– | – | – | **0** |
| | | | ಅಂ.ವಿ. | – | – | – | – | – | – | – | 1 | **1** |
| | | | ಮ.ಅ. | – | – | – | – | – | –– | – | 1 | **1** |
| | | | **ಒಟ್ಟು** | **1** | **1** | **1** | **1** | **0** | **0** | **0** | **4** | **8** |

**ಸರಕಾರಿ ಆದೇಶ ದಿನಾಂಕ 04/01/2008 ರ ಸಮತಳ ಮೀಸಲಾತಿ ಪ್ರಕಾರ ಹುದ್ದೆಗಳನ್ನು ಅಧಿಸೂಚಿಸಲಾಗಿದೆ.**

2009–10ನೇ ಸಾಲಿಗಾಗಿ ಬೆಳಗಾವಿ ವಿಭಾಗದ ಗದಗ ಜಿಲ್ಲೆಯ ಪ್ರೌಢ ಶಾಲೆಗಳಲ್ಲಿ ಸಂಗೀತ ಶಿಕ್ಷಕರ ಹುದ್ದೆಗಳಿಗೆ ನೇರ ನೇಮಕಾತಿಗಾಗಿ ರೋಸ್ಟರ್

**ಗದಗ ಜಿಲ್ಲೆ**

| ಜಿಲ್ಲೆ | ವಿಷಯ | ಒಟ್ಟು ಹುದ್ದೆಗಳು | | ಪ.ಜಾ | ಪ.ಪಂ | ಪ್ರ–1 | 2ಎ | 2ಬಿ | 3ಎ | 3ಬಿ | ಸಾ.ಅ | ಒಟ್ಟು |
|---|---|---|---|---|---|---|---|---|---|---|---|---|
| **ಗದಗ** | **ಸಂಗೀತ** | **03** | **ಇತರೆ** | 1 | 1 | – | – | – | – | – | 1 | 3 |
| | | | ಗ್ರಾಮೀಣ | – | – | – | – | – | – | – | – | **0** |
| | | | ಕ.ಮಾ.ಅ. | – | – | – | – | – | – | – | – | **0** |
| | | | ಯೋ.ಅ. | – | – | – | – | – | – | – | – | **0** |
| | | | ಮಾ.ಸೈ. | – | – | – | – | – | – | – | – | **0** |
| | | | ಅಂ.ವಿ. | – | – | – | – | – | – | – | – | **0** |
| | | | ಮ.ಅ. | – | – | – | – | – | – | – | – | **0** |
| | | | **ಒಟ್ಟು** | **1** | **1** | **0** | **0** | **0** | **0** | **0** | **1** | **3** |

**ಸರಕಾರಿ ಆದೇಶ ದಿನಾಂಕ 04/01/2008 ರ ಸಮತಳ ಮೀಸಲಾತಿ ಪ್ರಕಾರ ಹುದ್ದೆಗಳನ್ನು ಅಧಿಸೂಚಿಸಲಾಗಿದೆ.**

2009–10ನೇ ಸಾಲಿಗಾಗಿ ಬೆಳಗಾವಿ ವಿಭಾಗದ ಹಾವೇರಿ ಜಿಲ್ಲೆಯ ಹಾವೇರಿ ಪ್ರೌಢ ಶಾಲೆಗಳಲ್ಲಿ ಸಂಗೀತ ಶಿಕ್ಷಕರ ಹುದ್ದೆಗಳಿಗೆ ನೇರ ನೇಮಕಾತಿಗಾಗಿ ರೋಸ್ಟರ್

**ಹಾವೇರಿ ಜಿಲ್ಲೆ**

| ಜಿಲ್ಲೆ | ವಿಷಯ | ಒಟ್ಟು ಹುದ್ದೆಗಳು | | ಪ.ಜಾ | ಪ.ಪಂ | ಪ್ರ–1 | 2ಎ | 2ಬಿ | 3ಎ | 3ಬಿ | ಸಾ.ಅ | ಒಟ್ಟು |
|---|---|---|---|---|---|---|---|---|---|---|---|---|
| **ಹಾವೇರಿ** | **ಸಂಗೀತ** | **08** | **ಇತರೆ** | 1 | 1 | 1 | 1 | – | – | – | 1 | 5 |
| | | | ಗ್ರಾಮೀಣ | – | – | – | – | – | – | – | 1 | **1** |
| | | | ಕ.ಮಾ.ಅ. | – | – | – | – | – | – | – | – | **0** |
| | | | ಯೋ.ಅ. | – | – | – | – | – | – | – | – | **0** |
| | | | ಮಾ.ಸೈ. | – | – | – | – | – | – | – | – | **0** |
| | | | ಅಂ.ವಿ. | – | – | – | – | – | – | – | 1 | **1** |
| | | | ಮ.ಅ. | – | – | – | – | – | – | – | 1 | **1** |
| | | | **ಒಟ್ಟು** | **1** | **1** | **1** | **1** | **0** | **0** | **0** | **4** | **08** |

**ಸರಕಾರಿ ಆದೇಶ ದಿನಾಂಕ 04/01/2008 ರ ಸಮತಳ ಮೀಸಲಾತಿ ಪ್ರಕಾರ ಹುದ್ದೆಗಳನ್ನು ಅಧಿಸೂಚಿಸಲಾಗಿದೆ.**

2009–10ನೇ ಸಾಲಿಗಾಗಿ ಬೆಳಗಾವಿ ವಿಭಾಗದಲ್ಲಿ ಪ್ರೌಢ ಶಾಲೆಗಳಲ್ಲಿ ಸಂಗೀತ ಶಿಕ್ಷಕರ ಹುದ್ದೆಗಳಿಗೆ ನೇರ ನೇಮಕಾತಿಗಾಗಿ ರೋಸ್ಟರ್

**ಕಾರವಾರ ಜಿಲ್ಲೆ**

| ಜಿಲ್ಲೆ | ವಿಷಯ | ಒಟ್ಟು ಹುದ್ದೆಗಳು | | ಪ.ಜಾ | ಪ.ಪಂ | ಪ್ರ–1 | 2ಎ | 2ಬಿ | 3ಎ | 3ಬಿ | ಸಾ.ಅ | ಒಟ್ಟು |
|---|---|---|---|---|---|---|---|---|---|---|---|---|
| **ಕಾರವಾರ** | **ಸಂಗೀತ** | **11** | **ಇತರೆ** | 1 | 1 | 1 | 1 | 1 | – | – | 1 | 6 |
| | | | ಗ್ರಾಮೀಣ | – | – | – | – | – | – | – | 1 | **1** |
| | | | ಕ.ಮಾ.ಅ. | – | – | – | – | – | – | – | – | **0** |
| | | | ಯೋ.ಅ. | – | – | – | – | – | – | – | – | **0** |
| | | | ಮಾ.ಸೈ. | – | – | – | – | – | – | – | – | **0** |
| | | | ಅಂ.ವಿ. | – | – | – | – | – | – | – | 1 | **1** |
| | | | ಮ.ಅ. | 1 | – | – | – | – | – | – | 2 | **3** |
| | | | **ಒಟ್ಟು** | **2** | **1** | **1** | **1** | **1** | **0** | **0** | **5** | **11** |

**ಸರಕಾರಿ ಆದೇಶ ದಿನಾಂಕ 04/01/2008 ರ ಸಮತಳ ಮೀಸಲಾತಿ ಪ್ರಕಾರ ಹುದ್ದೆಗಳನ್ನು ಅಧಿಸೂಚಿಸಲಾಗಿದೆ.**

**ಕುಮುದಿನಿ ಅ. ಭೈರಣ್ಣವರ್**
ಆಯ್ಕೆ ಪ್ರಾಧಿಕಾರಿ ಹಾಗೂ ವಿಭಾಗೀಯ ಕಾರ್ಯದರ್ಶಿಗಳು
ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ ಮತ್ತು
ಪದನಿಮಿತ್ತ ಸಹ ನಿರ್ದೇಶಕರು, ಸಾ.ಶಿ.ಇ., ಬೆಳಗಾವಿ ವಿಭಾಗ, ಬೆಳಗಾವಿ.

**ಸಾರ್ವಜನಿಕ ಶಿಕ್ಷಣ ಇಲಾಖೆ**

**ಆಯ್ಕೆ ಪ್ರಾಧಿಕಾರಿ ಹಾಗೂ ವಿಭಾಗೀಯ ಕಾರ್ಯದರ್ಶಿಗಳು, ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ ಮತ್ತು ಪದನಿಮಿತ್ತ ಸಹನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಆಯುಕ್ತಾಲಯ, ಗುಲ್ಬರ್ಗಾ ಇವರ ಕಾರ್ಯಾಲಯ**

**ನೇಮಕಾತಿ ಅಧಿಸೂಚನೆ**

**ಸಂಖ್ಯೆ: ಇ–1(ಎ)/ಆಡಳಿತ/ಪ್ರೌ.ಶಾಶಿ/ಆಯ್ಕೆ/99/2009–10, ದಿನಾಂಕ: 18ನೇ ಮೇ, 2009**

**(ಅರ್ಜಿ ಸ್ವೀಕರಿಸಲು ಕೊನೆಯ ದಿನಾಂಕ: 08–07–2009)**

**ವಿಷಯ :–** 2009–10ನೇ ಸಾಲಿನಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆ, ಗುಲ್ಬರ್ಗಾ ವಿಭಾಗ, ಮಟ್ಟದಲ್ಲಿ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯ ಮೂಲಕ ಪ್ರೌಢ ಶಾಲಾ ಸಹಾಯಕ ಶಿಕ್ಷಕರು (ಗ್ರೇಡ್–2) ಹಾಗೂ ದೈಹಿಕ ಶಿಕ್ಷಣ ಶಿಕ್ಷಕರು (ಗ್ರೇಡ್–1) ವೃಂದದ ಶಿಕ್ಷಕರನ್ನು ನೇರ ನೇಮಕಾತಿ ಮೂಲಕ ಆಯ್ಕೆ ಮಾಡುವ ಕುರಿತು.

**ಉಲ್ಲೇಖ :–**

1) ದಿನಾಂಕ 22.02.1967, 21.10.1991, ಮತ್ತು 24.06.2003ರ ಇಲಾಖಾ ನೇಮಕಾತಿ ನಿಯಮಗಳು.
2) ಸರ್ಕಾರದ ಆದೇಶ ಸಂಖ್ಯೆ: ಸಿ.ಆ.ಸು.ಇ 08 ಸಹಿಮ 95, ದಿನಾಂಕ: 20.06.1995 (ಅನುಬಂಧ–1 ಮತ್ತು 2).
3) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 28 ಸೇನೇನಿ 95, ದಿ. 19.8.95.
4) ಸರ್ಕಾರದ ಆದೇಶ ಸಂಖ್ಯೆ: ಡಿಪಿಎಆರ್ 34 ಎಸ್‌ಆರ್‌ಆರ್ 95, ದಿ. 06.03.1996.
5) ಸರ್ಕಾರದ ಆದೇಶ ಸಂಖ್ಯೆ: ಇಡಿ 93 ಎಸ್‌ಎಲ್‌ಬಿ 97, ದಿ. 31.01.97.
6) ಸರ್ಕಾರದ ಆದೇಶ ಸಂಖ್ಯೆ: ಇಡಿ 190 ಎಸ್‌ಎಲ್‌ಬಿ 97, ದಿ. 26.08.97.
7) ಸರ್ಕಾರದ ಅಧಿಸೂಚನೆ ಸಂಖ್ಯೆ: ಎಸ್.ಡಬ್ಲ್ಯೂಡಿ 132 ಎಸ್‌ಎಡಿ 97, ದಿ. 08.02.2000.
8) ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 23 ಎಸ್‌ಆರ್‌ಆರ್ 99, ದಿ. 23.11.2000.
9) ಸರ್ಕಾರದ ಸುತ್ತೋಲೆ ಸಂಖ್ಯೆ: ಸಿಆಸುಇ 44 ಸೇನೇನಿ 2001, ದಿ. 27.07.2001.
10) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 97 ಸೇನೇನಿ 2002, ದಿ. 22.11.2002.
11) ಸರ್ಕಾರದ ಪತ್ರ ಸಂಖ್ಯೆ: ಇಡಿ 174 ಎಸ್‌ಎಲ್‌ಬಿ 2002, ದಿ. 26.11.2002.
12) ಸರ್ಕಾರದ ಅಧಿಸೂಚನೆ ಸಂಖ್ಯೆ: ಎಸ್‌ಡಬ್ಲ್ಯೂಡಿ 126 ಬಿಸಿಎ 2002, ದಿ. 13.02.2003.
13) ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 59 ಎಸ್‌ಆರ್‌ಇ 2002, ದಿ. 24.06.2003.
14) ಸರ್ಕಾರದ ಆದೇಶ ಸಂಖ್ಯೆ ಇಡಿ 125 ಪಿಟಿಐ 2003, ದಿ. 16.08.2003.
15) ಸರ್ಕಾರದ ಆದೇಶ ಸಂಖ್ಯೆ: ಡಿಪಿಎಆರ್ 96 ಸೇನೇನಿ 2005 ಬೆಂಗಳೂರು, ದಿ. 10.8.2005.
16) ಸರ್ಕಾರದ ಆದೇಶ ಸಂಖ್ಯೆ: ಇಡಿ 82/ಎಸ್‌ಎಲ್‌ಬಿ/2003/ಪಾರ್ಟ್/ಬೆಂಗಳೂರು, ದಿನಾಂಕ: 17.06.2006.
17) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 33/ಎಸ್‌ಬಿಸಿ 81, ದಿನಾಂಕ: 01.09.1981.
18) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 30/ಸಹಿಮ 94, ದಿನಾಂಕ: 03.05.1994.
19) ಸರ್ಕಾರದ ಆದೇಶ ಸಂಖ್ಯೆ; ಸಿಆಸುಇ 53/ಸೇನೇನಿ 2007 ಬೆಂಗಳೂರು, ದಿ: 04.01.2008.
20) ಸರ್ಕಾರದ ಸುತ್ತೋಲೆ ಸಂಖ್ಯೆ: ಸಿಆಸುಇ/16/ಸೇನೇನಿ 2008 ಬೆಂಗಳೂರು ದಿ: 01.09.2008.
21) ಸರ್ಕಾರದ ಪತ್ರ ಸಂಖ್ಯೆ: ಇಡಿ/04/ಎಸ್‌ಟಿಬಿ/2009, ಬೆಂಗಳೂರು, ದಿ: 13.03.2009.
22) ಸರ್ಕಾರದ ಪತ್ರ ಸಂಖ್ಯೆ: ಇಡಿ/573/ಎಲ್‌ಬಿಪಿ/2008, ಬೆಂಗಳೂರು, ದಿ: 05.05.2009.
23) ಸರ್ಕಾರದ ಪತ್ರ ಸಂಖ್ಯೆ: ಇಡಿ/573/ಎಲ್‌ಬಿಪಿ/2008, ಬೆಂಗಳೂರು, ದಿ: 18.05.2009.

ಸಾರ್ವಜನಿಕ ಶಿಕ್ಷಣ ಇಲಾಖೆ ಗುಲ್ಬರ್ಗಾ ವಿಭಾಗದ 6 ಶೈಕ್ಷಣಿಕ ಜಿಲ್ಲೆಗಳ (ಬಳ್ಳಾರಿ, ಬೀದರ್, ಗುಲ್ಬರ್ಗಾ, ಕೊಪ್ಪಳ, ರಾಯಚೂರು ಹಾಗೂ ಯಾದಗೀರ್) ಸರಕಾರಿ ಪ್ರೌಢ ಶಾಲೆ/ಸರಕಾರಿ ಪದವಿ ಪೂರ್ವ ಕಾಲೇಜುಗಳ ಪ್ರೌಢ ಶಾಲಾ ವಿಭಾಗಗಳಲ್ಲಿ ಖಾಲಿ ಇರುವ ಪ್ರೌಢ ಶಾಲಾ ಸಹಾಯಕ ಶಿಕ್ಷಕರ ಗ್ರೇಡ್–2 ವೃಂದದ ವಿವಿಧ ವಿಷಯ ಮತ್ತು ಬೋಧನಾ ಮಾಧ್ಯಮದ ಹುದ್ದೆಗಳಿಗೆ ಹಾಗೂ ದೈಹಿಕ ಶಿಕ್ಷಣ ಶಿಕ್ಷಕರು (ಗ್ರೇಡ್–1) ವೃಂದದ ಹುದ್ದೆಗಳಿಗೆ ಮತ್ತು 8ನೇ ತರಗತಿ ಹೊಂದಿರುವ ಉನ್ನತೀಕರಿಸಲಾದ ಸರಕಾರಿ ಹಿರಿಯ ಪ್ರಾಥಮಿಕ ಶಾಲೆಗಳಲ್ಲಿ ಖಾಲಿ ಇರುವ ಪ್ರೌಢ ಶಾಲಾ ಸಹಾಯಕ ಶಿಕ್ಷಕರ (ಗ್ರೇಡ್–2) ವೃಂದದ ಭೌತ ವಿಜ್ಞಾನ ಶಿಕ್ಷಕರನ್ನು ವಿವಿಧ ಮಾಧ್ಯಮದ ಹುದ್ದೆಗಳಿಗೆ, ವಿಭಾಗ ಮಟ್ಟದಲ್ಲಿ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆ ಮೂಲಕ ಅಂದರೆ **"ದಿ ಕರ್ನಾಟಕ ಎಜುಕೇಷನ್**

**ಡಿಪಾರ್ಟ್‌ಮೆಂಟ್ ಸರ್ವೀಸಸ್ (ಡಿಪಾರ್ಟ್‌ಮೆಂಟ್ ಆಫ್ ಪಬ್ಲಿಕ್ ಇನ್‌ಸ್ಟ್ರಕ್ಷನ್) (ರಿಕ್ರೂಟ್‌ಮೆಂಟ್) (ಅಮೆಂಡ್‌ಮೆಂಟ್) ರೂಲ್ಸ್ 2002"** ನಿಯಮಗಳನ್ವಯ ಆಯ್ಕೆ ಮಾಡಲು ಈ ನೇಮಕಾತಿ ಅಧಿಸೂಚನೆ ಹೊರಡಿಸಿದೆ. **ಅಂದರೆ ನೇಮಕಾತಿ ಅಧಿಸೂಚನೆ ದಿನಾಂಕದಂದು ಅರ್ಹರಾಗಿರುವ** ಅಭ್ಯರ್ಥಿಗಳಿಂದ ನಿಗಧಿಪಡಿಸಿರುವ ಅರ್ಜಿ ನಮೂನೆಯಲ್ಲಿ ಅರ್ಜಿಗಳನ್ನು ಕರೆಯಲಾಗಿದೆ. **ಇತರೆ ಯಾವುದೇ ನಮೂನೆಯಲ್ಲಿ ಸಲ್ಲಿಸುವ ಅರ್ಜಿಗಳನ್ನು ತಿರಸ್ಕರಿಸಲಾಗುವುದು.**

**ಟಿಪ್ಪಣಿ: ಪ್ರಕಟಿಸಲಾಗಿರುವ ಹುದ್ದೆಗಳ ಸಂಖ್ಯೆ ಮತ್ತು ವರ್ಗೀಕರಣವು ಅನಿವಾರ್ಯ ಸಂದರ್ಭಗಳಲ್ಲಿ ಬದಲಾವಣೆಗೆ ಒಳಪಟ್ಟಿರುತ್ತದೆ.**

**1) ಆಯ್ಕೆಗಾಗಿ ಪ್ರಕಟಿಸಿರುವ ಹುದ್ದೆಗಳು:–**

(ಎ) **ಪ್ರೌಢ ಶಾಲಾ ಸಹಾಯಕ ಶಿಕ್ಷಕ ಗ್ರೇಡ್–2 ವೃಂದದ ಕೆಳಕಂಡ ವಿಷಯಗಳ ಹುದ್ದೆಗಳು:–**

**i) ಕಲಾ ಶಿಕ್ಷಕರು (ಕನ್ನಡ, ಉರ್ದು ಹಾಗೂ ಮರಾಠಿ ಮಾಧ್ಯಮ)**
**ii) ಭೌತ ವಿಜ್ಞಾನ (ಕನ್ನಡ, ಉರ್ದು, ಮರಾಠಿ ಹಾಗೂ ತೆಲುಗು ಮಾಧ್ಯಮ)**
**iii) ಜೀವ ವಿಜ್ಞಾನ (ಕನ್ನಡ, ಉರ್ದು, ಮರಾಠಿ, ತೆಲುಗು ಹಾಗೂ ತಮಿಳು ಮಾಧ್ಯಮ)**
**iv) ಭಾಷಾ ಶಿಕ್ಷಕರು (ಕನ್ನಡ, ಆಂಗ್ಲ, ಹಿಂದಿ ಮತ್ತು ಮರಾಠಿ)**

(ಬಿ) **ದೈಹಿಕ ಶಿಕ್ಷಣ ಶಿಕ್ಷಕ ಗ್ರೇಡ್–1 ಹುದ್ದೆಗಳು**

**2) ಆಯ್ಕೆಗೆ ಅರ್ಹತೆ:–**

**ನೇಮಕಾತಿ ಅಧಿಸೂಚನೆ ದಿನಾಂಕದಂದು** ಪ್ರೌಢ ಶಾಲಾ ಸಹಾಯಕ ಶಿಕ್ಷಕ ಗ್ರೇಡ್–2 ವೃಂದದ, ವಿವಿಧ ವಿಷಯಗಳ ಮತ್ತು ಬೋಧನಾ ಮಾಧ್ಯಮದ ಮತ್ತು ದೈಹಿಕ ಶಿಕ್ಷಣ ಶಿಕ್ಷಕ ಗ್ರೇಡ್–1 ಹುದ್ದೆಗಳಿಗೆ ಆಯ್ಕೆಗಾಗಿ ಅರ್ಹತೆ ಪಡೆಯಲು ಅಭ್ಯರ್ಥಿಗಳು ಆಯಾ ವಿಷಯ ಮತ್ತು ಬೋಧನಾ ಮಾಧ್ಯಮದ ಹುದ್ದೆಗಳಿಗೆ **"ದಿ ಕರ್ನಾಟಕ ಎಜುಕೇಷನ್ ಡಿಪಾರ್ಟ್‌ಮೆಂಟ್ ಸರ್ವೀಸಸ್ (ಡಿಪಾರ್ಟ್‌ಮೆಂಟ್ ಆಫ್ ಪಬ್ಲಿಕ್ ಇನ್‌ಸ್ಟ್ರಕ್ಷನ್) (ರಿಕ್ರೂಟ್‌ಮೆಂಟ್) (ಅಮೆಂಡ್‌ಮೆಂಟ್) ರೂಲ್ಸ್ 2002"** ನಿಯಮಗಳಲ್ಲಿ ನಿಗಧಿ ಪಡಿಸಿರುವ ವಿದ್ಯಾರ್ಹತೆಗಳನ್ನು ಹೊಂದಿರಬೇಕು. ಮತ್ತು ನಿಗದಿಪಡಿಸಲಾದ ವಯೋಮಿತಿಯೊಳಗಿದ್ದು, ಆಯ್ಕೆ ಪ್ರಾಧಿಕಾರಿಯು ನಡೆಸುವ ವಿಭಾಗ ಮಟ್ಟದ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಗೆ ಕಡ್ಡಾಯವಾಗಿ ಹಾಜರಾಗಬೇಕು. **ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಗೆ ಹಾಜರಾದ ಮಾತ್ರಕ್ಕೆ ಅಭ್ಯರ್ಥಿಯು ಆಯ್ಕೆಗೆ ಅರ್ಹತೆ ಪಡೆಯುವುದಿಲ್ಲ. ಅಭ್ಯರ್ಥಿಯು ಇದರ ಜೊತೆಗೆ ನೇಮಕಾತಿ ನಿಯಮಗಳಲ್ಲಿ ನಿಗಧಿ ಪಡಿಸಿರುವ ವಿದ್ಯಾರ್ಹತೆಗಳನ್ನು ಹೊಂದಿದ್ದು ಮತ್ತು ನಿಗಧಿತ ವಯೋಮಿತಿಯೊಳಗೆ ಇದ್ದಲ್ಲಿ ಮಾತ್ರ ಆಯ್ಕೆಗೆ ಪರಿಗಣಿಸಲಾಗುವುದು.**

**3) ಆಯ್ಕೆ ಮತ್ತು ನೇಮಕಾತಿ:–**

ಅರ್ಹ ಅಭ್ಯರ್ಥಿಗಳನ್ನು ಆಯ್ಕೆ ಪ್ರಾಧಿಕಾರಿಗಳಾದ ವಿಭಾಗೀಯ ಕಾರ್ಯದರ್ಶಿಗಳು, ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ ಹಾಗೂ ಪದನಿಮಿತ್ತ ಸಹ ನಿರ್ದೇಶಕರು ಸಾರ್ವಜನಿಕ ಶಿಕ್ಷಣ ಇಲಾಖೆ, ಗುಲ್ಬರ್ಗಾ ವಿಭಾಗ, ಗುಲ್ಬರ್ಗಾ ರವರು **"ದಿ ಕರ್ನಾಟಕ ಎಜುಕೇಷನ್ ಡಿಪಾರ್ಟ್‌ಮೆಂಟ್ ಸರ್ವೀಸಸ್ (ಡಿಪಾರ್ಟ್‌ಮೆಂಟ್ ಆಫ್ ಪಬ್ಲಿಕ್ ಇನ್‌ಸ್ಟ್ರಕ್ಷನ್) (ರಿಕ್ರೂಟ್‌ಮೆಂಟ್) (ಅಮೆಂಡ್‌ಮೆಂಟ್) ರೂಲ್ಸ್ 2002"** ಹಾಗೂ ಸಂಬಂಧಿಸಿದ ಕಾಲದಿಂದ ಕಾಲಕ್ಕೆ ತಿದ್ದುಪಡಿಯಾದ ಪ್ರಚಲಿತ ಸೇವಾ ನಿಯಮಗಳನ್ವಯ ವಿಭಾಗೀಯ ಮಟ್ಟದಲ್ಲಿ ಆಯ್ಕೆ ಪ್ರಾಧಿಕಾರಿಯಾಗಿರುತ್ತಾರೆ. ಮತ್ತು ಸಂಬಂಧಿಸಿದ ಜಿಲ್ಲಾ ಉಪನಿರ್ದೇಶಕರು [ಆಡಳಿತ] ರವರು ನೇಮಕಾತಿ ಪ್ರಾಧಿಕಾರಿಯಾಗಿದ್ದು, ಜಿಲ್ಲಾ ಮಟ್ಟದಲ್ಲಿ ನೇಮಕಾತಿ ಆದೇಶ ನೀಡುತ್ತಾರೆ.

**4) ನಿಗಧಿತ ಅರ್ಜಿ ನಮೂನೆ ದೊರೆಯುವ ಸ್ಥಳ:–**

ನಿಗಧಿತ ಅರ್ಜಿ ನಮೂನೆಯನ್ನು ಆಯ್ಕೆಗಾಗಿ ಪ್ರಕಟಿಸಲಾಗಿರುವ ಮಾಹಿತಿ ಪುಸ್ತಕದಲ್ಲಿ ಲಗತ್ತಿಸಲಾಗಿದೆ. ಈ ಅರ್ಜಿ ನಮೂನೆ ಹಾಗೂ ಮಾಹಿತಿ ಪುಸ್ತಕವು ಎಲ್ಲಾ ವಿಷಯ ಹಾಗೂ ಮಾಧ್ಯಮದ ಹುದ್ದೆಗಳಿಗೆ ಒಂದೇ ಆಗಿರುತ್ತದೆ. ಹಾಗೂ ಈ ಪುಸ್ತಕವು ಜಿಲ್ಲೆಯ ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರ (ಆಡಳಿತ)ರವರ ಕಚೇರಿಗಳಲ್ಲಿ ದಿನಾಂಕ 08–06–2009 ರಿಂದ ಅರ್ಜಿ ಸಲ್ಲಿಸಲು ನಿಗದಿ ಪಡಿಸಿರುವ ಕೊನೆಯ ದಿನಾಂಕದವರೆಗೆ ಕಾರ್ಯಾಲಯದ ಎಲ್ಲಾ ಕೆಲಸದ ದಿನಗಳಲ್ಲಿ ಬೆಳಿಗ್ಗೆ 10–00 ರಿಂದ ಸಂಜೆ 5–30 ರವರೆಗೆ ದೊರೆಯುತ್ತದೆ. ಅರ್ಹ ಅಭ್ಯರ್ಥಿಗಳು ನಿಗದಿತ ಶುಲ್ಕವನ್ನು ಉಪನಿರ್ದೇಶಕರ ಕಚೇರಿಯಲ್ಲಿ ದೊರೆಯುವ ವಿಶೇಷ ಚಲನ್ ಮೂಲಕ **ವಿಶೇಷಾಧಿಕಾರಿ, ಕೇಂದ್ರೀಕೃತ ದಾಖಲಾತಿ ಘಟಕ, ಬೆಂಗಳೂರು ಇವರ ಹೆಸರಿನಲ್ಲಿ ಸ್ಟೇಟ್ ಬ್ಯಾಂಕ್ ಆಫ್ ಮೈಸೂರಿನ** ನಿಗದಿತ ಶಾಖೆಯಲ್ಲಿ ಹಣವನ್ನು ಪಾವತಿಸಿ, ಪಡೆದುಕೊಂಡ ಚಲನ್ ಪ್ರತಿಯನ್ನು ಉಪನಿರ್ದೇಶಕರ ಕಚೇರಿಯಲ್ಲಿ ಸಲ್ಲಿಸಿ ಮಾಹಿತಿ ಪುಸ್ತಕ ಸಹಿತ ಅರ್ಜಿ ನಮೂನೆಗಳನ್ನು ಪಡೆಯಬಹುದು.

**5) ಅರ್ಜಿ ನಮೂನೆ–ಸಹಿತ–ಮಾಹಿತಿ ಪುಸ್ತಕದ ಶುಲ್ಕ:–**

1) ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ ಮತ್ತು ಪ್ರವರ್ಗ–1ಕ್ಕೆ ಸೇರಿದ ಅಭ್ಯರ್ಥಿಗಳಿಗೆ **ರೂ. 150/–**

2) ಇತರೆ ಎಲ್ಲಾ ಅಭ್ಯರ್ಥಿಗಳಿಗೆ **ರೂ. 300/–**

3) ಸರ್ಕಾರದ ಆದೇಶ ಸಂಖ್ಯೆ: ಇಡಿ 04 ಎಸ್‌ಟಿಬಿ 2009, ದಿ. 13.3.2009ರ ಪ್ರಕಾರ ಅಂಗವಿಕಲ ಅಭ್ಯರ್ಥಿಗಳಿಗೆ ಅರ್ಜಿ ನಮೂನೆ ಸಹಿತ ಮಾಹಿತಿ ಪುಸ್ತಕದಿಂದ ಶುಲ್ಕ ವಿನಾಯಿತಿ ನೀಡಲಾಗಿದ್ದು, ವಿನಾಯಿತಿ ಪಡೆಯುವ ಅಂಗವಿಕಲ ಅಭ್ಯರ್ಥಿಗಳು ಅರ್ಜಿ ಪಡೆಯುವ ಸಂದರ್ಭದಲ್ಲಿ ನಿಗದಿತ ನಮೂನೆಯ ಅಂಗವಿಕಲ ಪ್ರಮಾಣ ಪತ್ರವನ್ನು ಹಾಜರುಪಡಿಸಬೇಕು.

6) **ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ, ವಿಧಾನ ಮತ್ತು ವಿಳಾಸ:–**

**i)** ಅರ್ಹ ಅಭ್ಯರ್ಥಿಗಳು ನಿಗಧಿತ ಅರ್ಜಿ ನಮೂನೆಯಲ್ಲಿ ಮಾಹಿತಿಯನ್ನು ಭರ್ತಿಮಾಡಿ, ಸಹಿ ಮಾಡಿದ ನಂತರ ಅರ್ಜಿ ಸಲ್ಲಿಸಲು ನಿಗಧಿಪಡಿಸಿರುವ ಕೊನೆಯ ದಿನಾಂಕವಾದ 08–07–2009 ರಂದು ಸಾಯಂಕಾಲ 05–30 ಗಂಟೆಯೊಳಗೆ, ಅಥವಾ ಅದಕ್ಕೂ ಮುಂಚಿತವಾಗಿ ಆಯ್ಕೆ ಪ್ರಾಧಿಕಾರಿಯ ವಿಭಾಗದ ವ್ಯಾಪ್ತಿಯಲ್ಲಿ ಬರುವ ಸಾರ್ವಜನಿಕ ಶಿಕ್ಷಣ ಇಲಾಖೆಯ ಜಿಲ್ಲಾ ಉಪನಿರ್ದೇಶಕರು (ಆಡಳಿತ) ರವರ ಕಚೇರಿಗೆ ಮೂರು ಪ್ರತಿಗಳನ್ನು (ಕೇಂದ್ರಿಕೃತ ದಾಖಲಾತಿ ಘಟಕದ ಮೂಲ ಒ.ಎಂ.ಆರ್., ಸಹ ನಿರ್ದೇಶಕರ ಪ್ರತಿ ಮತ್ತು ಉಪ ನಿರ್ದೇಶಕರ ಪ್ರತಿ) (ಅರ್ಜಿ ಖರೀದಿಸಿದ ಜಿಲ್ಲೆಯಲ್ಲಿ) ಖುದ್ದಾಗಿ ಸಲ್ಲಿಸಿ ಸ್ವೀಕೃತಿ ಮತ್ತು ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯ ಪ್ರವೇಶ ಪತ್ರವನ್ನು ಅಭ್ಯರ್ಥಿಯು ಖುದ್ದಾಗಿ ಪಡೆಯತಕ್ಕದ್ದು. **ನಿಗಧಿಪಡಿಸಿದ ಕೊನೆಯ ದಿನಾಂಕದ ನಂತರ, ಯಾವುದೇ ಅರ್ಜಿಗಳನ್ನು ಯಾವುದೇ ಕಾರಣಕ್ಕೂ ಸ್ವೀಕರಿಸಲಾಗುವುದಿಲ್ಲ ಹಾಗೂ ಅಂಚೆಯ ಮುಖಾಂತರ ಕಳುಹಿಸಿದ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.**

ii) ಅಭ್ಯರ್ಥಿಯು ಅರ್ಜಿಯಲ್ಲಿ ನಮೂದಿಸಿರುವ ವಿವರಗಳಿಗೆ ಸಂಬಂಧಪಟ್ಟ ಜನ್ಮ ದಿನಾಂಕ, ಪದವಿ ಪರೀಕ್ಷೆಯ ಮತ್ತು ಬಿ.ಎಡ್ ಪದವಿ ಪರೀಕ್ಷೆಯ ಎಲ್ಲಾ ವರ್ಷಗಳ ಹಾಗೂ ಎಲ್ಲಾ ಪ್ರಯತ್ನಗಳ ಅಂಕಪಟ್ಟಿಗಳು ಮತ್ತು ತೇರ್ಗಡೆಹೊಂದಿದ ಪ್ರಮಾಣ ಪತ್ರಗಳು ಹಾಗೂ ಕ್ಲೇಮು ಮಾಡುತ್ತಿರುವ ಮೀಸಲಾತಿ ಗುಂಪು (ನೇರ ಹಾಗೂ ಸಮತಳ) ಪ್ರಮಾಣ ಪತ್ರಗಳನ್ನು ಅಭ್ಯರ್ಥಿಯು ಸ್ವಯಂ ದೃಢೀಕರಿಸಿ ಪ್ರತಿಗಳನ್ನು ಅರ್ಜಿಯೊಂದಿಗೆ ಲಗತ್ತಿಸಿ, ಲಗತ್ತಿಸಲಾದ ದಾಖಲೆಗಳ ವಿವರವನ್ನು ಸ್ವೀಕೃತಿ ಪತ್ರದಲ್ಲಿ ಸ್ಪಷ್ಟವಾಗಿ ನಮೂದಿಸಬೇಕು.

iii) ಅರ್ಜಿ ನಮೂನೆಯ ಮೂಲ ಒ.ಎಂ.ಆರ್. ಪ್ರತಿಯನ್ನು ಕೇಂದ್ರಿಕೃತ ದಾಖಲಾತಿ ಘಟಕ, ಬೆಂಗಳೂರಿಗೆ ರವಾನಿಸಲಾಗುತಿದ್ದು, ಸದರಿ ಮೂಲ ಒ.ಎಂ.ಆರ್. ಪ್ರತಿಯಲ್ಲಿ ಅಭ್ಯರ್ಥಿಗಳು ಎಲ್ಲಾ ಅಂಕಣಗಳನ್ನು ಭರ್ತಿ ಮಾಡಿದ ನಂತರ ಇದರ ಎರಡು ಜೆರಾಕ್ಸ್ ಪ್ರತಿಗಳನ್ನು ಪಡೆದು ಸಹ ನಿರ್ದೇಶಕರು ಹಾಗೂ ಉಪ ನಿರ್ದೇಶಕರುಗಳಿಗೆ ಅಗತ್ಯ ದಾಖಲೆಗಳ ಸ್ವಯಂ ದೃಢೀಕೃತ ಪ್ರತಿಗಳೊಂದಿಗೆ ಸಲ್ಲಿಸತಕ್ಕದ್ದು. ಮೂಲ ಒ.ಎಂ.ಆರ್. ಅರ್ಜಿ ನಮೂನೆಯಲ್ಲಿ ಮೀಸಲಾತಿ (ನೇರ ಹಾಗೂ ಸಮತಳ) ಅಂಕಣಗಳನ್ನು ಹಾಗೆಯೇ ಬಿಟ್ಟು ಸಹ ನಿರ್ದೇಶಕರು ಹಾಗೂ ಉಪನಿರ್ದೇಶಕರ ಪ್ರತಿಗಳೊಂದಿಗೆ ಮೀಸಲಾತಿ ಪ್ರಮಾಣ ಪತ್ರಗಳನ್ನು ಸಲ್ಲಿಸದ್ದರೂ ಅಂತಹ ಅಭ್ಯರ್ಥಿಗಳ ಮೀಸಲಾತಿ ಕೋರಿಕೆಯನ್ನು ಪರಿಗಣಿಸದೆ ತಿರಸ್ಕರಿಸಲಾಗುವುದು.

**ಅರ್ಜಿಯೊಂದಿಗೆ ಸಲ್ಲಿಸಬೇಕಾದ ತತ್ಸಬಂಧ ಸ್ವಯಂ ದೃಢೀಕೃತ ಹಾಗೂ ಸ್ಪಷ್ಟವಾಗಿರುವ ಜೆರಾಕ್ಸ್ ಪ್ರಮಾಣ ಪತ್ರಗಳ ವಿವರಗಳು ಈ ಕೆಳಕಂಡಂತೆ ಇರುತ್ತವೆ.**

1) ಎಸ್.ಎಸ್.ಎಲ್.ಸಿ. ಕ್ರೋಢೀಕೃತ ಅಂಕಪಟ್ಟಿ (ಜನ್ಮ ದಿನಾಂಕ ಹಾಗೂ ಅಧ್ಯಯನ ಮಾಡಿದ ಭಾಷೆಗಳ ವಿವರದೊಂದಿಗೆ)
2) ಪಿ.ಯು.ಸಿ. ಅಂಕಪಟ್ಟಿ (ಅಧ್ಯಯನ ಮಾಡಿದ ಭಾಷೆಗಳ ವಿವರದೊಂದಿಗೆ) **(ಹಿಂದಿ ಭಾಷಾ ಶಿಕ್ಷಕರಿಗೆ ಮಾತ್ರ)**
3) ಪಿ.ಯು.ಸಿ.ಯಲ್ಲಿ ಅಧ್ಯಯನ ಮಾಡಿದ ಮಾಧ್ಯಮದ ಪ್ರಮಾಣ ಪತ್ರ **(ಹಿಂದಿ ಭಾಷಾ ಶಿಕ್ಷಕರ ಹುದ್ದೆಗೆ ಮಾತ್ರ)**
4) ಬಿ.ಎ / ಬಿ.ಎಸ್ಸಿ ಪದವಿಯ ಮೂರು ವರ್ಷದ ಎಲ್ಲಾ ಪ್ರಯತ್ನಗಳ ಅಂಕಪಟ್ಟಿಗಳು.
5) ಬಿ.ಎ. / ಬಿ.ಎಸ್ಸಿ ಪದವಿಯ ತೇರ್ಗಡೆ ಪ್ರಮಾಣ ಪತ್ರ.
6) ಪದವಿ ತತ್ಸಮಾನ ಪರೀಕ್ಷೆಯ ಎಲ್ಲಾ ವರ್ಷದ ಹಾಗೂ ಎಲ್ಲಾ ಪ್ರಯತ್ನಗಳ ಅಂಕಪಟ್ಟಿಗಳು. **(ಹಿಂದಿ ಭಾಷಾ ವಿಷಯದ ಅಭ್ಯರ್ಥಿಗಳಿಗೆ ಮಾತ್ರ)**
7) ಪದವಿ ತತ್ಸಮಾನ ಪರೀಕ್ಷೆಯ ತೇರ್ಗಡೆ ಪ್ರಮಾಣ ಪತ್ರ **(ಹಿಂದಿ ಭಾಷಾ ವಿಷಯದ ಅಭ್ಯರ್ಥಿಗಳಿಗೆ ಮಾತ್ರ)**
8) ಬಿ.ಎಡ್/ಬಿ.ಪಿ.ಎಡ್. ಪರೀಕ್ಷೆಯ ಅಂಕಪಟ್ಟಿ ಹಾಗೂ ತೇರ್ಗಡೆ ಪ್ರಮಾಣ ಪತ್ರಗಳು.
9) ಬಿ.ಎಡ್. ತತ್ಸಮಾನ ಪರೀಕ್ಷೆಯ ಅಂಕಪಟ್ಟಿ ಹಾಗೂ ತೇರ್ಗಡೆ ಪ್ರಮಾಣ ಪತ್ರಗಳು.
10) ಬಿ.ಎ. ಪದವಿಯಲ್ಲಿ ಸಂಬಂಧಿಸಿದ ಭಾಷೆ ಅಧ್ಯಯನ ಮಾಡದೆ, ಸದರಿ ಭಾಷೆಯಲ್ಲಿ ಸ್ನಾತಕೋತ್ತರ ಪದವಿ ಪಡೆದು, ಭಾಷಾ ಶಿಕ್ಷಕರ ಹುದ್ದೆಗೆ ಅರ್ಜಿ ಸಲ್ಲಿಸಿದಲ್ಲಿ ಸಂಬಂಧಿಸಿದ ಸ್ನಾತಕೋತ್ತರ ಪದವಿಯ ಅಂಕಪಟ್ಟಿಗಳು ಹಾಗೂ ತೇರ್ಗಡೆ ಪ್ರಮಾಣ ಪತ್ರಗಳು.
11) ಆಂಗ್ಲ ಭಾಷಾ ಶಿಕ್ಷಕರ ಹುದ್ದೆಗೆ ಸಂಬಂಧಿಸಿದಂತೆ ನಿಗದಿಪಡಿಸಲಾದ ರೀಜನಲ್ ಇನ್ಸಟ್ಯೂಟ್ ಆಫ್ ಇಂಗ್ಲೀಷ್ ಸೌತ್ ಇಂಡಿಯಾರವರಿಂದ ಪಡೆದುಕೊಂಡಿರುವ ಸ್ನಾತಕೋತ್ತರ ಡಿಪ್ಲೋಮಾದ ಅಂಕಪಟ್ಟಿಗಳು ಹಾಗೂ ತೇರ್ಗಡೆ ಪ್ರಮಾಣ ಪತ್ರಗಳು.
12) ಕನ್ನಡ ಪಂಡಿತ/ಸಂಸ್ಕೃತ ವಿದ್ವಾನ/ಉರ್ದು ಮುನಷಿ ಪರೀಕ್ಷೆಯ ಎಲ್ಲಾ ವರ್ಷದ ಹಾಗೂ ಎಲ್ಲಾ ಪ್ರಯತ್ನಗಳ ಅಂಕಪಟ್ಟಿಗಳು ಹಾಗೂ ತೇರ್ಗಡೆ ಪ್ರಮಾಣ ಪತ್ರಗಳು.
13) ಕನ್ನಡ ಸರ್ಟಿಫಿಕೇಟ್ ಕೋರ್ಸಿನ ಅಂಕಪಟ್ಟಿ ಹಾಗೂ ತೇರ್ಗಡೆ ಪ್ರಮಾಣ ಪತ್ರಗಳು. (ಕನ್ನಡ ಸಾಹಿತ್ಯ ಪರಿಷತ್/ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ ಬೆಂಗಳೂರು) **(ಸಂಬಂಧಿಸಿದವರಿಗೆ ಮಾತ್ರ )**
14) ಅಂಗೀಕೃತ ವಿಶ್ವವಿದ್ಯಾನಿಲಯದಿಂದ ಸಂಬಂಧಿಸಿದ ಬೋಧನಾ ಮಾಧ್ಯಮದ ಭಾಷೆಯಲ್ಲಿ ಪಡೆದುಕೊಂಡಿರುವ ಡಿಪ್ಲೋಮಾ ಕೋರ್ಸಿನ ಅಂಕಪಟ್ಟಿ ಹಾಗೂ ತೇರ್ಗಡೆ ಪ್ರಮಾಣ ಪತ್ರ. **(ಸಂಬಂಧಿಸಿದವರಿಗೆ ಮಾತ್ರ )**
15) ಕೋರಿರುವ ಮೀಸಲಾತಿ (ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ / ಪ್ರವರ್ಗ–1 / 2ಎ / 2ಬಿ / 3ಎ / 3ಬಿ) ಪ್ರಮಾಣ ಪತ್ರ. **(ಸಂಬಂಧಿಸಿದವರಿಗೆ ಮಾತ್ರ )**

16) ಗ್ರಾಮೀಣ ಅಭ್ಯರ್ಥಿ ವ್ಯಾಸಂಗ ಪ್ರಮಾಣ ಪತ್ರ (ಸರಕಾರಿ ಆದೇಶ ದಿನಾಂಕ 10-08-2005 ರಲ್ಲಿ ನಿಗದಿಪಡಿಸಲಾದ ನಮೂನೆ-2ರಲ್ಲಿ ಮಾತ್ರ) (ಸಾಮಾನ್ಯ ಗುಂಪಿಗೆ ಸೇರಿದ ಅಭ್ಯರ್ಥಿ ನಮೂನೆ-2 ರ ಜೊತೆಗೆ ನಮೂನೆ-1ರಲ್ಲಿ ಸಂಬಂಧಿಸಿದ ತಹಸೀಲ್ದಾರರವರಿಂದ ಪಡೆದುಕೊಂಡಿರುವ ಪ್ರಮಾಣ ಪತ್ರವನ್ನು ಸಹ ಲಗತ್ತಿಸುವುದು) **(ಸಂಬಂಧಿಸಿದವರಿಗೆ ಮಾತ್ರ)**

17) ಕನ್ನಡ ಮಾಧ್ಯಮ ಅಭ್ಯರ್ಥಿ ವ್ಯಾಸಂಗ ಪ್ರಮಾಣ ಪತ್ರ. ( **ಸಂಬಂಧಿಸಿದವರಿಗೆ ಮಾತ್ರ** )

18) ಯೋಜನೆಗಳಿಂದ ನಿರಾಶ್ರಿತರಾದ ಕುಟುಂಬದ ಅಭ್ಯರ್ಥಿ ಪ್ರಮಾಣ ಪತ್ರ. ( **ಸಂಬಂಧಿಸಿದವರಿಗೆ ಮಾತ್ರ** )

19) ಅಂಗವಿಕಲ ಅಭ್ಯರ್ಥಿಯ ಪ್ರಮಾಣ ಪತ್ರ. ( **ಸಂಬಂಧಿಸಿದವರಿಗೆ ಮಾತ್ರ** )

20) ಮಾಜಿ ಸೈನಿಕ / ಅವಲಂಬಿತರ ಪ್ರಮಾಣ ಪತ್ರ. (ಸೈನಿಕ ಸೇವೆಯಿಂದ ಬಿಡುಗಡೆ / ಮುಕ್ತಿ ಹೊಂದಿದ ಪುಸ್ತಿಕೆಯೊಂದಿಗೆ) ( **ಸಂಬಂಧಿಸಿದವರಿಗೆ ಮಾತ್ರ** )

21) ಸರಕಾರಿ ಪ್ರೌಢ ಶಾಲೆಯಲ್ಲಿ ಸಂಬಂಧಿಸಿದ ವಿಷಯದಲ್ಲಿ ಸಕ್ಷಮ ಪ್ರಾಧಿಕಾರದಿಂದ ನೇಮಕಗೊಂಡು ಗೌರವ ಶಿಕ್ಷಕರಾಗಿ ಸೇವೆ ಸಲ್ಲಿಸಿದ ಬಗ್ಗೆ ಪ್ರಮಾಣ ಪತ್ರ. ( **ಸಂಬಂಧಿಸಿದವರಿಗೆ ಮಾತ್ರ** )

22) ಸರಕಾರಿ ಪ್ರೌಢ ಶಾಲೆಯಲ್ಲಿ ಸಂಬಂಧಿಸಿದ ವಿಷಯದಲ್ಲಿ ಸಕ್ಷಮ ಪ್ರಾಧಿಕಾರದಿಂದ ನೇಮಕಗೊಂಡು ಅರೆ ಕಾಲಿಕ ಶಿಕ್ಷಕರಾಗಿ ಸೇವೆ ಸಲ್ಲಿಸಿದ ಬಗ್ಗೆ ಪ್ರಮಾಣ ಪತ್ರ. ( **ಸಂಬಂಧಿಸಿದವರಿಗೆ ಮಾತ್ರ** )

23) ಭಾರತಿಯ ಜನಗಣತಿ ಸಂಸ್ಥೆಯಲ್ಲಿ ಗುತ್ತಿಗೆ ಆಧಾರದ ಮೇಲೆ ಸೇವೆ ಸಲ್ಲಿಸಿರುವ ಬಗ್ಗೆ ಪ್ರಮಾಣ ಪತ್ರ. ( **ಸಂಬಂಧಿಸಿದವರಿಗೆ ಮಾತ್ರ** )

24) **ಸರಕಾರದ ಸೇವೆಯಲ್ಲಿರುವ ಅಭ್ಯರ್ಥಿಗಳು** ಹಾಲಿ ಕಾರ್ಯ ನಿರ್ವಹಿಸುತ್ತಿರುವ ಉದ್ಯೋಗಕ್ಕೆ ಸಂಬಂಧಿಸಿದ ಸೇವಾ ಪ್ರಮಾಣ ಪತ್ರ ಹಾಗೂ ಈ ಹುದ್ದೆಗೆ ಅರ್ಜಿ ಸಲ್ಲಿಸಲು ನೇಮಕಾತಿ ಪ್ರಾಧಿಕಾರಿಯಿಂದ ಪಡೆದುಕೊಂಡಿರುವ **ಅನುಮತಿ ಪತ್ರ** [**ಸಂಬಂಧಿಸಿದವರಿಗೆ ಮಾತ್ರ** ]

25) ಇನ್ನಿತರ ಅವಶ್ಯವೆಂದು ಭಾವಿಸಿದ ದಾಖಲೆಗಳ ಪ್ರತಿಗಳು.

**ಸೂಚನೆ:-** **ಮೇಲ್ಕಂಡ ಎಲ್ಲಾ ದಾಖಲೆಗಳನ್ನು ಅರ್ಜಿ ಸಲ್ಲಿಸುವಾಗಲೇ ಪಡೆದು ಲಗತ್ತಿಸಬೇಕು. ಯಾವುದೇ ಹೊಸ ದಾಖಲೆಗಳನ್ನು ಆಕ್ಷೇಪಣೆ ಸಲ್ಲಿಸುವ ಹಂತದಲ್ಲಿ ಸಲ್ಲಿಸಲು ಅವಕಾಶವಿರುವುದಿಲ್ಲ, ಅಂತಹ ದಾಖಲೆಗಳನ್ನು ಪರಿಗಣಿಸದೆ ತಿರಸ್ಕರಿಸಲಾಗುವುದು**

**iii) ಹಾಲಿ ರಾಜ್ಯ ಸರಕಾರದ ಸೇವೆಯಲ್ಲಿರುವ ಅಭ್ಯರ್ಥಿಗಳು ತಮ್ಮ ಹುದ್ದೆಯ ನೇಮಕಾತಿ ಪ್ರಾಧಿಕಾರಿಯ ಮುಖಾಂತರವೇ ತಮ್ಮ ಅರ್ಜಿಗಳನ್ನು ಸಲ್ಲಿಸತಕ್ಕದ್ದು ಮತ್ತು ಅರ್ಜಿ ಸ್ವೀಕರಿಸಲು ನಿಗಧಿಪಡಿಸಿರುವ ಕೊನೆಯ ದಿನಾಂಕವಾದ 08.07.2009ರ ಸಾಯಂಕಾಲ 05-30 ರೊಳಗೆ ಅಥವಾ ಅದಕ್ಕೂ ಮುಂಚಿತವಾಗಿ ಆಯ್ಕೆ ಪ್ರಾಧಿಕಾರಿಯ ವಿಭಾಗದ ವ್ಯಾಪ್ತಿಯಲ್ಲಿ ಬರುವ ಜಿಲ್ಲಾ ಉಪನಿರ್ದೇಶಕರ ಕಛೇರಿಗೆ ಖುದ್ದಾಗಿ ಸಲ್ಲಿಸುವುದು. ಕೊನೆಯ ದಿನಾಂಕದ ನಂತರ ಬರುವ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.**

**iv)** ಅರ್ಜಿಗಳನ್ನು ಸ್ವೀಕರಿಸಲು ನಿಗಧಿಪಡಿಸಿದ ಕೊನೆಯ ದಿನಾಂಕವು ಸಾರ್ವಜನಿಕ ರಜಾ ದಿನವಾಗಿದ್ದಲ್ಲಿ ನಂತರದ ಕೆಲಸದ ದಿನವು ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕವಾಗಿರುತ್ತದೆ.

**v)** ಅರ್ಜಿಯನ್ನು ಒಳಗೊಂಡ ಲಕೋಟೆಯ ಮೇಲೆ **"ಪ್ರೌಢ ಶಾಲಾ ಸಹಾಯಕ ಶಿಕ್ಷಕರ ಗ್ರೇಡ್-2 ವೃಂದದ ______________ ವಿಷಯದ______________ಬೋಧನಾ ಮಾಧ್ಯಮದ / ದೈಹಿಕ ಶಿಕ್ಷಣ ಶಿಕ್ಷಕ (ಗ್ರೇಡ್-1) ಹುದ್ದೆಗಾಗಿ ಅರ್ಜಿ"** ಎಂದು ದಪ್ಪ ಅಕ್ಷರದಲ್ಲಿ ಬರೆದಿರಬೇಕು.

**7) ಪ್ರೌಢ ಶಾಲಾ ಸಹ ಶಿಕ್ಷಕ (ಗ್ರೇಡ್-2) ವೃಂದದ ವಿವಿಧ ವಿಷಯ ಹಾಗೂ ಮಾಧ್ಯಮದ ಮತ್ತು ದೈಹಿಕ ಶಿಕ್ಷಣ ಶಿಕ್ಷಕ (ಗ್ರೇಡ್-1) ಹುದ್ದೆಗಳಿಗೆ ಅರ್ಜಿ ಸಲ್ಲಿಸುವ ಬಗ್ಗೆ.**

ಪ್ರೌಢ ಶಾಲಾ ಸಹಾಯಕ ಶಿಕ್ಷಕರ ಗ್ರೇಡ್-2 ವೃಂದದ, ವಿವಿಧ ವಿಷಯ ಹಾಗೂ ಮಾಧ್ಯಮದ ಮತ್ತು ದೈಹಿಕ ಶಿಕ್ಷಣ ಶಿಕ್ಷಕ (ಗ್ರೇಡ್-1) ಹುದ್ದೆಗಳಿಗೆ ಒಂದೇ ಅರ್ಜಿ ನಮೂನೆಯನ್ನು ನಿಗಧಿಪಡಿಸಿದೆ. ಅಭ್ಯರ್ಥಿಗಳು ಒಂದೇ ಅರ್ಜಿಯಲ್ಲಿ ಒಂದಕ್ಕಿಂತ ಹೆಚ್ಚು ವಿಷಯದ ಅಥವಾ ಮಾಧ್ಯಮದ ಹುದ್ದೆಗಳಿಗೆ ಅರ್ಜಿ ಸಲ್ಲಿಸಬಹುದಾಗಿದೆ. ಪ್ರತ್ಯೇಕ ಅರ್ಜಿಗಳ ಅವಶ್ಯಕತೆ ಇರುವದಿಲ್ಲ.ಆದರೆ ಅಭ್ಯರ್ಥಿಗಳು ವಿವಿಧ ವಿಷಯ ಹಾಗೂ ಮಾಧ್ಯಮದ ಹುದ್ದೆಗಳಿಗೆ ಆದ್ಯತೆಯನ್ನು ನಮೂದಿಸಬೇಕು. **ಆದ್ಯತೆ ಪ್ರಕಾರ ಆಯ್ಕೆ ಮಾಡಲಾಗುವುದು. ಒಂದು ಆದ್ಯತೆಯ ಪ್ರಕಾರ ಆಯ್ಕೆ ಹೊಂದಿದ್ದಲ್ಲಿ ಉಳಿದ ಆದ್ಯತೆಗಳನ್ನು ಕೈಬಿಡಲಾಗುವುದು.**

**ಉದಾಹರಣೆಗೆ:-(1)** ಅಧಿಸೂಚನೆಯಲ್ಲಿ ನೀಡಿರುವಂತೆ ಒಬ್ಬ ಅಭ್ಯರ್ಥಿಯು ಕಲಾ [ಕನ್ನಡ ಮಾದ್ಯಮ] ಮತ್ತು ಕನ್ನಡ ಭಾಷಾ ಶಿಕ್ಷಕರ ಹುದ್ದೆಗೆ ಅರ್ಹನಾಗಿದ್ದಲ್ಲಿ, ಅಂತಹ ಅಭ್ಯರ್ಥಿಯು ಎರಡು ಹುದ್ದೆಗಳಿಗೆ ಆದ್ಯತೆಯನ್ನು ಸೂಚಿಸಬಹುದು. ಉದಾಹರಣೆಗೆ, ಕನ್ನಡ ಭಾಷಾ ಶಿಕ್ಷಕರ ಹುದ್ದೆಗೆ ಪ್ರಥಮ ಆದ್ಯತೆಯಾಗಿದ್ದು, ಕಲಾ [ಕನ್ನಡ ಮಾಧ್ಯಮ] ಹುದ್ದೆಗೆ ಎರಡನೆಯ ಆದ್ಯತೆಯಾಗಿದ್ದಲ್ಲಿ **ಕನ್ನಡ ಭಾಷಾ** ಕಾಲಂನಲ್ಲಿ **(1)** ಎಂದು ಹಾಗೂ ಕಲಾ [ಕನ್ನಡ ಮಾಧ್ಯಮ] ಕಾಲಂನಲ್ಲಿ **(2)** ಎಂದು ನಮೂದಿಸಬೇಕು. ಒಂದು ವೇಳೆ ಆದ್ಯತೆಗಳನ್ನು ನಮೂದಿಸದಿದ್ದಲ್ಲಿ ಅಭ್ಯರ್ಥಿಯು ಹೊಂದಿರುವ ವಿದ್ಯಾರ್ಹತೆಗಳನ್ನು ಆಧರಿಸಿ ಆಯ್ಕೆಗೆ ಪರಿಗಣಿಸಲಾಗುವುದು.

**8) ವಿದ್ಯಾರ್ಹತೆಗಳು:–**

**ಅಭ್ಯರ್ಥಿಗಳು ನೇಮಕಾತಿ ಅಧಿಸೂಚನೆ ದಿನಾಂಕದಂದು "ದಿ ಕರ್ನಾಟಕ ಎಜುಕೇಷನ್ ಡಿಪಾರ್ಟ್‌ಮೆಂಟ್ ಸರ್ವೀಸಸ್ (ಡಿಪಾರ್ಟ್‌ಮೆಂಟ್ ಆಫ್ ಪಬ್ಲಿಕ್ ಇನ್‌ಸ್ಟ್ರಕ್ಷನ್) (ರಿಕ್ರೂಟ್‌ಮೆಂಟ್) (ಅಮೆಂಡ್‌ಮೆಂಟ್) ರೂಲ್ಸ್ 2002"** ನಿಯಮಗಳಲ್ಲಿ ನಿಗದಿಪಡಿಸಿರುವಂತೆ, ಪ್ರೌಢ ಶಾಲಾ ಸಹಾಯಕ ಗ್ರೇಡ್–2 ವೃಂದದ, ವಿವಿಧ ವಿಷಯಗಳ ಹಾಗೂ ಮಾಧ್ಯಮದ ಮತ್ತು ದೈಹಿಕ ಶಿಕ್ಷಣ ಶಿಕ್ಷಕ (ಗ್ರೇಡ್–1) ಶಿಕ್ಷಕರ ಹುದ್ದೆಗಳಿಗೆ ಹೊಂದಿರಬೇಕಾದ ವಿದ್ಯಾರ್ಹತೆಗಳ ವಿವರಗಳು ಈ ಮುಂದೆ ತಿಳಿಸಿದಂತಿರುತ್ತದೆ.

**(ಅ) ಕಲಾ ಶಿಕ್ಷಕರ ಹುದ್ದೆಗಳಿಗೆ (Arts Teacher):–**

i) ಅಭ್ಯರ್ಥಿಯು, ಭಾರತ ದೇಶದ ಕಾನೂನಿನಂತೆ ಸ್ಥಾಪಿಸಲ್ಪಟ್ಟ ಮತ್ತು ವಿಶ್ವವಿದ್ಯಾಲಯ ಧನ ಸಹಾಯ ಆಯೋಗದಿಂದ ಅಂಗೀಕೃತವಾದ ಒಂದು ವಿಶ್ವವಿದ್ಯಾಲಯದ **"ಬ್ಯಾಚಲರ್ ಆಫ್ ಆರ್ಟ್ಸ್"** (ಬಿ.ಎ) ಪದವೀಧರರಾಗಿದ್ದು, ಈ ಪದವಿ ಪರೀಕ್ಷೆಯಲ್ಲಿ **"ಇತಿಹಾಸ, ಅರ್ಥಶಾಸ್ತ್ರ, ಭೂಗೋಳ ಶಾಸ್ತ್ರ, ರಾಜ್ಯಶಾಸ್ತ್ರ, ಸಮಾಜ ಶಾಸ್ತ್ರ** ಇವುಗಳಲ್ಲಿ ಯಾವುದಾದರೂ **ಎರಡು ಐಚ್ಛಿಕ ವಿಷಯಗಳನ್ನು** ಅಧ್ಯಯನ ಮಾಡಿರಬೇಕು.

**ಮತ್ತು**

ii] ಭಾರತ ದೇಶದ ಕಾನೂನಿನಂತೆ ಸ್ಥಾಪಿಸಲ್ಪಟ್ಟ ಮತ್ತು ವಿಶ್ವವಿದ್ಯಾಲಯ ಧನ ಸಹಾಯ ಆಯೋಗದಿಂದ ಅಂಗೀಕೃತವಾದ ಒಂದು ವಿಶ್ವವಿದ್ಯಾನಿಲಯದಿಂದ **ಬ್ಯಾಚುಲರ್ ಆಫ್ ಎಜ್ಯುಕೇಶನ್ (ಬಿ.ಇಡಿ)** ಪದವಿಯನ್ನು ಪಡೆದಿರಬೇಕು.

**ಹಾಗೂ**

iii) ಬೋಧನಾ ಮಾಧ್ಯಮದ ಭಾಷೆಯನ್ನು ಅಭ್ಯರ್ಥಿಯು **ಬ್ಯಾಚುಲರ್ ಆಫ್ ಆರ್ಟ್ಸ್ (ಬಿ.ಎ)** ಪದವಿಯಲ್ಲಿ ಒಂದು ಭಾಷೆಯನ್ನಾಗಿ ಅಧ್ಯಯನ ಮಾಡಿರಬೇಕು.

**ಅಥವಾ**

ಬೋಧನಾ ಮಾಧ್ಯಮದ ಭಾಷೆಯನ್ನು ಬಿ.ಎ. ಪದವಿಯಲ್ಲಿ ಅಧ್ಯಯನ ಮಾಡದೆ ಇದ್ದಲ್ಲಿ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಆ ಭಾಷೆಯನ್ನು ಪ್ರಥಮ ಅಥವಾ ದ್ವಿತೀಯ ಭಾಷೆಯನ್ನಾಗಿ ಅಧ್ಯಯನ ಮಾಡಿರಬೇಕು.

**ಅಥವಾ**

ಎಸ್.ಎಸ್.ಎಲ್.ಸಿ. ಅಥವಾ ಬಿಎ ಪದವಿ ಪರೀಕ್ಷೆಯನ್ನು **ಬೋಧನಾ ಮಾಧ್ಯಮದ** ಭಾಷೆಯ ಮಾಧ್ಯಮದಲ್ಲಿ ಅಧ್ಯಯನ ಮಾಡಿರಬೇಕು.

**ಅಥವಾ**

ಭಾರತ ದೇಶದ ಕಾನೂನಿನಂತೆ ಸ್ಥಾಪಿಸಲ್ಪಟ್ಟ ಮತ್ತು ವಿಶ್ವವಿದ್ಯಾಲಯ ಧನ ಸಹಾಯ ಆಯೋಗದಿಂದ ಅಂಗೀಕೃತವಾದ ಒಂದು ವಿಶ್ವವಿದ್ಯಾನಿಲಯದಿಂದ, ಸಂಬಂಧಿಸಿದ ಬೋಧನಾ ಮಾಧ್ಯಮದ ಭಾಷೆಯಲ್ಲಿ **ಡಿಪ್ಲೋಮಾ** ಹೊಂದಿರಬೇಕು.

**ಕನ್ನಡ ಮಾಧ್ಯಮದಲ್ಲಿ ಬೋಧಿಸುವ ವಿಷಯಗಳಿಗೆ ಸಂಬಂಧಿಸಿದಂತೆ ಮೇಲೆ ತಿಳಿಸಿದ ನಿಬಂಧನೆಗಳ ಪ್ರಕಾರ ಇಲ್ಲದಿದ್ದಲ್ಲಿ, ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ, ಬೆಂಗಳೂರು ಅಥವಾ ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು ಇವರುಗಳ ವತಿಯಿಂದ ನಡೆಸಲ್ಪಡುವ "ಕನ್ನಡ ಸರ್ಟಿಫಿಕೇಟ್"**[ಕಾವ/ಜಾಣ/ರತ್ನ] **ಕೋರ್ಸ್‌ನ್ನು ಪಾಸು ಮಾಡಿರಬೇಕು.**

**(ಆ) ಭೌತ ವಿಜ್ಞಾನ ಶಿಕ್ಷಕರ ಹುದ್ದೆಗಳಿಗೆ (Physical Science Teacher):–**

i) ಅಭ್ಯರ್ಥಿಯು, ಭಾರತ ದೇಶದ ಕಾನೂನಿನಂತೆ ಸ್ಥಾಪಿಸಲ್ಪಟ್ಟ ಮತ್ತು ವಿಶ್ವವಿದ್ಯಾಲಯ ಧನ ಸಹಾಯ ಆಯೋಗದಿಂದ ಅಂಗೀಕೃತವಾದ ಒಂದು ವಿಶ್ವವಿದ್ಯಾಲಯದ **"ಬ್ಯಾಚಲರ್ ಆಫ್ ಸೈನ್ಸ್"** (ಬಿ.ಎಸ್ಸಿ) ಪದವೀಧರರಾಗಿದ್ದು, ಈ ಪದವಿ ಪರೀಕ್ಷೆಯಲ್ಲಿ ಈ ಕೆಳಕಂಡ ಐಚ್ಛಿಕ ವಿಷಯಗಳಲ್ಲಿ ಎರಡು ಐಚ್ಛಿಕ ವಿಷಯಗಳನ್ನು ಅಧ್ಯಯನ ಮಾಡಿರಬೇಕು. ಇದರಲ್ಲಿ **"ಗಣಿತ ಶಾಸ್ತ್ರ"** ಐಚ್ಛಿಕ ವಿಷಯವನ್ನು ಕಡ್ಡಾಯವಾಗಿ ಅಧ್ಯಯನ ಮಾಡಿರಬೇಕು.

**" ಭೌತಶಾಸ್ತ್ರ, ಗಣಿತಶಾಸ್ತ್ರ, ರಸಾಯನ ಶಾಸ್ತ್ರ "**

**ಅಥವಾ**

**" ಭೌತಶಾಸ್ತ್ರ, ಗಣಿತಶಾಸ್ತ್ರ, ಕಂಪ್ಯೂಟರ್ ಸೈನ್ಸ್ "**

**ಅಥವಾ**

**" ಭೌತಶಾಸ್ತ್ರ, ಗಣಿತಶಾಸ್ತ್ರ, ಎಲೆಕ್ಟ್ರಾನಿಕ್ಸ್ "**

**ಮತ್ತು**

ii) ಭಾರತ ದೇಶದ ಕಾನೂನಿನಂತೆ ಸ್ಥಾಪಿಸಲ್ಪಟ್ಟ ಮತ್ತು ವಿಶ್ವವಿದ್ಯಾಲಯ ಧನ ಸಹಾಯ ಆಯೋಗದಿಂದ ಅಂಗೀಕೃತವಾದ ಒಂದು ವಿಶ್ವವಿದ್ಯಾಲಯದಿಂದ **"ಬ್ಯಾಚಲರ್ ಆಫ್ ಎಜುಕೇಷನ್"** (ಬಿ.ಎಡ್) ಪದವಿ ಪಡೆದಿರಬೇಕು.

**ಹಾಗೂ**

iii) ಬೋಧನಾ ಮಾಧ್ಯಮದ ಭಾಷೆಯನ್ನು ಅಭ್ಯರ್ಥಿಯು **"ಬ್ಯಾಚಲರ್ ಆಫ್ ಸೈನ್ಸ್"** (ಬಿ.ಎಸ್ಸಿ) ಪದವಿಯಲ್ಲಿ ಒಂದು ಭಾಷೆಯನ್ನಾಗಿ ಅಧ್ಯಯನ ಮಾಡಿರಬೇಕು.

**ಅಥವಾ**

ಬೋಧನಾ ಮಾಧ್ಯಮದ ಭಾಷೆಯನ್ನು ಬಿ.ಎಸ್ಸಿ. ಪದವಿಯಲ್ಲಿ ಅಧ್ಯಯನ ಮಾಡದೆ ಇದ್ದಲ್ಲಿ **ಎಸ್.ಎಸ್.ಎಲ್**.ಸಿ. ಪರೀಕ್ಷೆಯಲ್ಲಿ ಆ ಭಾಷೆಯನ್ನು **ಪ್ರಥಮ ಅಥವಾ ದ್ವಿತೀಯ** ಭಾಷೆಯನ್ನಾಗಿ ಅಧ್ಯಯನ ಮಾಡಿರಬೇಕು.

**ಅಥವಾ**

ಎಸ್.ಎಸ್.ಎಲ್.ಸಿ. ಅಥವಾ ಬಿ.ಎಸ್ಸಿ. ಪದವಿ ಪರೀಕ್ಷೆಯನ್ನು **ಬೋಧನಾ ಮಾಧ್ಯಮದ** ಭಾಷೆಯ ಮಾಧ್ಯಮದಲ್ಲಿ ಅಧ್ಯಯನ ಮಾಡಿರಬೇಕು.

**ಅಥವಾ**

ಭಾರತ ದೇಶದ ಕಾನೂನಿನಂತೆ ಸ್ಥಾಪಿಸಲ್ಪಟ್ಟ ಮತ್ತು ವಿಶ್ವವಿದ್ಯಾಲಯ ಧನ ಸಹಾಯ ಆಯೋಗದಿಂದ ಅಂಗೀಕೃತವಾದ ಒಂದು ವಿಶ್ವವಿದ್ಯಾಲಯದಿಂದ, ಸಂಬಂಧಿಸಿದ ಬೋಧನಾ ಮಾಧ್ಯಮದ ಭಾಷೆಯಲ್ಲಿ **ಡಿಪ್ಲೋಮಾವನ್ನು** ಹೊಂದಿರಬೇಕು.

**ಕನ್ನಡ ಮಾಧ್ಯಮದಲ್ಲಿ ಬೋಧಿಸುವ ವಿಷಯಗಳಿಗೆ ಸಂಬಂಧಿಸಿದಂತೆ ಮೇಲೆ ತಿಳಿಸಿದ ನಿಬಂಧನೆಗಳ ಪ್ರಕಾರ ಇಲ್ಲದಿದ್ದಲ್ಲಿ, ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ, ಬೆಂಗಳೂರು ಅಥವಾ ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು ಇವರುಗಳ ವತಿಯಿಂದ ನಡೆಸಲ್ಪಡುವ "ಕನ್ನಡ ಸರ್ಟಿಫಿಕೇಟ್" ಕೋರ್ಸ್‌ನ್ನು [ಕಾವ/ಜಾಣ/ರತ್ನ] ಪಾಸು ಮಾಡಿರಬೇಕು.**

**(ಇ) ಜೀವ ವಿಜ್ಞಾನ ಶಿಕ್ಷಕರ ಹುದ್ದೆಗಳಿಗೆ (Biological Science Teacher):–**

i) ಅಭ್ಯರ್ಥಿಯು, ಭಾರತ ದೇಶದ ಕಾನೂನಿನಂತೆ ಸ್ಥಾಪಿಸಲ್ಪಟ್ಟ ಮತ್ತು ವಿಶ್ವವಿದ್ಯಾಲಯ ಧನ ಸಹಾಯ ಆಯೋಗದಿಂದ ಅಂಗೀಕೃತವಾದ ಒಂದು ವಿಶ್ವವಿದ್ಯಾಲಯದ **"ಬ್ಯಾಚಲರ್ ಆಫ್ ಸೈನ್ಸ್"** (ಬಿ.ಎಸ್ಸಿ) ಪದವೀಧರರಾಗಿದ್ದು, ಈ ಪದವಿ ಪರೀಕ್ಷೆಯಲ್ಲಿ **ರಸಾಯನ ಶಾಸ್ತ್ರ, ಸಸ್ಯಶಾಸ್ತ್ರ ಮತ್ತು ಪ್ರಾಣಿಶಾಸ್ತ್ರ** ಈ ಐಚ್ಛಿಕ ವಿಷಯಗಳಲ್ಲಿ ಎರಡು ಐಚ್ಛಿಕ ವಿಷಯಗಳನ್ನು ಅಧ್ಯಯನ ಮಾಡಿರಬೇಕು. ಹಾಗೂ ಇದರಲ್ಲಿ **" ರಸಾಯನಶಾಸ್ತ್ರ "** ಐಚ್ಛಿಕ ವಿಷಯವನ್ನು ಕಡ್ಡಾಯವಾಗಿ ಅಧ್ಯಯನ ಮಾಡಿರಬೇಕು.

**ಮತ್ತು**

ii) ಭಾರತ ದೇಶದ ಕಾನೂನಿನಂತೆ ಸ್ಥಾಪಿಸಲ್ಪಟ್ಟ ಮತ್ತು ವಿಶ್ವವಿದ್ಯಾಲಯ ಧನ ಸಹಾಯ ಆಯೋಗದಿಂದ ಅಂಗೀಕೃತವಾದ ಒಂದು ವಿಶ್ವವಿದ್ಯಾಲಯದಿಂದ **"ಬ್ಯಾಚಲರ್ ಆಫ್ ಎಜುಕೇಷನ್"** (ಬಿ.ಎಡ್) ಪದವಿ ಪಡೆದಿರಬೇಕು.

**ಹಾಗೂ**

iii) ಬೋಧನಾ ಮಾಧ್ಯಮದ ಭಾಷೆಯನ್ನು ಅಭ್ಯರ್ಥಿಯು **"ಬ್ಯಾಚಲರ್ ಆಫ್ ಸೈನ್ಸ್"** (ಬಿ.ಎಸ್ಸಿ) ಪದವಿಯಲ್ಲಿ ಒಂದು ಭಾಷೆಯನ್ನಾಗಿ ಅಧ್ಯಯನ ಮಾಡಿರಬೇಕು.

**ಅಥವಾ**

ಬೋಧನಾ ಮಾಧ್ಯಮದ ಭಾಷೆಯನ್ನು ಬಿ.ಎಸ್ಸಿ. ಪದವಿಯಲ್ಲಿ ಅಧ್ಯಯನ ಮಾಡದೆ ಇದ್ದಲ್ಲಿ **ಎಸ್.ಎಸ್.ಎಲ್**.ಸಿ. ಪರೀಕ್ಷೆಯಲ್ಲಿ ಆ ಭಾಷೆಯನ್ನು **ಪ್ರಥಮ ಅಥವಾ ದ್ವಿತೀಯ** ಭಾಷೆಯನ್ನಾಗಿ ಅಧ್ಯಯನ ಮಾಡಿರಬೇಕು.

**ಅಥವಾ**

ಎಸ್.ಎಸ್.ಎಲ್.ಸಿ. ಅಥವಾ ಬಿ.ಎಸ್ಸಿ. ಪದವಿ ಪರೀಕ್ಷೆಯನ್ನು **ಬೋಧನಾ ಮಾಧ್ಯಮದ** ಭಾಷೆಯ ಮಾಧ್ಯಮದಲ್ಲಿ ಅಧ್ಯಯನ ಮಾಡಿರಬೇಕು.

**ಅಥವಾ**

ಭಾರತ ದೇಶದ ಕಾನೂನಿನಂತೆ ಸ್ಥಾಪಿಸಲ್ಪಟ್ಟ ಮತ್ತು ವಿಶ್ವವಿದ್ಯಾಲಯ ಧನ ಸಹಾಯ ಆಯೋಗದಿಂದ ಅಂಗೀಕೃತವಾದ ಒಂದು ವಿಶ್ವವಿದ್ಯಾಲಯದಿಂದ, ಸಂಬಂಧಿಸಿದ ಬೋಧನಾ ಮಾಧ್ಯಮದ ಭಾಷೆಯಲ್ಲಿ **'ಡಿಪ್ಲೋಮಾ' ವನ್ನು** ಹೊಂದಿರಬೇಕು.

ಕನ್ನಡ ಮಾಧ್ಯಮದಲ್ಲಿ ಬೋಧಿಸುವ ವಿಷಯಗಳಿಗೆ ಸಂಬಂಧಿಸಿದಂತೆ ಮೇಲೆ ತಿಳಿಸಿದ ನಿಬಂಧನೆಗಳ ಪ್ರಕಾರ ಇಲ್ಲದಿದ್ದಲ್ಲಿ, ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ, ಬೆಂಗಳೂರು ಅಥವಾ ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು ಇವರುಗಳ ವತಿಯಿಂದ ನಡೆಸಲ್ಪಡುವ **"**ಕನ್ನಡ ಸರ್ಟಿಫಿಕೇಟ್**"** ಕೋರ್ಸ್‌ನ್ನು[ಕಾವ/ಜಾಣ/ರತ್ನ] ಪಾಸು ಮಾಡಿರಬೇಕು.

**(ಈ) ಭಾಷಾ ಶಿಕ್ಷಕರುಗಳ ಹುದ್ದೆಗಳಿಗೆ (Language Assistants ):–**

i) ಅಭ್ಯರ್ಥಿಯು, ಭಾರತ ದೇಶದ ಕಾನೂನಿನಂತೆ ಸ್ಥಾಪಿಸಲ್ಪಟ್ಟ ಮತ್ತು ವಿಶ್ವವಿದ್ಯಾಲಯ ಧನ ಸಹಾಯ ಆಯೋಗದಿಂದ ಅಂಗೀಕೃತವಾದ ಒಂದು ವಿಶ್ವವಿದ್ಯಾಲಯದ **"ಬ್ಯಾಚಲರ್ ಆಫ್ ಆರ್ಟ್ಸ್"** (ಬಿ.ಎ) ಪದವೀಧರರಾಗಿದ್ದು, ಈ ಪದವಿ ಪರೀಕ್ಷೆಯಲ್ಲಿ ಸಂಬಂಧಿಸಿದ ಭಾಷಾ ಶಿಕ್ಷಕರ ಹುದ್ದೆಗೆ ಅನುಗುಣವಾದ ಭಾಷೆಯನ್ನು ಒಂದು ಐಚ್ಛಿಕ ವಿಷಯವನ್ನಾಗಿ (Optionals) ಅಧ್ಯಯನ ಮಾಡಿರಬೇಕು. ಭಾಷೆಗಳು ಅಂದರೆ **ಕನ್ನಡ, ಇಂಗ್ಲೀಷ್, ಉರ್ದು, ಹಿಂದಿ, ಮರಾಠಿ, ತೆಲುಗು, ತಮಿಳು ಮತ್ತು ಸಂಸ್ಕೃತ**.

**ಅಥವಾ**

ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ ಬೆಂಗಳೂರು ಇವರು ನಡೆಸುವ (04) ನಾಲ್ಕು ವರ್ಷಗಳ ಅವಧಿಯ **ಕನ್ನಡ ಪಂಡಿತ, ಸಂಸ್ಕೃತ ವಿದ್ವಾನ್**[ವಿದ್ಯುನ್ಮಧ್ಯಮ ಮತ್ತು ವಿದ್ವತ್ ಉತ್ತಮ] **"ಉರ್ದು ಮುನ್ಷಿ"** ಪರೀಕ್ಷೆಯನ್ನು ಪಾಸು ಮಾಡಿರಬೇಕು.

**ಮತ್ತು**

ii) ಭಾರತ ದೇಶದ ಕಾನೂನಿನಂತೆ ಸ್ಥಾಪಿಸಲ್ಪಟ್ಟ ಮತ್ತು ವಿಶ್ವವಿದ್ಯಾಲಯ ಧನ ಸಹಾಯ ಆಯೋಗದಿಂದ ಅಂಗೀಕೃತವಾದ ಒಂದು ವಿಶ್ವವಿದ್ಯಾಲಯದಿಂದ **"ಬ್ಯಾಚಲರ್ ಆಫ್ ಎಜುಕೇಷನ್"** (ಬಿ.ಎಡ್) ಪದವಿ ಪಡೆದಿರಬೇಕು.

**ಬ್ಯಾಚುಲರ್ ಪದವಿಯಲ್ಲಿ ಸಂಬಂಧಿಸಿದ ಭಾಷಾ ಶಿಕ್ಷಕರ ಹುದ್ದೆಗೆ ಅನುಗುಣವಾದ ಭಾಷಾ ಐಚ್ಛಿಕ ವಿಷಯವನ್ನು ಅಧ್ಯಯನ ಮಾಡದೆ ಇದ್ದಲ್ಲಿ ಅಂಥಹ ಅಭ್ಯರ್ಥಿಗಳು;**

**a)** ಸಂಬಂದಿಸಿದ ಭಾಷಾ ವಿಷಯದಲ್ಲಿ ಸ್ನಾತಕೋತ್ತರ ಪದವಿಯನ್ನು (Post Graduate Degree) ಹೊಂದಿದ್ದಲ್ಲಿ ಸಂಬಂಧಿಸಿದ ಭಾಷಾ ಶಿಕ್ಷಕರ ಹುದ್ದೆಗೆ ಪರಿಗಣಿಸಲು ಅರ್ಹತೆ ಪಡೆಯುತ್ತಾರೆ.

**b)** **ರೀಜನಲ್ ಇನ್ಸ್ಟ್ಯೂಟ್ ಆಫ್ ಇಂಗ್ಲೀಷ್ ಸೌತ್ ಇಂಡಿಯಾ** ಇವರು ನೀಡುವ **ಪೋಸ್ಟ್ ಗ್ರಾಜುಯೇಟ್ ಡಿಪ್ಲೋಮಾ ಸರ್ಟಿಫಿಕೇಟ್ ಇನ್ ಇಂಗ್ಲೀಷ್** ಹೊಂದಿದ್ದಲ್ಲಿ ಅಂತಹ ಅಭ್ಯರ್ಥಿಗಳು ಇಂಗ್ಲೀಷ್ ಭಾಷಾ ಶಿಕ್ಷಕರ ಹುದ್ದೆಗೆ ಪರಿಗಣಿಸಲು ಅರ್ಹತೆ ಪಡೆಯುತ್ತಾರೆ.

**c)** ಹಿಂದಿ ಭಾಷಾ ಶಿಕ್ಷಕರ ಹುದ್ದೆಗೆ ಅಭ್ಯರ್ಥಿಯು, ಭಾರತ ದೇಶದ ಕಾನೂನಿನಂತೆ ಸ್ಥಾಪಿಸಲ್ಪಟ್ಟ ಮತ್ತು ವಿಶ್ವವಿದ್ಯಾಲಯ ಧನ ಸಹಾಯ ಆಯೋಗದಿಂದ ಅಂಗೀಕೃತವಾದ ಒಂದು ವಿಶ್ವವಿದ್ಯಾನಿಲಯದ **ಬ್ಯಾಚುಲರ್ ಪದವೀಧರರಾಗಿದ್ದು,** ಈ ಪದವಿಯಲ್ಲಿ **ಹಿಂದಿ**ಯನ್ನು ಒಂದು ಮೇಜರ್ ಐಚ್ಛಿಕ ವಿಷಯವನ್ನಾಗಿ ಅಧ್ಯಯನ ಮಾಡಿರಬೇಕು.

**ಮತ್ತು**

ಭಾರತ ದೇಶದ ಕಾನೂನಿನಂತೆ ಸ್ಥಾಪಿಸಲ್ಪಟ್ಟ ಮತ್ತು ವಿಶ್ವವಿದ್ಯಾಲಯ ಧನ ಸಹಾಯ ಆಯೋಗದಿಂದ ಅಂಗೀಕೃತವಾದ ಒಂದು ವಿಶ್ವವಿದ್ಯಾನಿಲಯದಿಂದ **ಬ್ಯಾಚುಲರ್ ಆಫ್ ಎಜುಕೇಷನ್ (ಬಿ.ಎಡ್)** ಪದವೀಧರರಾಗಿದ್ದು, ಈ ಪದವಿ ಪರೀಕ್ಷೆಯಲ್ಲಿ **ಹಿಂದಿ**ಯನ್ನು ಬೋಧನಾ ವಿಷಯವನ್ನಾಗಿ ಅಧ್ಯಯನ ಮಾಡಿರಬೇಕು.

**d)** ಇಂಗ್ಲೀಷ್ ಭಾಷಾ ಶಿಕ್ಷಕರ ಹುದ್ದೆಗೆ ಸಂಬಂಧಿಸಿದಂತೆ ಅಭ್ಯರ್ಥಿಗಳು ಬಿ.ಎಡ್. ಪದವಿಯಲ್ಲಿ ಇಂಗ್ಲೀಷ್‌ನ್ನು ಬೋಧನಾ ವಿಷಯವನ್ನಾಗಿ ಅಧ್ಯಯನ ಮಾಡದೆ ಇದ್ದಲ್ಲಿ ಅಂತಹ ಅಭ್ಯರ್ಥಿಗಳು **ರೀಜನಲ್ ಇನ್ಸ್ಟ್ಯೂಟ್ ಆಫ್ ಇಂಗ್ಲೀಷ್, ಸೌತ್ ಇಂಡಿಯಾ** ಇವರು ನೀಡುವ **ಪೋಸ್ಟ್ ಗ್ರಾಜುಯೇಟ್ ಡಿಪ್ಲೋಮಾ ಸರ್ಟಿಫಿಕೇಟ್ ಇನ್ ಇಂಗ್ಲೀಷ್** ಹೊಂದಿದ್ದಲ್ಲಿ ನೇಮಕಾತಿಗೆ ಪರಿಗಣಿಸಲು ಅರ್ಹತೆ ಪಡೆಯುತ್ತಾರೆ.

**ವಿಶೇಷ ಸೂಚನೆ:–** ಮೇಲ್ಕಂಡ ಎ, ಬಿ ಮತ್ತು ಡಿ (ಪ್ರಕರಣಗಳಲ್ಲಿ) ಅಭ್ಯರ್ಥಿಯು ಬ್ಯಾಚುಲರ್ ಪದವಿ ಮತ್ತು ಬ್ಯಾಚುಲರ್ ಆಫ್ ಎಜುಕೇಷನ್ ಪದವಿ ಪರೀಕ್ಷೆಗಳಲ್ಲಿ ಪಡೆದಿರುವ ಅಂಕಗಳನ್ನು ಮಾತ್ರ ಮೆರಿಟ್ ಕಂಡುಕೊಳ್ಳಲು ಪರಿಗಣಿಸಲಾಗುತ್ತದೆ. ಆದರೆ ಸ್ನಾತಕೋತ್ತರ ಮತ್ತು ಡಿಪ್ಲೋಮಾ ಪರೀಕ್ಷೆಗಳಲ್ಲಿ ಪಡೆದಿರುವ ಅಂಕಗಳನ್ನು ಮೆರಿಟ್ ಕಂಡು ಹಿಡಿಯಲು ಗಣನೆಗೆ ತೆಗೆದುಕೊಳ್ಳವುದಿಲ್ಲ.

**ಹಿಂದಿ ಭಾಷಾ ಸಹ ಶಿಕ್ಷಕರ ಹುದ್ದೆಗೆ ಸಂಬಂಧಿಸಿದಂತೆ ಅಭ್ಯರ್ಥಿಯು:–**

1. ದಕ್ಷಿಣ ಭಾರತ ಹಿಂದಿ ಪ್ರಚಾರ ಸಭಾ, ಮದ್ರಾಸ್ ಇವರು ನಡೆಸುವ ರಾಷ್ಟ್ರಭಾಷಾ ಪ್ರವೀಣ್ ಮತ್ತು ಶಿಕ್ಷ ಸ್ನಾತಕ್ (ಹಿಂದಿ ಮತ್ತು ಮತ್ತೊಂದು ಭಾಷೆಯನ್ನು ಬೋಧನಾ ವಿಷಯವನ್ನಾಗಿ ಶಿಕ್ಷಾ ಸ್ನಾತಕ್ ಪರೀಕ್ಷೆಯಲ್ಲಿ ಅಧ್ಯಯನ ಮಾಡಿರಬೇಕು) ಮತ್ತು ಪದವಿ ಪೂರ್ವ ಶಿಕ್ಷಣ (ಪಿ.ಯು.ಸಿ) ಕೋರ್ಸ್ ಅನ್ನು ಪಾಸು ಮಾಡಿದ್ದು, ಈ ಕೋರ್ಸಿನಲ್ಲಿ ಕನ್ನಡ ಅಥವಾ ಯಾವುದೇ ಒಂದು ಪ್ರಾದೇಶಿಕ ಭಾಷೆಯನ್ನು ಒಂದು ವಿಷಯವನ್ನಾಗಿ ಅಥವಾ ಮಾಧ್ಯಮದಲ್ಲಿ ಪಾಸು ಮಾಡಿರಬೇಕು.

**ಅಥವಾ**

2. ರಾಜ್ಯ ಸರ್ಕಾರವು ತತ್ಸಮಾನ ವಿದ್ಯಾರ್ಹತೆ ಎಂದು ಘೋಷಿರುವ ಇತರೆ ಯಾವುದೇ ವಿದ್ಯಾರ್ಹತೆಯನ್ನು ಹೊಂದಿದ್ದಲ್ಲಿ ನೇಮಕಾತಿಗೆ ಪರಿಗಣಿಸಲು ಅರ್ಹತೆ ಪಡೆಯುತ್ತಾರೆ.

ಸರ್ಕಾರದ ಆದೇಶ ಸಂಖ್ಯೆ ಇಡಿ 160 ಪಿಟಿಐ 2003 ದಿನಾಂಕ 24–02–2004ರನ್ವಯ ಈಕೆಳಕಂಡಂತೆ ಪದವಿ ಮತ್ತು ಬಿಇಡಿ ತತ್ಸಮಾನ ವಿದ್ಯಾರ್ಹತೆಯನ್ನು ಹೊಂದಿರಬೇಕು

| ಪದವಿ ತತ್ಸಮಾನ ಪರೀಕ್ಷೆ ಹೆಸರು | ಸಂಸ್ಥೆಯ ಹೆಸರು |
|---|---|
| 1. ಹಿಂದಿ ರತ್ನ | ಮೈಸೂರು ಹಿಂದಿ ಪ್ರಚಾರ ಪರಿಷತ್,ಬೆಂಗಳೂರು |
| 2. ರಾಜ ಭಾಷಾ ವಿದ್ವಾನ್ | ಕರ್ನಾಟಕ ಹಿಂದಿ ಪ್ರಚಾರ ಸಮಿತಿ,ಬೆಂಗಳೂರು |
| 3. ಹಿಂದಿ ಭಾಷಾ ಪ್ರವೀಣ್ | ಕರ್ನಾಟಕ ಮಹಿಳಾ ಹಿಂದಿ ಸೇವಾ ಸಮಿತಿ,ಬೆಂಗಳೂರು |
| 4. ರಾಷ್ಟ್ರಭಾಷಾ ಪ್ರವೀಣ್ | ದಕ್ಷಿಣ ಭಾರತ ಹಿಂದಿ ಪ್ರಚಾರ ಸಭಾ,ಮದ್ರಾಸ್ |

ಸರ್ಕಾರದ ಆದೇಶ ಸಂಖ್ಯೆ ಇಡಿ 125 ಪಿಟಿಐ 2003 ದಿನಾಂಕ 16–08–2003 ರನ್ವಯ ಕೆಳಕಂಡ ವಿದ್ಯಾರ್ಹತೆಗಳನ್ನು ಬಿಎಡ್ ಪರೀಕ್ಷೆಗೆ ತತ್ಸಮಾನವೆಂದು ಈ ಕೆಳಕಂಡ ಷರತ್ತಿಗೆ ಒಳಪಟ್ಟು ಘೋಷಿಸಲಾಗಿದೆ.

| ಬಿಎಡ್ ತತ್ಸಮಾನ ಪರೀಕ್ಷೆ ಹೆಸರು | | ಸಂಸ್ಥೆಯ ಹೆಸರು |
|---|---|---|
| 1. ಹಿಂದಿ ಶಿಕ್ಷಕ್ ಪರೀಕ್ಷೆ | ಅ. | ಕರ್ನಾಟಕ ಮಹಿಳಾ ಹಿಂದಿ ಸೇವಾ ಸಮಿತಿ,ಬೆಂಗಳೂರು |
| | ಆ. | ಕರ್ನಾಟಕ ಹಿಂದಿ ಪ್ರಚಾರ ಸಮಿತಿ,ಬೆಂಗಳೂರು |
| | ಇ. | ಮೈಸೂರು ಹಿಂದಿ ಪ್ರಚಾರ ಪರಿಷತ್,ಬೆಂಗಳೂರು |
| | ಈ. | ಮಾನಸ ಎಜುಕೇಷನ್ ಸೊಸೈಟಿ, ತುಮಕೂರು |
| | ಉ. | ಕರ್ನಾಟಕ ಲೇಬರ್ ಎಜುಕೇಷನ್ ಸೊಸೈಟಿ,ಬೀದರ್ |
| 2. ಹಿಂದಿ ಶಿಕ್ಷಣ ಪಾರಂಗತ್ ಪರೀಕ್ಷೆ | ಅ. | ಸರ್ಕಾರಿ ಹಿಂದಿ ಶಿಕ್ಷಕರ ತರಬೇತಿ ಕಾಲೇಜು, ಮೈಸೂರು. |

I) ಹಿಂದಿ ಶಿಕ್ಷಕ ಮತ್ತು ಹಿಂದಿ ಶಿಕ್ಷಣ ಪರಾಂಗತ ವಿದ್ಯಾರ್ಹತೆ ಹೊಂದಿರುವ ಅಭ್ಯರ್ಥಿಗಳು ಸದರಿ ಕೋರ್ಸನ್ನು ಸೇರುವ ಮುಂಚೆ ಪಿ.ಯು.ಸಿ.ಯನ್ನು ಪಾಸು ಮಾಡಿದ್ದು, ಸದರಿ ಪಿ.ಯು ಕೋರ್ಸಿನಲ್ಲಿ ಕನ್ನಡ ಅಥವಾ ಯಾವುದಾದರೂ ಒಂದು ಪ್ರಾಂತೀಯ ಭಾಷೆಯನ್ನು ಒಂದು ವಿಷಯವನ್ನಾಗಿ ಅಥವಾ ಮಾಧ್ಯಮವನ್ನಾಗಿ ವ್ಯಾಸಂಗ ಮಾಡಿರಬೇಕು.

II) ಹಿಂದಿ ಮತ್ತು ಮತ್ತೊಂದು ಭಾಷೆಯನ್ನು ಬೋಧನಾ ವಿಧಾನವನ್ನಾಗಿ ಅಧ್ಯಯನ ಮಾಡಿರಬೇಕು.

**(ಉ) ದೈಹಿಕ ಶಿಕ್ಷಣ ಶಿಕ್ಷಕ (ಗ್ರೇಡ್–1) ಹುದ್ದೆಗಳಿಗೆ (Physical Education Teacher Grade-I):–**

i) ಭಾರತ ದೇಶದ ಕಾನೂನಿನಂತೆ ಸ್ಥಾಪಿಸಲ್ಪಟ್ಟ ಮತ್ತು ವಿಶ್ವವಿದ್ಯಾಲಯ ಧನ ಸಹಾಯ ಆಯೋಗದಿಂದ ಅಂಗೀಕೃತವಾದ ಒಂದು ವಿಶ್ವವಿದ್ಯಾಲಯದ **"ಬ್ಯಾಚಲರ್ ಪದವಿ"** ಯನ್ನು ಪಡೆದಿರಬೇಕು.

**ಮತ್ತು**

ii) ಭಾರತ ದೇಶದ ಕಾನೂನಿನಂತೆ ಸ್ಥಾಪಿಸಲ್ಪಟ್ಟ ಮತ್ತು ವಿಶ್ವವಿದ್ಯಾಲಯ ಧನ ಸಹಾಯ ಆಯೋಗದಿಂದ ಅಂಗೀಕೃತವಾದ ಒಂದು ವಿಶ್ವವಿದ್ಯಾಲಯದ **"ಬ್ಯಾಚಲರ್ ಆಫ್ ಫಿಸಿಕಲ್ ಎಜುಕೇಷನ್"** ಪದವಿಯನ್ನು ಪಡೆದಿರಬೇಕು. ಅಥವಾ **ಗೌರ್ನಮೆಂಟ್ ಕಾಲೇಜ್ ಆಫ್ ಫಿಸಿಕಲ್ ಎಜುಕೇಷನ್** ಇಲ್ಲಿಂದ **ಡಿಪ್ಲೋಮಾ ಇನ್ ಫಿಸಿಕಲ್ ಎಜುಕೇಷನ್** ಹೊಂದಿರಬೇಕು. ಅಥವಾ ರಾಜ್ಯ ಸರಕಾರವು ತತ್ಸಮಾನ ಪರೀಕ್ಷೆ ಎಂದು ಪರಿಗಣಿಸಿರುವ ವಿದ್ಯಾರ್ಹತೆಯನ್ನು ಹೊಂದಿರಬೇಕು.

**9) ವೇತನ ಶ್ರೇಣಿ:– ಪ್ರೌಢ ಶಾಲಾ ಸಹಾಯಕ ಶಿಕ್ಷಕರು ಗ್ರೇಡ್–2 ಹಾಗೂ ದೈಹಿಕ ಶಿಕ್ಷಣ ಶಿಕ್ಷಕ (ಗ್ರೇಡ್–1) ವೃಂದದ ಹುದ್ದೆಗಳಿಗೆ :** ರೂ.8825 –225–9500–250–10500–300–12300–350–14400–400–16000.

**10) ವಯೋಮಿತಿ**

**ಅಭ್ಯರ್ಥಿಗಳು ಈ ನೇಮಕಾತಿ ಅಧಿಸೂಚನೆ ದಿನಾಂಕದಂದು ಮುಂದೆ ತಿಳಿಸಿರುವ ಕನಿಷ್ಠ ಮತ್ತು ಗರಿಷ್ಠ ವಯೋಮಿತಿಯೊಳಗಿರಬೇಕು.**

**ಕನಿಷ್ಠ :** 20 ವರ್ಷಗಳು ತುಂಬಿರಬೇಕು.

**ಗರಿಷ್ಠ :**

| | |
|---|---|
| ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡ ಅಥವಾ ಹಿಂದುಳಿದ ಪ್ರವರ್ಗ–1ಕ್ಕೆ **ಸೇರಿದ ಅಭ್ಯರ್ಥಿಗಳು** | 45 ವರ್ಷಗಳನ್ನು ತಲುಪಿರಬಾರದು. |
| ಪ್ರವರ್ಗ 2(ಎ), 2(ಬಿ), 3(ಎ) ಮತ್ತು 3(ಬಿ) **ಗಳಿಗೆ ಸೇರಿದ ಅಭ್ಯರ್ಥಿಗಳು** | 43 ವರ್ಷಗಳನ್ನು ತಲುಪಿರಬಾರದು. |
| ಇತರೆ ಅಭ್ಯರ್ಥಿಗಳು [ಸಾಮಾನ್ಯ ಅಭ್ಯರ್ಥಿಗಳು] | 40 ವರ್ಷಗಳನ್ನು ತಲುಪಿರಬಾರದು. |

**ಗರಿಷ್ಠ ವಯೋಮಿತಿಯ ಸಡಿಲಿಕೆ:**

**i)** ಸರ್ಕಾರಿ ಪ್ರೌಢಶಾಲೆಗಳಲ್ಲಿ ಕಾರ್ಯನಿರ್ವಹಿಸಿದ /ನಿರ್ವಹಿಸುತ್ತಿರುವ "ಅರೆಕಾಲಿಕ" ಮತ್ತು ಗೌರವ ಶಿಕ್ಷಕರುಗಳಿಗೆ ಗರಿಷ್ಠ ವಯೋಮಿತಿಯನ್ನು ಅವರುಗಳು "ಅರೆಕಾಲಿಕ/ಗೌರವ ಶಿಕ್ಷಕರ ಸೇವೆ ಸಲ್ಲಿಸಿದ ವರ್ಷಗಳಷ್ಟು ( ಗರಿಷ್ಠ 10 ವರ್ಷಗಳ ಮಿತಿಗೆ ಒಳಪಟ್ಟು) ಸಡಿಲಿಕೆ ಇರುತ್ತದೆ.

**ii)** ಮಾಜಿ ಸೈನಿಕ ಅಭ್ಯರ್ಥಿಗಳು 1977ರ ಕರ್ನಾಟಕ ರಾಜ್ಯ ಸರ್ಕಾರಿ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳ ಪ್ರಕಾರ ವಯೋಮಿತಿ ಸಡಿಲಿಕೆಗೆ ಅರ್ಹರಿರುತ್ತಾರೆ.

**11) ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆ:–** ಆಯ್ಕೆ ಬಯಸುವ ಪ್ರತಿ ಅಭ್ಯರ್ಥಿಯು ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಗೆ ಕಡ್ಡಾಯವಾಗಿ ಹಾಜರಾಗಬೇಕು.

**12) ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆ ಬಗ್ಗೆ ವಿವರಗಳು:–**

**i) ಪರೀಕ್ಷೆ ಹೆಸರು:** ಸರಕಾರಿ ಪ್ರೌಢ ಶಾಲಾ ಸಹಾಯಕ ಶಿಕ್ಷಕ (ಗ್ರೇಡ್–2) ವೃಂದದ ಮತ್ತು ದೈಹಿಕ ಶಿಕ್ಷಣ ಶಿಕ್ಷಕ (ಗ್ರೇಡ್–1) ವೃಂದದ ಶಿಕ್ಷಕರ ಹುದ್ದೆಗಳಿಗೆ ನೇರ ನೇಮಕಾತಿಗಾಗಿ ನಡೆಸುವ ವಿಭಾಗೀಯ ಮಟ್ಟದ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆ.

**ii) ಪರೀಕ್ಷೆ ನಡೆಸುವ ಪ್ರಾಧಿಕಾರಿ:** ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯನ್ನು ಮೈಸೂರು ವಿಭಾಗೀಯ ಕಾರ್ಯದರ್ಶಿಗಳು, ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ ಹಾಗೂ ಪದನಿಮಿತ್ತ ಸಹನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಗುಲ್ಬರ್ಗಾ ವಿಭಾಗ, ಗುಲ್ಬರ್ಗಾ ಇವರು ವಿಭಾಗ ಮಟ್ಟದಲ್ಲಿ ನಡೆಸುವರು. ವಿಭಾಗದ ವ್ಯಾಪ್ತಿಯಲ್ಲಿ ಬರುವ ಶೈಕ್ಷಣಿಕ ಜಿಲ್ಲೆಗಳು (ಬಳ್ಳಾರಿ, ಬೀದರ್, ಗುಲ್ಬರ್ಗಾ, ಕೊಪ್ಪಳ, ರಾಯಚೂರು ಹಾಗೂ ಯಾದಗೀರ್) ಪರೀಕ್ಷಾ ಕೇಂದ್ರಗಳಾಗಿರುತ್ತವೆ.

**iii) ಪರೀಕ್ಷೆಯ ದಿನಾಂಕ: ಶನಿವಾರ 08-08-2009 ಮತ್ತು ಭಾನುವಾರ 09-08-2009**

**iv) ಪರೀಕ್ಷೆಯ ಅವಧಿ ಮತ್ತು ಸಮಯ :**

ಶನಿವಾರ ದಿನಾಂಕ: 08-08-2009 : ಪ್ರಥಮ ಪತ್ರಿಕೆ ಪೂರ್ವಾಹ್ನ 10-30 ರಿಂದ 12-30 ರವರೆಗೆ.
ದ್ವಿತೀಯ ಪತ್ರಿಕೆ ಅಪರಾಹ್ನ 2-30 ರಿಂದ 4-30 ರವರೆಗೆ.

ಭಾನುವಾರ ದಿನಾಂಕ; :09-08-2009 : ಪೂರ್ವಾಹ್ನ 9-00 ರಿಂದ 11-00 ರವರೆಗೆ
ಅಪರಾಹ್ನ 12-00 ರಿಂದ 2-00 ರವರೆಗೆ
ಅಪರಾಹ್ನ 3-00 ರಿಂದ 5-00 ರವರೆಗೆ.

**v) ಪರೀಕ್ಷಾ ಮಾಧ್ಯಮ :** ಕನ್ನಡ ಮತ್ತು ಇಂಗ್ಲೀಷ್.

**vi) ಪ್ರಶ್ನೆ ಪತ್ರಿಕೆ, ಅಂಕಗಳು ಮತ್ತು ವಿಷಯ :** ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆ ಕೆಳಕಂಡ ವಿಷಯಗಳಲ್ಲಿ ಪ್ರಶ್ನೆ ಪತ್ರಿಕಗಳನ್ನು ಹೊಂದಿರುತ್ತದೆ. ಪ್ರತಿ ಪ್ರಶ್ನೆ ಪತ್ರಿಕೆಯು 100 ಅಂಕಗಳನ್ನು ಒಳಗೊಂಡಿದು, ಭಾಷಾ ವಿಷಯಗಳನ್ನು ಹೊರತುಪಡಿಸಿ ಉಳಿದ ಎಲ್ಲಾ ಪ್ರಶ್ನೆ ಪತ್ರಿಕೆಗಳು ಕನ್ನಡ ಮತ್ತು ಆಂಗ್ಲ ಮಾಧ್ಯಮದಲ್ಲಿ ಇರುತ್ತದೆ. ಎಲ್ಲಾ ಅಭ್ಯರ್ಥಿಗಳು ಸಾಮಾನ್ಯ ಪತ್ರಿಕೆಯು ಸೇರಿದಂತೆ ಅವರು ಆಯ್ಕೆ ಮಾಡಿಕೊಂಡಿರುವ ವಿಷಯಗಳಿಗೆ ಅನುಗುಣವಾಗಿ ಕಡ್ಡಾಯವಾಗಿ ಪರೀಕ್ಷೆಗಳಲ್ಲಿ ಹಾಜರಾಗಿರಬೇಕಾಗಿರುತ್ತದೆ.

| ಕ್ರ. ಸಂ. | ಹುದ್ದೆಯ ಹೆಸರು | ವಿಷಯ | ಅಂಕಗಳು |
|---|---|---|---|
| 1 | ಪ್ರೌಢ ಶಾಲಾ ಸಹಾಯಕ ಶಿಕ್ಷಕ ಗ್ರೇಡ್-2 (ಫಿಸಿಕಲ್ ಸೈನ್ಸ್, ಬಯಾಲಜಿಕಲ್ ಸೈನ್ಸ್, ಕಲಾ ಹಾಗೂ ಎಲ್ಲಾ ಭಾಷಾ ಶಿಕ್ಷಕರ ಹುದ್ದೆಗಳು)/ ದೈಹಿಕ ಶಿಕ್ಷಣ ಶಿಕ್ಷಕ ಗ್ರೇಡ್-1 | <u>ಸಾಮಾನ್ಯ ಪ್ರಶ್ನೆ ಪತ್ರಿಕೆ</u> ಸಾಮಾನ್ಯ ಜ್ಞಾನ ಶೈಕ್ಷಣಿಕ ಮನೋವಿಜ್ಞಾನ ಮೆಂಟಲ್ ಎಬಿಲಿಟಿ | 100 |

**ದ್ವಿತೀಯ / ಐಚ್ಛಿಕ ಪತ್ರಿಕೆ :**

| | | | |
|---|---|---|---|
| 2 | ಕಲಾ ಶಿಕ್ಷಕರು | ಇತಿಹಾಸ, ಭೂಗೋಳ ಶಾಸ್ತ್ರ, ಅರ್ಥಶಾಸ್ತ್ರ ಪೌರನೀತಿ | 100 |
| 3 | ಭಾಷಾ ಶಿಕ್ಷಕರ ಹುದ್ದೆಗಳಿಗೆ | ಕನ್ನಡ / ಇಂಗ್ಲೀಷ್ / ಉರ್ದು / ಹಿಂದಿ / ಮರಾಠಿ / ತೆಲಗು / ತಮಿಳು ಮತ್ತು ಸಂಸ್ಕೃತ | 100 |
| 4 | ಫಿಸಿಕಲ್ ಸೈನ್ಸ್ ( ಭೌತ ವಿಜ್ಞಾನ ) | ಭೌತ ಶಾಸ್ತ್ರ ಮತ್ತು ಗಣಿತ ಶಾಸ್ತ್ರ | 100 |
| 5 | ಬಯಾಲಾಜಿಕಲ್ ಸೈನ್ಸ್ (ಜೀವ ವಿಜ್ಞಾನ ) | ರಸಾಯನ ಶಾಸ್ತ್ರ, ಪ್ರಾಣಿ ಶಾಸ್ತ್ರ, ಸಸ್ಯಶಾಸ್ತ್ರ | 100 |
| 6 | ದೈಹಿಕ ಶಿಕ್ಷಣ ಗ್ರೇಡ್-1 ಶಿಕ್ಷಕರು | ದೈಹಿಕ ಶಿಕ್ಷಣದ ಇತಿಹಾಸ, ತತ್ವಗಳು ಮತ್ತು ತತ್ವಜ್ಞಾನ, ದೈಹಿಕ ಶಿಕ್ಷಣದ ಆಡಳಿತ ಮತ್ತು ಸಂಘಟನೆ, ದೈಹಿಕ ಶಿಕ್ಷಣದ ಮನೋಜ್ಞಾನ ಸಾಮಾಗ್ರಿ ಮತ್ತು ಬೋಧನಾ ವಿಧಾನ, ಅಂಗರಚನಾಶಾಸ್ತ್ರ, ಅಂಗಕಾರ್ಯಶಾಸ್ತ್ರ ಮತ್ತು ಜೀವಶಾಸ್ತ್ರ, ಆರೋಗ್ಯ ಶಿಕ್ಷಣ, ಸುರಕ್ಷಣಾ ಶಿಕ್ಷಣ ಮತ್ತು ಅಂಗೆಲಸ ವ್ಯಾಯಮ, ಕ್ರೀಶಾಧಿಕಾರತ್ವ ಮತ್ತು ಕ್ರೀಡಾ ತರಬೇತಿ ತತ್ವಗಳು | 100 |

**ಪ್ರಶ್ನೆಗಳ ವ್ಯಾಪ್ತಿ ಹಾಗೂ ಸ್ವರೂಪ:** 1) ಪ್ರಶ್ನೆಗಳು ನಿಗದಿಪಡಿಸಲಾಗಿರುವ ಪಠ್ಯವಸ್ತುವಿನ ವ್ಯಾಪ್ತಿಯಲ್ಲಿರುತ್ತದೆ.

2) ಪ್ರಶ್ನೆಗಳು ವಸ್ತುನಿಷ್ಠವಾಗಿದ್ದು ಪ್ರತಿ ಪ್ರಶ್ನೆಗೆ ಒಂದು ಅಂಕ ನಿಗದಿಪಡಿಸಿದೆ.

3) ಪ್ರತಿ ಪ್ರಶ್ನೆ 4 ಉತ್ತರಗಳನ್ನು ಹೊಂದಿದ್ದು ಇವುಗಳಲ್ಲಿ ಒಂದು ಸರಿ ಉತ್ತರವಾಗಿರುತ್ತದೆ.

4) ಉತ್ತರಗಳನ್ನು " ಓ.ಎಂ.ಆರ್." ಶೀಟಿನಲ್ಲಿ ಗುರ್ತಿಸುವುದು.

ಪ್ರಶ್ನೆ ಪತ್ರಿಕೆಗಳು ಕನ್ನಡ ಮತ್ತು ಆಂಗ್ಲ ಭಾಷೆಯಲ್ಲಿರುತ್ತದೆ. ಭಾಷಾ ವಿಷಯಕ್ಕೆ ಸಂಬಂಧಿಸಿದಂತೆ ಆಯಾ ಭಾಷೆಯಲ್ಲಿರುತ್ತದೆ.

**13) ಆಯ್ಕೆ ವಿಧಾನ:**

ಅಭ್ಯರ್ಥಿಗಳನ್ನು **"ದಿ ಕರ್ನಾಟಕ ಎಜುಕೇಷನ್ ಡಿಪಾರ್ಟ್‌ಮೆಂಟ್ ಸರ್ವೀಸಸ್ (ಡಿಪಾರ್ಟ್‌ಮೆಂಟ್ ಆಫ್ ಪಬ್ಲಿಕ್ ಇನ್‌ಸ್ಟ್ರಕ್ಷನ್) (ರಿಕ್ರೂಟ್‌ಮೆಂಟ್) (ಅಮೆಂಡ್‌ಮೆಂಟ್) ರೂಲ್ಸ್ 2002"** ನಿಯಮಗಳ ಅನ್ವಯ ಮೆರಿಟ್ ಮತ್ತು ಕರ್ನಾಟಕ ಸರ್ಕಾರದ ಪ್ರಚಲಿತ ಮೀಸಲಾತಿ ನಿಯಮಗಳ ಆಧಾರದ ಮೇಲೆ ಆಯ್ಕೆ ಮಾಡಲಾಗುವುದು.

**ಅರ್ಹತೆ ನಿರ್ಧರಿಸುವುದು:–**

**ಅ) ಪ್ರೌಢ ಶಾಲಾ ಸಹ ಶಿಕ್ಷಕ ಗ್ರೇಡ್–2 ವೃಂದದ (ಕಲಾ, ಭೌತ ವಿಜ್ಞಾನ, ಜೀವ ವಿಜ್ಞಾನ ಮತ್ತು ಭಾಷೆಗಳು) ಶಿಕ್ಷಕರ ವಿವಿಧ ಮಾಧ್ಯಮದ ಹುದ್ದೆಗಳಿಗೆ:–**

ಅಭ್ಯರ್ಥಿಯು ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಪಡೆದ ಒಟ್ಟು ಅಂಕಗಳ ಶೇಕಡ 70%, ಮತ್ತು ಬಿ.ಎ/ಬಿ.ಎಸ್ಸಿ. ಪದವಿ ಪರೀಕ್ಷೆಯ ಒಟ್ಟು ಅಂಕಗಳ ಶೇಕಡ 20%, ಹಾಗೂ ಬಿ.ಎಡ್. ಪದವಿ ಪರೀಕ್ಷೆಯಲ್ಲಿ ಪಡೆದಿರುವ ಒಟ್ಟು ಅಂಕಗಳ ಶೇಕಡ 10%, ಈ ಮೂರು ಒಟ್ಟು ಅಂಕಗಳ ಮೇಲೆ ಮೆರಿಟ್ ಪಟ್ಟಿ ತಯಾರಿಸಿ, ಪ್ರಚಲಿತ ಮೀಸಲಾತಿ ನಿಯಮಗಳ ಅನ್ವಯ ಆಯ್ಕೆ ಮಾಡಲಾಗುವುದು.

ಮೇಲ್ಕಂಡ ಮೆರಿಟ್ ಲಿಸ್ಟ್ ತಯಾರಿಸುವಾಗ ಅಭ್ಯರ್ಥಿಯು ಸರ್ಕಾರಿ ಪ್ರೌಢ ಶಾಲೆಗಳಲ್ಲಿ ಸಂಬಂಧಿಸಿದ ವಿಷಯದಲ್ಲಿ **"ಅರೆಕಾಲಿಕ ಅಥವಾ ಗೌರವ"** ಶಿಕ್ಷಕರಾಗಿ, ಅಥವಾ ಭಾರತೀಯ ಜನಗಣತಿ ಸಂಸ್ಥೆಯಲ್ಲಿ ಗುತ್ತಿಗೆ ಆಧಾರದ ಮೇಲೆ ಸಕ್ಷಮ ಪ್ರಾಧಿಕಾರದಿಂದ ನೇಮಕಗೊಂಡು ಹಾಲಿ ಸೇವೆ ಸಲ್ಲಿಸುತ್ತಿದ್ದಲ್ಲಿ / ಸೇವೆ ಸಲ್ಲಿಸಿದ್ದಲ್ಲಿ ಹಾಗೆ ಸೇವೆ ಸಲ್ಲಿಸಿದ ಪೂರ್ಣಗೊಂಡ ಪ್ರತಿ ಒಂದು ವರ್ಷದ ಸೇವೆಗೆ ಶೇಕಡ 2% ರಷ್ಟು ಕೃಪಾಂಕಗಳನ್ನು ನೇಮಕಾತಿ ನಿಯಮಗಳ ಪ್ರಕಾರ ಅರ್ಹತೆ ಇದ್ದಲ್ಲಿ ಮಾತ್ರ ಮೇಲಿನ ಕಂಡಿಕೆಯಲ್ಲಿ ವಿವರಿಸಿರುವ ಒಟ್ಟು ಅಂಕಗಳಿಗೆ ಸೇರಿಸಲಾಗುವುದು.

**ವಿವರಣೆ:–** ಅ) ಮೊದಲಿಗೆ, ಬಿ.ಎ/ಬಿ.ಎಸ್ಸಿ. ಪದವಿ ಪರೀಕ್ಷೆಯ ಎಲ್ಲಾ ವರ್ಷಗಳಲ್ಲಿ, ಎಲ್ಲಾ ವಿಷಯಗಳಲ್ಲಿ ಪಡೆದಿರುವ ಒಟ್ಟು ಅಂಕಗಳನ್ನು ಶೇಕಡ 20%ಕ್ಕೆ ಲೆಕ್ಕ ಹಾಕಲಾಗುವುದು.

ಆ) ಬಿ.ಎಡ್. ಪದವಿ ಪರೀಕ್ಷೆಯಲ್ಲಿ ಪಡೆದ ಒಟ್ಟು ಅಂಕಗಳನ್ನು ಶೇಕಡ 10%ಕ್ಕೆ ಲೆಕ್ಕ ಹಾಕಲಾಗುವುದು.

ಇ) ನಂತರ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಪಡೆದ ಒಟ್ಟು ಅಂಕಗಳನ್ನು ಶೇಕಡ 70%ಕ್ಕೆ ಲೆಕ್ಕ ಹಾಕಲಾಗುವುದು.

ಈ) ಬಿ.ಎ/ಬಿ.ಎಸ್ಸಿ/ಬ್ಯಾಚುಲರ್ ಪದವಿ/ತತ್ಸಮಾನ ಪರೀಕ್ಷೆಯ ಶೇಕಡ 20%, ಬಿ.ಎಡ್ ಪದವಿಯ/ಬಿ.ಪಿ.ಎಡ್/ ತತ್ಸಮಾನ ಪರೀಕ್ಷೆಯ ಶೇಕಡ 10%, ಮತ್ತು ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯ ಶೇಕಡ 70% ಅಂಕಗಳನ್ನು ಸೇರಿಸಿ ಒಟ್ಟು ಶೇಕಡ 100 ಅಂಕಕ್ಕೆ ಪಡೆದ ಅಂಕಗಳನ್ನು ಕಂಡುಕೊಳ್ಳಲಾಗುವುದು. ಮತ್ತು ಮೇರಿಟಿಗೆ ಪರಿಗಣಿಸಲಾಗುವುದು.

ಉ) ಮೇಲಿನ ಒಟ್ಟು ಶೇಕಡ ಅಂಕಗಳಿಗೆ (ಪ್ಯಾರ "ಈ"), ಅರೆಕಾಲಿಕ ಅಥವಾ ಗೌರವ ಶಿಕ್ಷಕ/ಭಾರತೀಯ ಜನಗಣತಿಯಲ್ಲಿ ಗುತ್ತಿಗೆ ಆಧಾರದ ಮೇಲೆ ಕಾರ್ಯನಿರ್ವಹಿಸಿದಂತಹ ಅಭ್ಯರ್ಥಿಗಳಿಗೆ ಪ್ರಸ್ತುತ ನೇಮಕಾತಿ ನಿಯಮಗಳ ಪ್ರಕಾರ ಅರ್ಹತೆ ಇದ್ದಲ್ಲಿ ಮಾತ್ರ ಪ್ರತಿ ಪೂರ್ಣಗೊಂಡ ಒಂದು ವರ್ಷದ ಸೇವೆಗೆ ಶೇಕಡ 2% ರಂತೆ ಕೃಪಾಂಕಗಳನ್ನು ಸೇರಿಸಲಾಗುವುದು.

(ಈ+ಉ) ಒಟ್ಟು ಅಂಕಗಳನ್ನು ಪ್ರತಿ ಅಭ್ಯರ್ಥಿಯ ಮೆರಿಟ್ (ಅರ್ಹತಾ) ಅಂಕಗಳೆಂದು ನಿರ್ಧರಿಸಲಾಗುವುದು.

**ಉದಾಹರಣೆ:–**

"X" ಎಂಬ ಅಭ್ಯರ್ಥಿಯು ಅರ್ಹತಾ ಪದವಿ (ಬಿ.ಎ/ಬಿ.ಎಸ್ಸಿ ಮತ್ತು ಬಿ.ಎಡ್/ಬಿ.ಪಿ.ಎಡ್ ಪರೀಕ್ಷೆಗಳಲ್ಲಿ ಹಾಗೂ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ಪಡೆದಿರುವ ಅಂಕಗಳು ಹಾಗೂ ಅರೆಕಾಲಿಕ, ಗೌರವ ಶಿಕ್ಷಕರಾಗಿ, ಜನಗಣತಿ ಸಂಸ್ಥೆಯಲ್ಲಿ ಸೇವೆ ಸಲ್ಲಿಸಿದ್ದ ಬಾಬ್ತು ಪಡೆದು ಕೊಂಡಿರುವ ಕೃಪಾಂಕಗಳ ವಿವರಗಳು ಈ ರೀತಿ ಇದೆ.

| ಕ್ರ. ಸಂ. | ಪರೀಕ್ಷೆಯ ಹೆಸರು | ಗರಿಷ್ಠ ಅಂಕಗಳು | ಗಳಿಸಿದ ಅಂಕ |
|---|---|---|---|
| 1 | ಬಿ.ಎಸ್ಸಿ. ಪದವಿ | | |
| | ಅ) ಪ್ರಥಮ ವರ್ಷ | 500 | 300 |
| | ಆ) ದ್ವಿತೀಯ ವರ್ಷ | 500 | 360 |
| | ಇ) ತೃತೀಯ ವರ್ಷ | 900 | 540 |
| | **ಒಟ್ಟು** | **1900** | **1200** |
| 2 | ಬಿ.ಎಡ್. ಪದವಿ | 1000 | 600 |
| 3 | ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಗಳಿಸಿದ ಅಂಕಗಳು | 200 | 140 |
| 4 | "X"ಅಭ್ಯರ್ಥಿಯು ಮೂರು ವರ್ಷಗಳ ಕಾಲ ಅರೆಕಾಲಿಕ ಶಿಕ್ಷಕರಾಗಿ ಸರ್ಕಾರಿ ಪ್ರೌಢ ಶಾಲೆಯಲ್ಲಿ ಸೇವೆ ಸಲ್ಲಿಸಿರುತ್ತಾರೆ | 3 X 2 | = ಶೇಕಡಾ 6 ಕೃಪಾಂಕಗಳು |

ಅ) ಬಿ.ಎಸ್ಸಿ.ಪದವಿಯಲ್ಲಿ X ಅಭ್ಯರ್ಥಿ ಪಡೆದ ಶೇಕಡ 20 ಅಂಕಗಳು = ಗಳಿಸಿದ ಒಟ್ಟು ಅಂಕಗಳು X 20 / ಒಟ್ಟು ಗರಿಷ್ಠ ಅಂಕಗಳು

= 1200 X 20 / 1900

= 12.63157

ಆ) ಬಿ.ಎಡ್. ಪದವಿ ಪರೀಕ್ಷೆಯಲ್ಲಿ ಶೇಕಡ 10 ಅಂಕಗಳು = ಗಳಿಸಿದ ಒಟ್ಟು ಅಂಕಗಳು X 10 / ಒಟ್ಟು ಗರಿಷ್ಠ ಅಂಕಗಳು

= 600 X 10 / 1000

= 6.00000

ಇ) ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಶೇಕಡ 70 ಅಂಕಗಳು = ಗಳಿಸಿದ ಒಟ್ಟು ಅಂಕಗಳು X 70 / ಒಟ್ಟು ಗರಿಷ್ಠ ಅಂಕಗಳು

= 140 X 70 / 200

= 9800 / 200

= 49.00000

ಈ) X ಅಭ್ಯರ್ಥಿಯು ಬಿ.ಎಸ್ಸಿ., ಬಿ.ಎಡ್. ಹಾಗೂ ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ಪಡೆದ ಒಟ್ಟು ಅಂಕಗಳು (ಅ+ಆ+ಇ)

: ಬಿ.ಎಸ್ಸಿ. : 12.63157
: ಬಿ.ಎಡ್ : 06.0000
ಸಂ.ಸ್ಪ.ಪ. : 49.0000
ಒಟ್ಟು : 67.63157

ಉ) X ಅಭ್ಯರ್ಥಿಯು ಸಲ್ಲಿಸಿರುವ ಮೂರು ವರ್ಷ ಅರೆಕಾಲಿಕ ಶಿಕ್ಷಕರ ಸೇವೆಗೆ ಪ್ರತಿ ಪೂರ್ಣಗೊಳಿಸಿದ ವರ್ಷಕ್ಕೆ ಶೇಕಡ 2ರಂತೆ ಕೃಪಾಂಕಗಳು = 3 X 2 = ಶೇಕಡಾ 6 ಕೃಪಾಂಕಗಳು

ಊ) X ಎಂಬ ಅಭ್ಯರ್ಥಿಯ ಅಂತಿಮ ಮೆರಿಟ್ ಅಂಕಗಳು (ಈ+ಉ) = 67.63157

\+

ಕೃಪಾಂಕಗಳು = 06.0000

ಒಟ್ಟು (ಮೆರಿಟ್) = 73.63157

**14) ಮೀಸಲಾತಿ ಅವಕಾಶಗಳು:–**

ಅ) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 08 ಸಹಿಮ 95 ದಿನಾಂಕ 20–06–1995 ಮತ್ತು ನಂತರ ಹಾಲಿ ಜಾರಿಯಲ್ಲಿರುವ ಮೀಸಲಾತಿ ನಿಯಮಗಳ ಪ್ರಕಾರ ಲಭ್ಯವಿರುವ ರಿಕ್ತ ಸ್ಥಾನಗಳನ್ನು ಈ ಕೆಳಕಂಡ ಪ್ರಮಾಣದಲ್ಲಿ ನಿಯಮಾನುಸಾರ ಮೀಸಲಿರಿಸಲಾಗಿದೆ.

| | |
|---|---|
| ಸಾಮಾನ್ಯ ಅರ್ಹತೆ | ಶೇ. 50 |
| ಪರಿಶಿಷ್ಟ ಪಂಗಡ | ಶೇ. 03 |
| ಪರಿಶಿಷ್ಟ ಜಾತಿ | ಶೇ. 15 |
| ಪ್ರವರ್ಗ–1 | ಶೇ. 04 |
| ಪ್ರವರ್ಗ–2ಎ | ಶೇ. 15 |
| ಪ್ರವರ್ಗ–2ಬಿ | ಶೇ. 04 |
| ಪ್ರವರ್ಗ–3ಎ | ಶೇ. 04 |
| ಪ್ರವರ್ಗ–3ಬಿ | ಶೇ. 05 |
| ಒಟ್ಟು | 100 |

ಪ್ರವರ್ಗ–1, 2ಎ, 2ಬಿ, 3ಎ, ಹಾಗೂ 3ಬಿ ಈ ಪ್ರವರ್ಗಗಳಿಗೆ ಮೀಸಲಿರಿಸಿದ ರಿಕ್ತ ಸ್ಥಾನಗಳಿಗೆ ಅದೇ ವರ್ಗಕ್ಕೆ ಸೇರಿದ ಅಭ್ಯರ್ಥಿಗಳು ದೊರೆಯದಿದ್ದಲ್ಲಿ ಈ ಸ್ಥಾನಗಳನ್ನು ಸಾಮಾನ್ಯ ಅಭ್ಯರ್ಥಿಗಳಿಂದ ತುಂಬಲಾಗುವುದು. ಆದರೆ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡದ ಅಭ್ಯರ್ಥಿಗಳು ದೊರೆಯದಿದ್ದಲ್ಲಿ ಅಂತಹ ರಿಕ್ತ ಸ್ಥಾನಗಳನ್ನು ಭರ್ತಿ ಮಾಡದೆ ಬ್ಯಾಕಲಾಗ್ ಹುದ್ದೆಗಳೆಂದು ಪರಿಗಣಿಸಲಾಗುವುದು.

ಆ) ಮೇಲೆ ವಿವರಿಸಿದ ಸಾಮಾನ್ಯ ಅರ್ಹತೆ ಸೇರಿದಂತೆ ಪ್ರತಿ ಮೀಸಲಾತಿ ಪ್ರವರ್ಗಗಳಿಗೆ ಈ ಕೆಳಕಂಡ ಆದೇಶಗಳ ಪ್ರಕಾರ **"ಸಮತಳ ಮೀಸಲಾತಿ"** (Horizontal reservation) ಅನ್ವಯ ಹುದ್ದೆಗಳನ್ನು ವರ್ಗೀಕರಿಸಲಾಗಿದೆ.

| | | | |
|---|---|---|---|
| 1 | ಮಾಜಿ ಸೈನಿಕರಿಗೆ | ಶೇಕಡ 10 | ಕರ್ನಾಟಕ ಸಿವಿಲ್ ಸರ್ವೀಸಸ್ (ಜನರಲ್ ರೆಕ್ರೂಟ್‌ಮೆಂಟ್) ರೂಲ್ಸ್ 1977ರ ನಿಯಮ 9(1)ರ ಅನ್ವಯ ಹಾಗೂ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 97 ಸೇನೆನಿ 2002 ದಿನಾಂಕ 22–11–2002.ಮತ್ತು ಸರ್ಕಾರದ ಆದೇಶ ಸಂಖ್ಯೆ ಸಿಆಸುಇ53/ಸೇನೆನಿ/2007 ದಿನಾಂಕ:–04–01–2008 |
| 2 | ಅಂಗವಿಕಲರಿಗೆ | ಶೇಕಡ 5 | ಕರ್ನಾಟಕ ಸಿವಿಲ್ ಸರ್ವೀಸಸ್ (ಜನರಲ್ ರೆಕ್ರೂಟ್‌ಮೆಂಟ್) ರೂಲ್ಸ್ 1977 ನಿಯಮ 9(1)(ಎ)ರ ಅನ್ವಯ ಹಾಗೂ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 97 ಸೇನೆನಿ 2002 ದಿನಾಂಕ 22–11–2002. ಮತ್ತು ಸರ್ಕಾರದ ಆದೇಶ ಸಂಖ್ಯೆ ಸಿಆಸುಇ53/ಸೇನೆನಿ/2007 ದಿನಾಂಕ:–04–01–2008 |
| 3 | ಮಹಿಳಾ ಅಭ್ಯರ್ಥಿಗಳಿಗೆ | ಶೇಕಡ 30 | ಕರ್ನಾಟಕ ಸಿವಿಲ್ ಸರ್ವೀಸಸ್ (ಜನರಲ್ ರೆಕ್ರೂಟ್‌ಮೆಂಟ್) ರೂಲ್ಸ್ 1977ರ ನಿಯಮ 9(1)(ಬಿ) ಮತ್ತು ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 97 ಸೇನೆನಿ 2002 ದಿನಾಂಕ 22–11–2002. ಹಾಗೂ ಸರ್ಕಾರದ ಸುತ್ತೋಲೆ ಸಂಖ್ಯೆ ಸಿಅಸುಇ 16/ಸೇನೇನಿ 2008 ದಿನಾಂಕ 01–09–2008 ಮತ್ತು ಸರ್ಕಾರದ ಆದೇಶ ಸಂಖ್ಯೆ ಸಿಆಸುಇ53/ಸೇನೆನಿ/2007ದಿನಾಂಕ:–04–01–2008 |
| 4 | ಯೋಜನೆಗಳಿಂದ ನಿರಾಶ್ರಿತರಾದವರ ಕುಟುಂಬದವರ ಅಭ್ಯರ್ಥಿಗಳಿಗಾಗಿ | ಶೇಕಡ 5 | ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 23 ಎಸ್‌ಆರ್‌ಆರ್ 99 ದಿನಾಂಕ 23–11–2000 ಮತ್ತು ಸರ್ಕಾರದ ಆದೇಶದ ಸಂಖ್ಯೆ: ಸಿಆಸುಇ 97 ಸೇನೆನಿ 2002 ದಿನಾಂಕ 22–11–2002 ಮತ್ತು ಸರ್ಕಾರದ ಆದೇಶ ಸಂಖ್ಯೆ ಸಿಆಸುಇ53/ಸೇನೆನಿ/2007 ದಿನಾಂಕ:–04–01–2008 |
| 5 | ಗ್ರಾಮೀಣ ಅಭ್ಯರ್ಥಿಗಳಿಗೆ | ಶೇಕಡ 25 | 2000ದ ಕರ್ನಾಟಕ ಗ್ರಾಮೀಣ ಅಭ್ಯರ್ಥಿಗಳಿಗಾಗಿ (ರಾಜ್ಯ ಸಿವಿಲ್ ಸೇವೆಗಳಲ್ಲಿ ನೇಮಕಾತಿ ಅಥವಾ ಹುದ್ದೆಗಳ ಮೀಸಲಾತಿ ವಿಧೇಯಕ) ಹಾಗೂ ಸರಕಾರದ ಆದೇಶ ಸಂಖ್ಯೆ: ಸಿಆಸುಇ 97 ಸೇನೆನಿ 2002 ದಿನಾಂಕ 22–11–2002 ಮತ್ತು ಸರ್ಕಾರದ ಆದೇಶ ಸಂಖ್ಯೆ ಸಿಆಸುಇ53/ಸೇನೆನಿ/2007 ದಿನಾಂಕ:–04–01–2008 |
| 6 | ಕನ್ನಡ ಮಾಧ್ಯಮದ ಅಭ್ಯರ್ಥಿಗಳಿಗಾಗಿ | ಶೇಕಡ 5 | ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 71 ಎಸ್‌ಆರ್‌ಆರ್ 2001 ದಿನಾಂಕ 24–10–2002 ಮತ್ತು ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 97 ಸೇನೆನಿ 2002 ದಿನಾಂಕ 22–11–2002 ಮತ್ತು ಸರ್ಕಾರದ ಆದೇಶ ಸಂಖ್ಯೆ ಸಿಆಸುಇ53/ಸೇನೆನಿ/2007 ದಿನಾಂಕ:–04–01–2008 |

**15) ವಿವರಣೆ:**

i) "ಮಾಜಿ ಸೈನಿಕ"ರಿಗಾಗಿ ಮೀಸಲಿಟ್ಟ ಖಾಲಿ ಹುದ್ದೆಗಳನ್ನು ಮಿಲಿಟರಿ ಸೇವೆಯಿಂದ ಬಿಡುಗಡೆ ಹೊಂದಿದ ವ್ಯಕ್ತಿಗಳಿಂದ ಮತ್ತು ಭಾರತ ದೇಶದ ಒಕ್ಕೂಟದ ಸಶಸ್ತ್ರ ದಳದಲ್ಲಿ ಸೇವೆ ಸಲ್ಲಿಸುವಾಗ ಕೊಲ್ಲಲ್ಪಟ್ಟ ಅಥವಾ ಶಾಶ್ವತವಾಗಿ ಅಂಗಹೀನರಾದ ವ್ಯಕ್ತಿಗಳ ಕುಟುಂಬದ ಸದಸ್ಯರಿಂದ ನೇಮಕಾತಿ ಮೂಲಕ ತುಂಬಲಾಗುತ್ತದೆ.

ii) "ಮಾಜಿ ಸೈನಿಕ" "ಸಶಸ್ತ್ರ ದಳದ ಸದಸ್ಯ" ಮತ್ತು "ಕುಟುಂಬದ ಸದಸ್ಯ" ಎಂಬ ಪದಗಳ ಅರ್ಥವು ಕಾಲದಿಂದ ಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ರಾಜ್ಯ ಸರ್ಕಾರಿ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977 ರಲ್ಲಿ ವಿವರಿಸಿರುವಂತೆ ಇರುತ್ತದೆ.

iii) ಕರ್ನಾಟಕ ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ: ಎಂಎಂಡಬ್ಲ್ಯೂ. 107. ಪಿಹೆಚ್‌ಪಿ 2003 ದಿನಾಂಕ: 11–07–2003 ಮತ್ತು ಡಿಪಿಎಆರ್ 50 ಎಸ್‌ಆರ್‌ಆರ್ 2000 ದಿನಾಂಕ: 03–09–2005ರ ಅನ್ವಯ ತಾನು "ಅಂಗವಿಕಲರ ಗುಂಪಿಗೆ ಸೇರಿದವರೆಂದು ಹೇಳಿಕೊಳ್ಳುವ ಅಭ್ಯರ್ಥಿಯು" ವೈದ್ಯಕೀಯ ಪ್ರಮಾಣ ಪತ್ರವನ್ನು ಹೊಂದಿರಬೇಕು.

iv) ನೇರ ನೇಮಕಾತಿಯಲ್ಲಿ ಲಭ್ಯವಿರುವ ಸ್ಥಾನಗಳನ್ನು ದಿನಾಂಕ 20–06–1995ರಂದು ಹೊರಡಿಸಿರುವ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 8 ಸೆಹಿಮ 95ರ ಅನ್ವಯ ಸಾಮಾನ್ಯ ಅರ್ಹತೆ, ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಹಿಂದುಳಿದ ಪ್ರವರ್ಗ 1, 2ಎ, 2ಬಿ, 3ಎ, 3ಬಿ ವರ್ಗಗಳಿಗೆ ವಿಂಗಡಿಸಿ ಮೀಸಲಿರಿಸಲಾಗುವುದು. ಹಾಗೂ ಆಯಾ ವರ್ಗಕ್ಕೆ ಲಭ್ಯವಾಗುವ ರಿಕ್ತ ಸ್ಥಾನಗಳಲ್ಲಿ ಶೇ. 30 ರಷ್ಟು ಹುದ್ದೆಗಳನ್ನು ಮಹಿಳಾ ಅಭ್ಯರ್ಥಿಗಳಿಗೆ, ಶೇಕಡಾ 10 ರಷ್ಟು ಹುದ್ದೆಗಳನ್ನು ಮಾಜಿ ಸೈನಿಕ ಅಭ್ಯರ್ಥಿಗಳಿಗೆ, ಶೇಕಡ

5 ರಷ್ಟು ರಿಕ್ತ ಸ್ಥಾನಗಳನ್ನು ಅಂಗವಿಕಲ ಅಭ್ಯರ್ಥಿಗಳಿಗೆ, ಶೇ. 5 ರಷ್ಟು ರಿಕ್ತ ಸ್ಥಾನಗಳನ್ನು ಯೋಜನೆಗಳಿಂದ ನಿರಾಶ್ರಿತರಾದವರ ಕುಟುಂಬದ ಅಭ್ಯರ್ಥಿಗಳಿಗೆ, ಶೇ. 25 ರಷ್ಟು ಸ್ಥಾನಗಳನ್ನು ಗ್ರಾಮೀಣ ಅಭ್ಯರ್ಥಿಗಳಿಗೆ, ಮತ್ತು ಶೇ 5 ರಷ್ಟು ರಿಕ್ತ ಸ್ಥಾನಗಳನ್ನು ಕನ್ನಡ ಮಾಧ್ಯಮ ವ್ಯಾಸಂಗ ಮಾಡಿದ ಅಭ್ಯರ್ಥಿಗಳಿಂದ, ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 97 ಸೇನೇನಿ. 2002 ದಿನಾಂಕ: 22-11-2002ರಲ್ಲಿ ವಿವರಿಸಿರುವಂತೆ ಭರ್ತಿ ಮಾಡಲು ಮೀಸಲಿರಿಸಲಾಗುವುದು.

**<u>ಅಂತಿಮ ಆಯ್ಕೆಪಟ್ಟಿ ತಯಾರಿಸುವಾಗ :</u>**

ಮಹಿಳೆಯರಿಗೆ ಮೀಸಲಿರಿಸಿದ ರಿಕ್ತ ಸ್ಥಾನಗಳಿಗೆ ಅರ್ಹ ಮಹಿಳಾ ಅಭ್ಯರ್ಥಿಗಳು ಲಭ್ಯವಾಗದಿದ್ದಲ್ಲಿ ಅಂತಹ ರಿಕ್ತ ಸ್ಥಾನಗಳನ್ನು ಆಯಾ ವರ್ಗಕ್ಕೆ ಸೇರಿದ ಪುರುಷ ಅಭ್ಯರ್ಥಿಗಳಿಂದ ಭರ್ತಿ ಮಾಡಲಾಗುವುದು.

ಮಾಜಿ ಸೈನಿಕರಿಗಾಗಿ ಮೀಸಲಿರಿಸಿದ ರಿಕ್ತ ಸ್ಥಾನಗಳಿಗೆ ಅರ್ಹ ಮಾಜಿ ಸೈನಿಕ ಅಭ್ಯರ್ಥಿಗಳು ಲಭ್ಯವಾಗದಿದ್ದಲ್ಲಿ ಅಂತಹ ರಿಕ್ತ ಸ್ಥಾನಗಳನ್ನು ಅಯಾ ವರ್ಗಕ್ಕೆ ಸೇರಿದ ಇತರೆ ಅರ್ಹ ಅಭ್ಯರ್ಥಿಗಳಿಂದ ಭರ್ತಿ ಮಾಡಲಾಗುವುದು.

ಇದೇ ರೀತಿ ಯೋಜನಾ ನಿರಾಶ್ರಿತ / ಗ್ರಾಮೀಣ ಅರ್ಹ ಅಭ್ಯರ್ಥಿಗಳು ದೊರಯದಿದ್ದಲ್ಲಿ ಅಂತಹ ರಿಕ್ತ ಸ್ಥಾನಗಳನ್ನು ಆಯಾ ಪ್ರವರ್ಗಕ್ಕೆ ಸೇರಿದ ಇತರೆ ಅರ್ಹ ಅಭ್ಯರ್ಥಿಗಳಿಂದ ಭರ್ತಿ ಮಾಡಲಾಗುವುದು.

ಅರ್ಹ ಅಂಗವಿಕಲ ಅಭ್ಯರ್ಥಿಗಳು ದೊರೆಯದಿದ್ದಲ್ಲಿ ಅಂತಹ ರಿಕ್ತ ಸ್ಥಾನಗಳನ್ನು ಭರ್ತಿ ಮಾಡದೆ ಬ್ಯಾಕ್‌ಲಾಗ್ ಹುದ್ದೆಗಳೆಂದು ಪರಿಗಣಿಸಲಾಗುವುದು.

**<u>16) ಹುದ್ದೆಗಳ ವರ್ಗೀಕರಣ:-</u>**

ಸರಕಾರದ ಆದೇಶ ಸಂಖ್ಯೆ: ಸಿಆಸುಇ 08 ಸಹಿಮ 95 ದಿನಾಂಕ 20-06-1995 ಮತ್ತು ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 97 ಸೆನೆನಿ 2002 ದಿನಾಂಕ 22-11-2002 ಹಾಗೂ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 53/ಸೇನಿನಿ/2007, ದಿ. 4.1.2008ರು ಪ್ರಕಾರ ಜಿಲ್ಲಾ ಮಟ್ಟದಲ್ಲಿ ವಿಷಯವಾರು ಮತ್ತು ಮಾಧ್ಯಮವಾರು ಹುದ್ದೆಗಳನ್ನು ಈ ಮುಂದಿನ ಅನುಬಂಧ ದಂತೆ ವರ್ಗೀಕರಿಸಿದೆ.

ಮುಂದುವರಿದು ಆಯ್ಕೆ ಪಟ್ಟಿಯನ್ನು ತಯಾರಿಸುವಾಗ ಸಮತಳ ಮೀಸಲಾತಿಗೆ ಸಂಬಂದಿಸಿದಂತೆ ಗೌರವಾನ್ವಿತ ಸರ್ವೋಚ್ಚ ನ್ಯಾಯಾಲಯವು ವಿವರಿಸಿರುವ ಕಾರ್ಯವಿಧಾನವನ್ನು ಸರ್ಕಾರದ ಸುತ್ತೋಲೆ ಸಂಖ್ಯೆ ಸಿಅಸುಇ16/ಸೆನೆನಿ/2008 ದಿನಾಂಕ:-01-09-2008ರಲ್ಲಿ ಆದೇಶಿಸಿರುವಂತೆ ಅಳವಡಿಸಿಕೊಳ್ಳಲಾಗುವುದು

**ಟಿಪ್ಪಣಿ :** **ಪ್ರೌಢ ಶಾಲಾ ಸಹ ಶಿಕ್ಷಕ ಗ್ರೇಡ್-2 ವೃಂದದ ವಿವಿಧ ವಿಷಯ ಮತ್ತು ಬೋಧನಾ ಮಾಧ್ಯಮದ ಮತ್ತು ದೈಹಿಕ ಶಿಕ್ಷಣ ಶಿಕ್ಷಕ (ಗ್ರೇಡ್-1) ವೃಂದದ ಖಾಲಿ ಹುದ್ದೆಗಳ ಸಂಖ್ಯೆ ಹಾಗೂ ಮೀಸಲಾತಿ ವರ್ಗೀಕರಣದ ವಿವರಗಳನ್ನು ಈ ಅಧಿಸೂಚನೆಗೆ ಲಗತ್ತಿಸಿರುವ "ಹುದ್ದೆಗಳ ವರ್ಗೀಕರಣದ ಅನುಬಂಧದಲ್ಲಿ" ಪ್ರತ್ಯೇಕವಾಗಿ ವಿವರಿಸಿದೆ.**

**ಸೂಚನೆ :** **ಪ್ರಕಟಿಸಿರುವ ಹುದ್ದೆಗಳ ಸಂಖ್ಯೆ ಮತ್ತು ವರ್ಗೀಕರಣವು ಅನಿವಾರ್ಯ ಸಂದರ್ಭಗಳಲ್ಲಿ ಬದಲಾವಣೆಗೆ ಒಳಪಟ್ಟಿರುತ್ತದೆ.**

(1) ಮೀಸಲಾತಿ ಸೌಲಭ್ಯ ಪಡೆಯಲು ಅಭ್ಯರ್ಥಿಗಳು ಸಲ್ಲಿಸಬೇಕಾದ ಪ್ರಮಾಣ ಪತ್ರಗಳು:

ಅ) ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ ಮತ್ತು ಹಿಂದುಳಿದ ಪ್ರವರ್ಗ-1 ಕ್ಕೆ ಸೇರಿದ ಅಭ್ಯರ್ಥಿಗಳು ಸರ್ಕಾರದ ಅಧಿಸೂಚನೆ ಸಂಖ್ಯೆ: ಎಸ್‌ಡಬ್ಲೂಡಿ 132 ಎಸ್‌ಎಡಿ 97 ದಿನಾಂಕ 08-02-2000 ಮತ್ತು ಹಿಂದುಳಿದ ಪ್ರವರ್ಗಗಳಾದ ಪ್ರವರ್ಗ-2ಎ, 2ಬಿ, 3ಎ, ಮತ್ತು 3ಬಿ ಗೆ ಸೇರಿದ ಅಭ್ಯರ್ಥಿಗಳು ಸರ್ಕಾರದ ಆದೇಶ ಸಂಖ್ಯೆ: ಎಸ್‌ಡಬ್ಲೂಡಿ 126 ಬಿಡಿಎ ದಿನಾಂಕ 13-02-2003 ರಂದು ಹೊರಡಿಸಿದ **"ಕರ್ನಾಟಕ ಅನುಸೂಚಿತ ಜಾತಿಗಳು, ಅನುಸೂಚಿತ ಬುಡಕಟ್ಟುಗಳು, ಮತ್ತು ಇತರೆ ಹಿಂದುಳಿದ ವರ್ಗಗಳ (ನೇಮಕಾತಿ ಮುಂತಾದ ಮೀಸಲಾತಿ) (ತಿದ್ದುಪಡಿ) ನಿಯಮಗಳು 2000"** ರನ್ವಯ ನಿಗದಿಪಡಿಸಿರುವ ಅಭ್ಯರ್ಥಿಗಳಿಗೆ ಅನ್ವಯಿಸುವ ಕೆಳಕಂಡ ನಮೂನೆಗಳಲ್ಲಿಯೇ ಸಂಬಂಧಿಸಿದ ವ್ಯಾಪ್ತಿಯ ತಹಸೀಲ್ದಾರರ ದರ್ಜೆಗಿಂತ ಕಡಿಮೆ ಇಲ್ಲದ ರೆವಿನ್ಯೂ ಪ್ರಾಧಿಕಾರಿಯಿಂದ ಪ್ರಮಾಣ ಪತ್ರವನ್ನು ಪಡೆದಿರಬೇಕು.

| | | |
|---|---|---|
| 1 | ಅನುಸೂಚಿತ ಜಾತಿ ಅಥವಾ ಅನುಸೂಚಿತ ಪಂಗಡಕ್ಕೆ ಸೇರಿದ ಅಭ್ಯರ್ಥಿಗಳು | **<u>ನಮೂನೆ - ಡಿ</u>** (ನಿಯಮ 3ಎ(2)(3), ಸರಕಾರದ ಆದೇಶ ಸಂಖ್ಯೆ: ಎಸ್‌ಡಬ್ಲೂಡಿ 132 ಎಸ್‌ಎಡಿ 97 ದಿನಾಂಕ 08-02-2000 |
| 2 | ಹಿಂದುಳಿದ ಪ್ರವರ್ಗ-1 ಕ್ಕೆ ಸೇರಿದ ಅಭ್ಯರ್ಥಿಗಳು | **<u>ನಮೂನೆ - ಇ</u>** (ನಿಯಮ 3ಎ(2)(3), ಸರಕಾರದ ಆದೇಶ ಸಂಖ್ಯೆ: ಎಸ್‌ಡಬ್ಲೂಡಿ 132 ಎಸ್‌ಎಡಿ 97 ದಿನಾಂಕ 08-02-2000 |
| 3 | ಹಿಂದುಳಿದ ಪ್ರವರ್ಗ 2ಎ, 2ಬಿ, 3ಎ, ಮತ್ತು 3ಬಿ ಗೆ ಸೇರಿದ ಅಭ್ಯರ್ಥಿಗಳು | **<u>ನಮೂನೆ - ಎಫ್</u>** (ನಿಯಮ 3ಎ(2)(3), ಸರಕಾರದ ಆದೇಶ ಸಂಖ್ಯೆ: ಎಸ್‌ಡಬ್ಲೂಡಿ 126 ಎಸ್‌ಎಡಿ 97 ದಿನಾಂಕ 13-02-2003 |

**ಮೇಲ್ಕಂಡ ಮೀಸಲಾತಿ ಪ್ರಮಾಣ ಪತ್ರಗಳು ಉಲ್ಲೇಖಿಸಿರುವ ನಿಯಮಗಳ ಪ್ರಕಾರವಿರಬೇಕು ಮತ್ತು ನೇಮಕಾತಿ ಅಧಿಸೂಚನೆ ದಿನಾಂಕಕ್ಕೆ ಐದು ವರ್ಷಗಳನ್ನು ಮೀರಿರಬಾರದು. ಅವಧಿ ಮೀರಿದ ಮೀಸಲಾತಿ ಪ್ರಮಾಣ ಪತ್ರಗಳನ್ನು ತಿರಿಸ್ಕರಿಸಲಾಗುವುದು.**

**ಅಂಗವಿಕಲ ಅಭ್ಯರ್ಥಿಗಳಿಗೆ ಸೂಚನೆ:-**

ಸರ್ಕಾರಿ ಆದೇಶ ಸಂಖ್ಯೆ: ಡಿಪಿಎಆರ್ 52 ಎಸ್.ಎಸ್.ಆರ್. 99 ದಿನಾಂಕ 29-11-2002ರಲ್ಲಿ ನಿಗದಿಪಡಿಸಿರುವ ಅಂಗವಿಕಲ ಅಭ್ಯರ್ಥಿಗಳನ್ನು ಮಾತ್ರ ಪರಿಗಣಿಸಲಾಗುವುದು. ಸರ್ಕಾರಿ ಆದೇಶ ಸಂಖ್ಯೆ ಎಂ.ಎ.ಇ107/ಪಿ.ಹೆಚ್.ಪಿ/2003 ದಿನಾಂಕ: 11/7/2003 ರಲ್ಲಿ ನಿಗಧಿಪಡಿಸಿರುವ ನಮೂನೆಯಲ್ಲಿ ವೈದ್ಯಕೀಯ ಪ್ರಮಾಣ ಪತ್ರಗಳನ್ನು ಸಕ್ಷಮ ವೈದ್ಯಾಧಿಕಾರಿಗಳಿಂದ ಪಡೆದಿರಬೇಕು. ಈ ಪ್ರಮಾಣ ಪತ್ರವನ್ನು ಅರ್ಜಿ ಸಲ್ಲಿಸುವ ದಿನಾಂಕಕ್ಕೆ ಅಭ್ಯರ್ಥಿಯು ಪಡೆದುಕೊಂಡಿರಬೇಕು.

ಸರ್ಕಾರಿ ಅಧಿಸೂಚನೆ ಸೆಕ್ಷನ್ ಸಂಖ್ಯೆ: ಡಿಪಿಎಆರ್ 52 ಎಸ್.ಎಸ್.ಆರ್. 99 29–11–2002ರ ಅಧಿನಿಯಮದ ಸೆಕ್ಷನ್ 32ರ ಪ್ರಕಾರ Persons with disabilities(equal opportunities. Protection of rights & full participation) Act1995 ರಾಜ್ಯ ಸರ್ಕಾರವು ವಿವಿಧ ಇಲಾಖೆಗಳಲ್ಲಿ ಅಂಗವಿಕಲರು ನಿರ್ವಹಿಸಬಹುದಾದ ಹುದ್ದೆಗಳನ್ನು ಗುರುತಿಸಿದೆ.ಸದರಿ ಅಧಿಸೂಚನೆ ಪುಟ–21 ರಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆಗೆ ಸಂಬಂಧಿಸಿದಂತೆ ಅಂಗವಿಕಲ ಅಭ್ಯರ್ಥಿಗಳಿಗೆ ಗುರುತಿಸಿರುವ ಹುದ್ದೆಗಳ ಉದ್ಧೃತವನ್ನು ಈ ಕೆಳಗೆ ನೀಡಲಾಗಿದೆ.

| | **Name of the Dept-Public Instruction** |
|---|---|
| Blind | Music teachers Gr.1& 11(HS) |
| Low Vision | MusicTr.Gr.1&11(HS) Packer,counter,,,,,,Grp.D-Sweeper,Cleanrer peon |
| Leprosry Cured | Pri school HM,Sr.Librarian,Gr 1& 11 Pry-School Teacher.Drawing music Art Master (SSLC with Asst.Master Certi)Sec.Sch Asst.11,Tr.1,Asst Agri Teacher pri.Sch.Tr,Trained & Untrained, FDA,SDA,Drama,Craft, Hindi Trs.Group-D post: Lift Attender,Peon/Packer/Carrier Counter Cleaner Pacher, Attender. |
| Hearing Impaired | Pri School HM, Sr.Librarian,Pry.Schools Nursery School Tr Drawing Art Master(SSLC with Art Master certificate) Sec School Asst -2 Tr.Gr-1Asst Agriculture teacher Pry.ASchol Tr,Trained, & Untrainaed Drama teacher, FDA,SDA Craft ,Hindi Tr, Group D Post Attender /Lift Attender / Packer / carrian /counter/ packer /peon/Cleaner/Sweeper. |
| Locomotor Disability | Pry School HM, Nursery School teacher/Mother, Librarian state education library FDA,Drawing Art Master (SSLC with Art Master certificate) Secondary school Asst teachers grade-1 Asst Craft & Hindi Teachers ,group the Post Attender /Lift Attender / Packer / carrian /counter/ packer /peon/Cleaner/Sweeper. |
| Mentally ill | Pri School HM, Sr.Librarian,Pry.Schools Nursery School Tr Drawing Art Master(SSLC with Art Master certificate) Sec School Asst -2 Tr.Gr-1Asst Agriculture teacher Pry.ASchol Tr,Trained, & Untrainaed Drama teacher, FDA,SDA Craft ,Hindi Tr, Group D Post Attender /Lift Attender / Packer / carrian /counter/ packer /peon/Cleaner/Sweeper. |
| Menatally Retarted | ---------- |

1. ಮೇಲಿನಂತೆ Blind, Low vision ಹಾಗೂ Menatally Retarted ಅಂಗವಿಕಲ ಅಭ್ಯರ್ಥಿಗಳು ಪ್ರೌಢ ಶಾಲಾ ಸಹ ಶಿಕ್ಷಕರು ಗ್ರೇಡ್–2 ವೃಂದದ ಹುದ್ದೆಗಳಿಗೆ ಅರ್ಹರಿರುವುದಲ್ಲ ಹಾಗೂ ದೈಹಿಕ ಶಿಕ್ಷಣ ಶಿಕ್ಷಕರು ಗ್ರೇಡ್–1 ಹುದ್ದೆಗಳಿಗೆ ಯಾವುದೇ ರೀತಿಯ ಅಂಗವಿಕಲ ಅಭ್ಯರ್ಥಿಗಳು ಅರ್ಹರಿರುವುದಿಲ್ಲ.

2. ದೈಹಿಕ ಅಂಗವಿಕಲ ಅಭ್ಯರ್ಥಿಗಳು ಸರ್ಕಾರಿ ಜಿಲ್ಲಾ ಆಸ್ಪತ್ರೆಗಳಲ್ಲಿರುವ ಮೂಳೆ ತಜ್ಞ (Orthopaedic Surgeon) ರಿಂದ ದೈಹಿಕ ಅಂಗವಿಕಲತೆಯ ಮೌಲೀಕರಣವನ್ನು ALimco Kanpur (W.H.O Standard) ಇದರ ಆಧಾರದ ಮೇಲೆ ಮಾಡಿಸುವುದು ಕಡ್ಡಾಯವಾಗಿರುತ್ತದೆ.ಹಾಗೂ ಶ್ರವಣ ಧೋಷ ಹೊಂದಿರುವ ಅಂಗವಿಕಲ ಅಬ್ಯರ್ಥಿಗಳ ಪ್ರಮಾಣ ಪತ್ರದಲ್ಲಿ ಶ್ರವಣ ದೋಷದ ನಷ್ಟವನ್ನು ಡೆಸಿಬಲ್ಸ್ (Decibels) ಗಳಲ್ಲಿ ಕಡ್ಡಾಯವಾಗಿ ನಮೂದಿಸತಕ್ಕದ್ದು.

**ಉ) ಮಾಜಿ ಸೈನಿಕರ ಗುಂಪಿನಲ್ಲಿ ಆಯ್ಕೆ ಬಯಸುವ ಅಭ್ಯರ್ಥಿಗಳಿಗೆ ಸೂಚನೆಗಳು:**

ಮಾಜಿ ಸೈನಿಕರ ಗುಂಪಿನಲ್ಲಿ ಆಯ್ಕೆಗೆ ಕೆಳಗಿನವರು ಅರ್ಹರು:–

1) ಮಾಜಿ ಸೈನಿಕ ಎಂದರೆ ಸಶಸ್ತ್ರ ದಳಗಳಾದ ನಿಯಮಿತ ಭೂದಳ, ನೌಕಾದಳ ಮತ್ತು ವಾಯುದಳದಲ್ಲಿ ಯಾವುದೇ ಶ್ರೇಣಿಯಲ್ಲಿ (ಯೋಧ ಅಥವಾ ಅಯೋಧನಾಗಿ) ಸೇವೆ ಸಲ್ಲಿಸಿದ ವ್ಯಕ್ತಿ. ಅಂದರೆ:–

(ಅ) ಅಂತಹ ಸೇವೆಯಿಂದ ನಿವೃತ್ತಿ ಹೊಂದಿದ ನಂತರ ನಿವೃತ್ತಿ ವೇತನ ಪಡೆಯುತ್ತಿರುವ ವ್ಯಕ್ತಿ.

**ಅಥವಾ**

(ಆ) ವೈದ್ಯಕೀಯ ಕಾರಣಗಳಿಂದ ಮಿಲಿಟರಿ ಸೇವೆಗೆ ಅನರ್ಹನಾದವನೆಂದೋ ಅಥವಾ ವ್ಯಕ್ತಿಯ ಹಿಡಿತಕ್ಕೂ ಮೀರಿದ ಪರಿಸ್ಥಿತಿಗಳಿಂದ ಮತ್ತು ವೈದ್ಯಕೀಯ ಅಥವಾ ಅಸಾಮರ್ಥ್ಯದ ಪಿಂಚಣಿ ಪಡೆದು ಸೇವೆಯಿಂದ ಬಿಡುಗಡೆಯಾದ ವ್ಯಕ್ತಿ.

**ಅಥವಾ**

(ಇ) ಸ್ವಂತ ಕೋರಿಕೆ ಹೊರತುಪಡಿಸಿ ಸಿಬ್ಬಂದಿ ಕಡಿತದ ಪರಿಣಾಮದಿಂದ ಅಂತಹ ಸೇವೆಯಿಂದ ಬಿಡುಗಡೆ ಹೊಂದಿದ ವ್ಯಕ್ತಿ.

**ಅಥವಾ**

(ಈ) ತನ್ನ ಸ್ವಂತ ಕೋರಿಕೆಯ ಮೇರೆಗೆ ಅಥವಾ ದುರ್ನಡತೆ ಅಥವಾ ಅಸಾಮರ್ಥ್ಯದ ಕಾರಣದಿಂದಾಗಿ ತೆಗೆದು ಹಾಕಿರುವ ಅಥವಾ ಕರ್ತವ್ಯದಿಂದ ವಜಾ ಮಾಡಿದ ವ್ಯಕ್ತಿಗಳನ್ನು ಹೊರತುಪಡಿಸಿ, ನಿರ್ಧಿಷ್ಟ ಅವಧಿಯನ್ನು ಪೂರೈಸಿದ ತರುವಾಯ ಬಿಡುಗಡೆ ಹೊಂದಿದ ವ್ಯಕ್ತಿ ಮತ್ತು ಗ್ರಾಚ್ಯುಟಿ ಪಡೆಯುತ್ತಿರುವ ವ್ಯಕ್ತಿ.

**ಅಥವಾ**

(ಉ) ಪ್ರಾಂತೀಯ ಸೇವೆಯ ಈ ಕೆಳಗೆ ಹೆಸರಿಸಿದ ವರ್ಗದ ಸಿಬ್ಬಂದಿ.

1) ನಿರಂತರ ಸೇವೆ ಸಲ್ಲಿಸಿ ನಿವೃತ್ತಿ ಹೊಂದಿದ ಪಿಂಚಣಿದಾರರು.

2) ಮಿಲಿಟರಿ ಸೇವೆಯಿಂದ ಉಂಟಾದ ದೈಹಿಕ ಅಸಾಮರ್ಥ್ಯತೆ ಹೊಂದಿ ಬಿಡುಗಡೆಯಾದ ವ್ಯಕ್ತಿ.

3) ಗ್ಯಾಲಂಟ್ರಿ ಪ್ರಶಸ್ತಿ ವಿಜೇತರು.

**2. ಮಾಜಿ ಸೈನಿಕ ಅವಲಂಬಿತರ ಗುಂಪಿನಲ್ಲಿ ಆಯ್ಕೆ ಬಯಸುವ ಅಭ್ಯರ್ಥಿಗಳು ಅಂದರೆ:–**

ಕೇಂದ್ರ ಸಶಸ್ತ್ರ ದಳದಲ್ಲಿ ಸೇವೆ ಸಲ್ಲಿಸುವಾಗ ಕೊಲ್ಲಲ್ಪಟ್ಟ ಅಥವಾ ಶಾಶ್ವತವಾಗಿ ದೈಹಿಕ ವಿಕಲತೆ ಹೊಂದಿದ ವ್ಯಕ್ತಿಗಳ ಕುಟುಂಬದವರು.

**(ಸಂಬಂಧಾನುಸಾರ ಹೆಂಡತಿ ಅಥವಾ ಗಂಡ ಮತ್ತು ಮಕ್ಕಳು ಮತ್ತು ಮಲ ಮಕ್ಕಳು ಮಾಜಿ ಸೈನಿಕರ ಅವಲಂಬಿತರಡಿಯಲ್ಲಿ ಮೀಸಲಾತಿಗೆ ಅರ್ಹರಾಗಿರುತ್ತಾರೆ. ಆದರೆ ಅಂತಹವರಿಗೆ ವಯೋಮಿತಿ ಸಡಿಲಿಕೆ ಇಲ್ಲ)**

**ವಿವರಣೆ:**

1. ಈ ಸೌಲಭ್ಯಕ್ಕೆ ಡಿಫೆನ್ಸ್ ಸೆಕ್ಯುರಿಟಿ ಕಾರ್ಪ್ಸ್, ಜನರಲ್ ರಿಸರ್ವ್ ಇಂಜಿನಿಯರಿಂಗ್ ಕಾರ್ಪ್ಸ್ ಲೋಕ ಸಹಾಯಕ ಸೇವೆ ಮತ್ತು ಪ್ಯಾರಾ ಮಿಲಿಟರಿ ದಳದಲ್ಲಿ ಸೇವೆ ಸಲ್ಲಿಸಿದ ವ್ಯಕ್ತಿ ಅರ್ಹರಲ್ಲ.
2. ಕೇಂದ್ರ ಸಶಸ್ತ್ರದಳದ ಸೇವೆಯಿಂದ ನಿವೃತ್ತಿ ಹೊಂದಿದ ನಂತರ ಮಾಜಿ ಸೈನಿಕರ ವರ್ಗದಡಿ ಬರುವ ವ್ಯಕ್ತಿಗೆ ಒಪ್ಪಂದವು ಪೂರ್ಣವಾಗಲು ಒಂದು ವರ್ಷಕ್ಕೆ ಮುನ್ನ ಪುನರ್ ಉದ್ಯೋಗಕ್ಕೆ ಅರ್ಜಿ ಹಾಕಿಕೊಳ್ಳಲು ಹಾಗೂ ಅವರಿಗೆ ಮಾಜಿ ಸೈನಿಕರಿಗೆ ದೊರೆಯುವ ಎಲ್ಲಾ ಸೌಲಭ್ಯಗಳನ್ನು ಹೊಂದಲು ಅನುಮತಿ ನೀಡಲಾಗಿದೆ. ಆದರೆ, ಸಮವಸ್ತ್ರವನ್ನು ತ್ಯಜಿಸಲು ಅನುಮತಿ ನೀಡುವವರೆಗೆ ರಾಜ್ಯ ನಾಗರೀಕ ಸೇವೆ ಅಥವಾ ಹುದ್ದೆಗೆ ನೇಮಕ ಹೊಂದುವಂತಿಲ್ಲ.

**ಗ್ರಾಮೀಣ ಗುಂಪಿನಲ್ಲಿ ಮೀಸಲಾತಿ:–**

ಗ್ರಾಮೀಣ ಅಭ್ಯರ್ಥಿ ಎಂದರೆ ಕರ್ನಾಟಕ ಪೌರ ನಿಯಮಗಳ ಅಧಿನಿಯಮ 1976 ಅಥವಾ ಕರ್ನಾಟಕ ಪೌರ ಸಭೆಗಳ ಅಧಿನಿಯಮ 1964 ರಡಿಯಲ್ಲಿ ನಿರ್ದಿಷ್ಟಪಡಿಸಿದ ಒಂದು ದೊಡ್ಡ ಪ್ರದೇಶ, ಸಣ್ಣ ನಗರ ಪ್ರದೇಶ ಅಥವಾ ಪರಿವರ್ತನೆ ಹಂತದಲ್ಲಿರುವ ಪ್ರದೇಶ ಹೊರತಾಗಿ ಇತರೆ ಯಾವುದೇ ಪ್ರದೇಶದಲ್ಲಿರುವ ಶಾಲೆಯಲ್ಲಿ 1 ನೇ ತರಗತಿಯಿಂದ 10 ನೇ ತರಗತಿಯವರೆಗೆ ವ್ಯಾಸಂಗ ಮಾಡಿದ ಅಭ್ಯರ್ಥಿ.

ಗ್ರಾಮೀಣ ಅಭ್ಯರ್ಥಿಗಳ ಮೀಸಲಾತಿ ಅಡಿಯಲ್ಲಿ ಅರ್ಜಿ ಸಲ್ಲಿಸುವ ಅಭ್ಯರ್ಥಿಗಳು ಸಂಬಂಧಿಸಿದ ಪ್ರಮಾಣ ಪತ್ರಗಳನ್ನು **ಸರಕಾರದ ಆದೇಶ ಸಂಖ್ಯೆ: ಡಿಪಿಎಆರ್ 96 ಸೇನೆನಿ 2005 ದಿನಾಂಕ 10–08–2005** ರಲ್ಲಿ ನೀಡಿರುವ ನಿಗದಿತ ನಮೂನೆಯಲ್ಲಿ ಮಾತ್ರ ಸಲ್ಲಿಸಬೇಕು.

**ಊ) ಗ್ರಾಮೀಣ ಅಭ್ಯರ್ಥಿ ಮೀಸಲಾತಿ ಬಯಸುವ ಅಭ್ಯರ್ಥಿಗಳಿಗೆ ಸೂಚನೆಗಳು:–**

**ಗ್ರಾಮೀಣ ಅಭ್ಯರ್ಥಿ ಎಂದರೆ ಕರ್ನಾಟಕ ಪೌರ ನಿಯಮಗಳ ಅಧಿನಿಯಮ 1976 ಅಥವಾ ಕರ್ನಾಟಕ ಪೌರ ಸಭೆಗಳ ಅಧಿನಿಯಮ 1964ರಡಿಯಲ್ಲಿ ನಿರ್ದಿಷ್ಠ ಪಡಿಸಿದ ಒಂದು ದೊಡ್ಡ ಪ್ರದೇಶ, ಸಣ್ಣ ನಗರ ಪ್ರದೇಶ ಅಥವಾ ಪರಿವರ್ತನಾ ಹಂತದಲ್ಲಿರುವ ಪ್ರದೇಶಗಳ (ಮಹಾನಗರ ಪಾಲಿಕೆ / ನಗರ ಸಭೆ / ಪುರಸಭೆ / ಪಟ್ಟಣ ಪಂಚಾಯತ್) ಹೊರತಾದ ಪ್ರದೇಶವಾಗಿರುತ್ತದೆ. ಅಂದರೆ ಕೇವಲ ಗ್ರಾಮ ಪಂಚಾಯತ್/ಮಂಡಲ್ ಪಂಚಾಯತ್ ವ್ಯಾಪ್ತಿಗೆ ಒಳಪಡುವ ಶಾಲೆಯಲ್ಲಿ ಒಂದನೇ ತರಗತಿಯಿಂದ ಹತ್ತನೇ ತರಗತಿಯವರೆಗೆ ವ್ಯಾಸಂಗ ಮಾಡಿ ಉತ್ತೀರ್ಣರಾಗಿರುವ ಅಭ್ಯರ್ಥಿಗಳು ಮಾತ್ರ ಗ್ರಾಮೀಣ ಮೀಸಲಾತಿ ಸೌಲಭ್ಯ ಪಡೆಯಲು ಅರ್ಹರಿರುತ್ತಾರೆ.**

ಸದರಿ ಅಧಿನಿಯಮದಲ್ಲಿ **"ಗ್ರಾಮೀಣ ಅಭ್ಯರ್ಥಿಯನ್ನು"** ಈ ಕೆಳಗೆ ಉದ್ಧರಿಸಿದಂತೆ ಪರಿಭಾಷಿಸಲಾಗಿದೆ.

1) ಗ್ರಾಮೀಣ ಅಭ್ಯರ್ಥಿ ಎಂದರೆ ಒಂದು ಹುದ್ದೆಗಾಗಿ ನಿಯಮಿಸಲಾದ ಅರ್ಹತಾ ಪರೀಕ್ಷೆಯ ಎಸ್.ಎಸ್.ಎಲ್.ಸಿ. ಅಥವಾ ಉನ್ನತ ಪರೀಕ್ಷೆಯಾಗಿದ್ದಲ್ಲಿ 1ನೇ ತರಗತಿಯಿಂದ 10ನೇ ತರಗತಿಯವರೆಗೆ.

2) ಒಂದು ಹುದ್ದೆಗೆ ನಿಗದಿ ಪಡಿಸಲಾದ ಅರ್ಹತಾ ಪರೀಕ್ಷೆಯು ಎಸ್.ಎಸ್.ಎಲ್.ಸಿ.ಗಿಂತ ಕಡಿಮೆಯಾಗಿದ್ದಲ್ಲಿ 1ನೇ ತರಗತಿಯಿಂದ ಅರ್ಹತಾ ಪರೀಕ್ಷೆಯವರೆಗೆ:

3) ಸಾಮಾನ್ಯ ವರ್ಗದ ಅಭ್ಯರ್ಥಿಗಳು ನಮೂನೆ–1 ರಲ್ಲಿ ಅಂದರೆ, ಮೇಲುಸ್ಥರದಲ್ಲಿ (creamy layer) ಬರುವದಿಲ್ಲವೆಂದು ಸಂಬಂಧಿಸಿದ ತಹಸೀಲ್ದಾರರವರಿಂದ ಪಡೆದ ಪ್ರಮಾಣ ಪತ್ರದ ಜೊತೆಗೆ ಸರಕಾರದ ಆದೇಶ ದಿನಾಂಕ 10–08–2005ರಲ್ಲಿ ನಿಗದಿಪಡಿಸಲಾದ ನಮೂನೆ–2 ರಲ್ಲಿ ಗ್ರಾಮೀಣ ವ್ಯಾಸಂಗ ಪ್ರಮಾಣ ಪತ್ರವನ್ನು ಸಲ್ಲಿಸತಕ್ಕದ್ದು.

4) ಪ್ರವರ್ಗ–1, 2ಎ, 2ಬಿ, 3ಎ, 3ಬಿ, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಸೇರಿದ ಅಭ್ಯರ್ಥಿಗಳು ತಮ್ಮ ಮೀಸಲಾತಿ ಪ್ರಮಾಣ ಪತ್ರದ ಜೊತೆಗೆ ಸರಕಾರದ ಆದೇಶ ದಿನಾಂಕ 10–08–2005ರಲ್ಲಿ ನಿಗದಿ ಪಡಿಸಲಾದ ನಮೂನೆ–2ರಲ್ಲಿ ಗ್ರಾಮೀಣ ವ್ಯಾಸಂಗ ಪ್ರಮಾಣ ಪತ್ರವನ್ನು ಸಲ್ಲಿಸತಕ್ಕದ್ದು.

**ಸರ್ಕಾರದ ಆದೇಶ ಸಂಖ್ಯೆ: ಡಿಪಿಎಆರ್. 96 ಸೇ.ನೇ.ನಿ.2005 ದಿನಾಂಕ: 10–08–2005ರ ಪ್ರಕಾರ ಅಭ್ಯರ್ಥಿಯು 1 ರಿಂದ 10ನೆಯ ತರಗತಿಯವರೆಗೆ ವ್ಯಾಸಂಗ ಮಾಡುತ್ತಿದ್ದ ಅವಧಿಯಲ್ಲಿ ಸದರಿ ಪ್ರದೇಶಗಳು ಮಹಾನಗರ ಪಾಲಿಕೆಗಳು, ನಗರಸಭೆಗಳು, ಪುರಸಭೆಗಳು, ಪಟ್ಟಣ ಪಂಚಾಯಿತಿಗಳು ಮತ್ತು ಪರಿವರ್ತನಾ ಹಂತದಲ್ಲಿರುವ ಪ್ರದೇಶಗಳಾಗಿರಬಾರದು. ವಿವರ ಈ ಕೆಳಗೆ ನೀಡಲಾಗಿದೆ.**

| ಮಹಾನಗರ ಪಾಲಿಕೆಗಳು | | ನಗರ ಸಭೆಗಳು | | ಪುರ ಸಭೆಗಳು | | ಪಟ್ಟಣ ಪಂಚಾಯ್ತಿಗಳು | |
|---|---|---|---|---|---|---|---|
| | | ಬೆಂಗಳೂರು ನಗರ ಜಿಲ್ಲೆ | | ಬೆಂಗಳೂರು ನಗರ ಜಿಲ್ಲೆ | | | |
| 1 | ಬೆಂಗಳೂರು | 1 | ಯಲಹಂಕ | 1 | ಆನೇಕಲ್ | | |
| | | 2 | ಬ್ಯಾಟರಾಯನಪುರ | 2 | ಕೆಂಗೇರಿ | | |
| | | 3 | ಕೆ.ಆರ್.ಪುರಂ | | | | |
| | | 4 | ಬೊಮ್ಮನಹಳ್ಳಿ | | | | |
| | | 5 | ದಾಸರಹಳ್ಳಿ | | | | |
| | | 6 | ಪಟ್ಟಣಗೆರೆ | | | | |
| | | 7 | ಮಹದೇವಪುರ | | | | |
| **ಬೆಂಗಳೂರು ಗ್ರಾಮಾಂತರ ಜಿಲ್ಲೆ** | | | | | | | |
| | | 1 | ರಾಮನಗರ | 1 | ಮಾಗಡಿ | 1 | ನೆಲಮಂಗಲ |
| | | | | | | | |
| | | 2 | ದೊಡ್ಡಬಳ್ಳಾಪುರ | 2 | ದೇವನ ಹಳ್ಳಿ | | |
| | | 3 | ಚೆನ್ನಪಟ್ಟಣ | 3 | ಹೊಸಕೋಟೆ | | |
| | | | | 4 | ಕನಕಪುರ | | |
| | | | | 5 | ವಿಜಯಪುರ | | |
| **ಮೈಸೂರು ಜಿಲ್ಲೆ** | | | | | | | |
| 2 | ಮೈಸೂರು | | ಮೈಸೂರು | 1 | ನಂಜನಗೂಡು | 1 | ಪರಿಯಾಪಟ್ಟಣ |
| | | | | 2 | ಹುಣಸೂರು | 2 | ಹೆಚ್.ಡಿ.ಕೋಟೆ |
| | | | | 3 | ಕೆ.ಆರ್.ನಗರ | 3 | ಟಿ.ನರಸೀಪುರ |
| | | | | | | 4 | ಬನ್ನೂರು |
| **ಬೆಳಗಾಂವ ಜಿಲ್ಲೆ** | | | | | | | |
| 3 | ಬೆಳಗಾಂವ | 1 | ನಿಪ್ಪಾಣಿ | 1 | ಅಥಣಿ | 1 | ಹುಕ್ಕೇರಿ |
| | | 2 | ಗೋಕಾಕ | 2 | ಬೈಲಹೊಂಗಲ | 2 | ಖಾನಾಪೂರ |
| | | | | 3 | ಚಿಕ್ಕೋಡಿ | 3 | ಕೊಣ್ಣೂರು |
| | | | | 4 | ಮೂಡಲಗಿ | 4 | ಕುಡಚಿ |
| | | | | 5 | ರಾಮದುರ್ಗ | 5 | ರಾಯಭಾಗ |
| | | | | 6 | ಸಂಕೇಶ್ವರ | 6 | ಸದಲಗಾ |
| | | | | 7 | ಸವದತ್ತಿ | | |
| 4 | ಹುಬ್ಬಳ್ಳಿ / ಧಾರವಾಡ | | | | | | |
| **ಗುಲಬರ್ಗಾ ಜಿಲ್ಲೆ** | | | | | | | |
| 5 | ಗುಲಬರ್ಗಾ | | | 1 | ಆಳಂದ | 1 | ಅಫಜಲಪೂರ |
| | | | | 2 | ಚಿತ್ತಾಪೂರ | 2 | ಚಿಂಚೋಳಿ |
| | | | | 3 | ಸೇಡಂ | 3 | ಜೇವರ್ಗಿ |
| | | | | 4 | ಶಹಾಬಾದ | 4 | ಗುರುಮಿಠಕಲ್ |
| | | | | 5 | ಶಹಾಪೂರ | 5 | ವಾಡಿ |
| | | | | 6 | ಸುರಪೂರ | | |
| | | | | 7 | ಯಾದಗಿರಿ | | |
| **ತುಮಕೂರು ಜಿಲ್ಲೆ** | | | | | | | |
| | | 1 | ತುಮಕೂರು | 1 | ತಿಪಟೂರು | 1 | ಪಾವಗಡ |
| | | | | 2 | ಚಿಕ್ಕನಾಯ್ಕನ ಹಳ್ಳಿ | 2 | ಕೊರಟಗೆರೆ |
| | | | | 3 | ಸಿರಾ | 3 | ತುರುವೇಕೆರೆ |
| | | | | 4 | ಮಧುಗಿರಿ | 4 | ಗುಬ್ಬಿ |
| | | | | 5 | ಕುಣಿಗಲ್ | | |
| **ಕೋಲಾರ ಜಿಲ್ಲೆ** | | | | | | | |
| | | 1 | ಕೋಲಾರ | 1 | ಮುಳಬಾಗಿಲು | 1 | ಗುಡಿಬಂಡ |
| | | 2 | ಚಿಂತಾಮಣಿ | 2 | ಮಾಲೂರು | 2 | ಶ್ರೀನಿವಾಸಪುರ |
| | | 3 | ರಾಬರ್ಟಸನ್‌ಪೇಟೆ | 3 | ಬಂಗಾರಪೇಟೆ | 3 | ಬಾಗೇಪಲ್ಲಿ |
| | | 4 | ಚಿಕ್ಕಬಳ್ಳಾಪೂರ | 4 | ಗೌರಿ ಬಿದನೂರು | | |

| | | | | | | | |
|---|---|---|---|---|---|---|---|
| | | | | 5 | ಶಿಡ್ಲಘಟ್ಟ | | |
| ಚಿತ್ರದುರ್ಗ ಜಿಲ್ಲೆ | | | | | | | |
| | | 1 | ಚಿತ್ರದುರ್ಗ | 1 | ಚೆಳ್ಳಕೆರೆ | 1 | ಹೊಸದುರ್ಗ |
| | | | | 2 | ಹಿರಿಯೂರು | 2 | ಹೊಳಲ್ಕೆರೆ |
| | | | | | | 3 | ಮೊಳಕಾಲ್ಮೂರು |
| | ದಾವಣಗೆರೆ ಜಿಲ್ಲೆ | | | | | | |
| | | 1 | ದಾವಣಗೆರೆ | | | 1 | ಹರಪನಹಳ್ಳಿ |
| | | 2 | ಹರಿಹರ | | | 2 | ಚೆನ್ನಗಿರಿ |
| | | | | | | 3 | ಹೊನ್ನಾಳಿ |
| | | | | | | 4 | ಜಗಳೂರು |
| | ಶಿವಮೊಗ್ಗ ಜಿಲ್ಲೆ | | | | | | |
| | | 1 | ಶಿವಮೊಗ್ಗ | 1 | ಸಾಗರ | 1 | ಸೊರಬ |
| | | 2 | ಭದ್ರಾವತಿ | 2 | ಶಿಕಾರಿಪುರ | 2 | ಹೊಸನಗರ |
| | | | | | | 3 | ಶಿರಾಳಕೊಪ್ಪ |
| | | | | | | 4 | ತೀರ್ಥಹಳ್ಳಿ |
| | ಚಾಮರಾಜ ನಗರ ಜಿಲ್ಲೆ | | | | | | |
| | | 1 | ಚಾಮರಾಜನಗರ | 1 | ಕೊಳ್ಳೇಗಾಲ | 1 | ಯಳಂದೂರು |
| | | | | 2 | ಗುಂಡ್ಲುಪೇಟೆ | 2 | ಹನೂರು |
| | ಮಂಡ್ಯ ಜಿಲ್ಲೆ | | | | | | |
| | | 1 | ಮಂಡ್ಯ | 1 | ಮದ್ದೂರು | 1 | ಪಾಂಡವಪುರ |
| | | | | 2 | ಮಳವಳ್ಳಿ | 2 | ನಾಗಮಂಗಲ |
| | | | | 3 | ಶ್ರೀರಂಗಪಟ್ಟಣ | 3 | ಕೆ.ಆರ್.ಪೇಟೆ |
| | ಹಾಸನ ಜಿಲ್ಲೆ | | | | | | |
| | | 1 | ಹಾಸನ | 1 | ಹೊಳೇನರಸಿಪುರ | 1 | ಬೇಲೂರು |
| | | | | 2 | ಚೆನ್ನರಾಯಪಟ್ಟಣ | 2 | ಅರಕಲಗೂಡು |
| | | | | 3 | ಸಕಲೇಶಪುರ | 3 | ಆಲೂರು |
| | | | | 4 | ಅರಸೀಕೇರೆ | | |
| | ಚಿಕ್ಕಮಗಳೂರು ಜಿಲ್ಲೆ | | | | | | |
| | | 1 | ಚಿಕ್ಕಮಗಳೂರು | 1 | ಕಡೂರು | 1 | ತರೀಕೆರೆ |
| | | | | 2 | ಬೀರೂರು | 2 | ಕೊಪ್ಪ |
| | | | | | | 3 | ನರಸಿಂಹರಾಜಪುರ |
| | | | | | | 4 | ಶೃಂಗೇರಿ |
| | | | | | | 5 | ಮೂಡಿಗೆರೆ |
| | ಉಡುಪಿ ಜಿಲ್ಲೆ | | | | | | |
| | | 1 | ಉಡುಪಿ | 1 | ಕಾರ್ಕಳ | | |
| | | | | 2 | ಕುಂದಾಪುರ | | |
| | | | | 3 | ಸಾಲಿಗ್ರಾಮ | | |
| | ದಕ್ಷಿಣ ಕನ್ನಡ ಜಿಲ್ಲೆ | | | | | | |
| 1 | ಮಂಗಳೂರು | 1 | ಮಂಗಳೂರು | 1 | ಮೂಡಬಿದ್ರೆ | 1 | ಉಳ್ಳಾಲ |
| | | | | 2 | ಪುತ್ತೂರು | 2 | ಬಂಟ್ವಾಳ |
| | | | | | | 3 | ಬೆಳ್ತಂಗಡಿ |
| | | | | | | 4 | ಸುಳ್ಯ |
| | | | | | | 5 | ಮುಲ್ಕಿ |
| ಬಿಜಾಪುರ ಜಿಲ್ಲೆ | | | | | | | |
| | | 1 | ಬಿಜಾಪೂರ | 1 | ಇಂಡಿ | 1 | ಬಸವನಬಾಗೇವಾಡಿ |
| | | | | 2 | ಮುದ್ದೇಬಿಹಾಳ | | |
| | | | | 3 | ಸಿಂದಗಿ | | |
| | | | | 4 | ತಾಳಿಕೋಟೆ | | |
| | ಉತ್ತರ ಕನ್ನಡ ಜಿಲ್ಲೆ | | | | | | |
| | | 1 | ಕಾರವಾರ | 1 | ಭಟ್ಕಳ | 1 | ಹೊನ್ನಾವರ |
| | | 2 | ಸಿರ್ಸಿ | 2 | ಕುಮಟಾ | 2 | ಯಲ್ಲಾಪೂರ |

| | | | | | | | |
|---|---|---|---|---|---|---|---|
| | | 3 | ದಾಂಡೇಲಿ | | | 3 | ಮುಂಡಗೋಡ |
| | | | | | | 4 | ಸಿದ್ದಾಪುರ |
| | | | | | | 5 | ಅಂಕೋಲಾ |
| | | | | | | 6 | ಹಳಿಯಾಳ |
| | **ಬಾಗಲಕೋಟೆ ಜಿಲ್ಲೆ** | | | | | | |
| | | 1 | ಬಾಗಲಕೋಟೆ | 1 | ಜಮಖಂಡಿ | 1 | ಹುನಗುಂದ |
| | | 2 | ರಬಕವಿ ಬನಹಟ್ಟಿ | 2 | ಮುಧೋಳ್ | 2 | ಬಾದಾಮಿ |
| | | | | 3 | ಮಹಾಲಿಂಗಪೂರ | 3 | ಬೀಳಗಿ |
| | | | | 4 | ಇಲಕಲ್ | 4 | ಕೆರೂರು |
| | | | | 5 | ಗುಳೇದಗುಡ್ಡ | 5 | ತೇರದಾಳ |
| | **ಹಾವೇರಿ ಜಿಲ್ಲೆ** | | | | | | |
| | | 1 | ರಾಣಿಬೇನ್ನೂರು | 1 | ಹಾವೇರಿ | 1 | ಹಿರೇಕೆರೂರು |
| | | | | 2 | ಹಾನಗಲ್ | 2 | ಶಿಗ್ಗಾಂವ್ |
| | | | | 3 | ಬ್ಯಾಡಗಿ | 3 | ಬಂಕಾಪುರ |
| | | | | 4 | ಸವಣೂರು | | |
| | **ಗದಗ ಜಿಲ್ಲೆ** | | | | | | |
| | | 1 | ಗದಗ ಬೆಟಗೇರಿ | 1 | ನರಗುಂದ | 1 | ಮುಂಡರಗಿ |
| | | | | 2 | ಗಜೇಂದ್ರಗಡ | 2 | ಶಿರಹಟ್ಟಿ |
| | | | | 3 | ಲಕ್ಷ್ಮೇಶ್ವರ | 3 | ನರೇಗಲ್ |
| | | | | | | 4 | ರೋಣ |
| | | | | | | 5 | ಮುಳಗುಂದ |
| | **ಧಾರವಾಡ ಜಿಲ್ಲೆ** | | | | | | |
| | | | | 1 | ಅಣ್ಣೀಗೇರಿ | 1 | ಕುಂದಗೋಳ |
| | | | | | | 2 | ಅಳ್ನಾವರ |
| | | | | | | 3 | ಕಲಘಟಗಿ |
| | | | | | | 4 | ನವಲಗುಂದ |
| | **ರಾಯಚೂರು ಜಿಲ್ಲೆ** | | | | | | |
| | | 1 | ರಾಯಚೂರು | 1 | ಮಾನ್ವಿ | 1 | ಲಿಂಗಸೂಗೂರು |
| | | | | 2 | ಸಿಂಧನೂರು | 2 | ಮುದಗಲ್ |
| | | | | | | 3 | ದೇವದುರ್ಗ |
| | **ಕೊಪ್ಪಳ ಜಿಲ್ಲೆ** | | | | | | |
| | | 1 | ಗಂಗಾವತಿ | 1 | ಕೊಪ್ಪಳ | 1 | ಕುಷ್ಠಗಿ |
| | | | | | | 2 | ಯಲಬುರ್ಗಾ |
| | **ಬೀದರ ಜಿಲ್ಲೆ** | | | | | | |
| | | 1 | ಬೀದರ | 1 | ಭಾಲ್ಕಿ | 1 | ಔರಾದ |
| | | | | 2 | ಬಸವಕಲ್ಯಾಣ | | |
| | | | | 3 | ಹುಮನಾಬಾದ | | |
| | | | | 4 | ಚಿಟಗುಪ್ಪಾ | | |
| | **ಬಳ್ಳಾರಿ ಜಿಲ್ಲೆ** | | | | | | |
| | | 1 | ಬಳ್ಳಾರಿ | 1 | ಕಂಪ್ಲಿ | 1 | ಹೊವಿನ ಹಡಗಲಿ |
| | | 2 | ಹೊಸಪೇಟೆ | | | 2 | ತೆಕ್ಕಲಕೋಟೆ |
| | | | | | | 3 | ಶಿರಗುಪ್ಪ |
| | | | | | | 4 | ಕೊಟ್ಟೂರು |
| | | | | | | 5 | ಕಮಲಾಪುರ |
| | | | | | | 6 | ಕೂಡ್ಲಿಗಿ |
| | | | | | | 7 | ಸಂಡೂರು |
| | **ಕೊಡಗು ಜಿಲ್ಲೆ** | | | | | | |
| | | | | 1 | ಮಡಿಕೇರಿ | 1 | ಸೋಮವಾರಪೇಟೆ |
| | | | | | | 2 | ವಿರಾಜಪೇಟೆ |

**ವಿಶೇಷ ಸೂಚನೆ: ಸರ್ಕಾರದ ಆದೇಶ ಸಂಖ್ಯೆ: ಡಿಪಿಎಆರ್ 96 ಸೇನೇನಿ 2005 ದಿನಾಂಕ:10.8.2005ರ ನಮೂನೆ–2ರಲ್ಲಿ ನೀಡಿದ ವ್ಯಾಸಂಗ ಪ್ರಮಾಣ ಪತ್ರಗಳನ್ನು ನೇಮಕಾತಿ ಅಧಿಸೂಚನೆ ದಿನಾಂಕದ ನಂತರ ಅಥವಾ ಅರ್ಜಿ ಸಲ್ಲಿಸುವ ದಿನಾಂಕ ದೊಳಗೆ ಪಡೆದು ಅರ್ಜಿಯೊಡನೆ ಲಗತ್ತಿಸತಕ್ಕದ್ದು. ಈ ಹಿಂದೆ ಪಡೆಯಲಾದ ಪ್ರಮಾಣ ಪತ್ರಗಳನ್ನು ಪರಿಗಣಿಸಲಾಗುವುದಿಲ್ಲ.**

**ಖ) ಯೋಜನಾ ನಿರಾಶ್ರಿತರ ಗುಂಪಿನಲ್ಲಿ ಆಯ್ಕೆ ಬಯಸುವ ಅಭ್ಯರ್ಥಿಗಳಿಗೆ ಸೂಚನೆಗಳು:–**

1. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 71 ಸೆನೆನಿ 2001 ದಿನಾಂಕ 24–10–2002 ರನ್ವಯ ಶೇಕಡ 5% ರಷ್ಟು ಹುದ್ದೆಗಳನ್ನು ಯೋಜನಾ ನಿರಾಶ್ರಿತರ ಗುಂಪಿಗೆ ಮೀಸಲಿಡಲಾಗಿದೆ.
2. ಅಧಿಸೂಚನಾ ಸಂಖ್ಯೆ: ಡಿಪಿಎಆರ್ 23 ಎಸ್.ಆರ್.ಆರ್. 99 ದಿನಾಂಕ 23–11–2000 ರಲ್ಲಿ ರಾಜ್ಯ ಸಿವಿಲ್ ಸೇವೆಗಳಲ್ಲಿನ "ಗ್ರೂಪ್ ಸಿ ಮತ್ತು ಡಿ" ಹುದ್ದೆಗಳ ನೇರ ನೇಮಕಾತಿಗಾಗಿ ಶೇಕಡ 5% ರಷ್ಟು ರಿಕ್ತ ಸ್ಥಾನಗಳನ್ನು "ಯೋಜನೆಗಳಿಂದ ನಿರಾಶ್ರಿತರಾದವರ ಕುಟುಂಬಗಳ" ಅಭ್ಯರ್ಥಿಗಳಿಂದ ಭರ್ತಿ ಮಾಡಲು ಆಸ್ಪದ ಕಲ್ಪಿಸಿದ್ದು, ಎಲ್ಲಾ ಅಂಶಗಳು (ಪಡೆದಿರುವ ಪ್ರತಿಶತ ಅಂಕಗಳು ಹಾಗೂ ಜನ್ಮ ದಿನಾಂಕ ಸರಿಸಮಾನ ಇದ್ದಲ್ಲಿ) (when all things are being equal) ಈ ಕೆಳಕಂಡ ಆಧ್ಯತೆಯಾನುಸಾರ ಭರ್ತಿ ಮಾಡಲು ನಿಗದಿಪಡಿಸಿದೆ:–

(i) ಯೋಜನೆಗಾಗಿ ಯಾವುದೇ ವ್ಯಕ್ತಿಯು ತನಗೆ ಆಧಾರವಾಗಿದ್ದ ವಾಸದ ಮನೆಯನ್ನು ಮತ್ತು ಕೊನೆಪಕ್ಷ ಶೇಕಡ 50 ರಷ್ಟು ಕೃಷಿ ಜಮೀನನ್ನು ಯೋಜನೆಗಾಗಿ ಕಳೆದುಕೊಳ್ಳಲಾದ ಅವನ ಕುಟುಂಬದ ಸದಸ್ಯರು.

(ii) ಯೋಜನೆಯ ಪೂರ್ವದ ಅವಧಿಯಲ್ಲಿ ಯಾವುದೇ ವ್ಯಕ್ತಿಯು ಭೂರಹಿತನಾಗಿದ್ದು, ತದನಂತರ ತನ್ನ ವಾಸದ ಮನೆಯನ್ನು ಯೋಜನೆಗಾಗಿ ಕಳೆದುಕೊಂಡ ವ್ಯಕ್ತಿಯ ಕುಟುಂಬದ ಸದಸ್ಯರು.

(iii) ಯೋಜನೆಗಾಗಿ ಯಾವುದೇ ವ್ಯಕ್ತಿಯು ತನಗೆ ಆಧಾರವಾಗಿದ್ದ ಶೇಕಡ 50ರಷ್ಟು ಮಾತ್ರ ಅಥವಾ ಅದಕ್ಕಿಂತ ಕಡಿಮೆ ಬೇಸಾಯದ ಭೂಮಿಯನ್ನು ಕಳೆದುಕೊಂಡ ವ್ಯಕ್ತಿಯ ಕುಟುಂಬದ ಸದಸ್ಯರು.

(iv) ಯೋಜನೆಗಾಗಿ ಇನ್ನಾವುದೇ ಪ್ರಕರಣದಲ್ಲಿ ನಿರಾಶ್ರಿತರಾದವರ ಕುಟುಂಬದ ಸದಸ್ಯರು.

**ವಿವರಣೆ:–** ಈ ಮೇಲ್ಕಂಡ ಉಪ ನಿಯಮದ ಉದ್ಧೃತ:–

(1) "ಯೋಜನೆಗಳಿಂದ ನಿರಾಶ್ರಿತರಾದ ವ್ಯಕ್ತಿ" ಎಂದರೆ, ಬಾಡಿಗೆ ಆಧಾರದ ಮೇಲೆ, ಅನುಭೋಗದ ಅವಧಿಗೆ ಜಮೀನು ಪಡೆದ ವ್ಯಕ್ತಿ ಸರ್ಕಾರದಿಂದ ಗುತ್ತಿಗೆ ಪಡೆದ, ಅಥವಾ ಇತರೆ ಆಸ್ತಿಗಳನ್ನು ಹೊಂದಿದ ಮಾಲೀಕನಾಗಿದ್ದು, ಯೋಜನೆಗಾಗಿ ಭೂಮಿಯನ್ನು : ಜಮೀನನ್ನು ಸ್ವಾಧೀನ ಪಡಿಸಿಕೊಳ್ಳುವುದಕ್ಕಿಂತ ಪೂರ್ವಭಾವಿಯಾಗಿ ಅಧಿಸೂಚನೆ ಹೊರಡಿಸುವ 5 ವರ್ಷಗಳ ಮುಂಚಿತವಾಗಿ ಯಾವುದೇ ವ್ಯಕ್ತಿಯ ಸ್ವಾಧೀನದಲ್ಲಿರುವ ಗ್ರಾಮೀಣದಲ್ಲಿನ ಅಥವಾ ಯೋಜನೆಯ ಪರಿಣಾಮದಿಂದಾಗಿ ಅದರ ವ್ಯಾಪ್ತಿಯಲ್ಲಿ ಬರುವಂತಹ ಜಮೀನು ಅಥವಾ ಆಸ್ತಿಯನ್ನು ಯೋಜನೆಯ ಉದ್ದೇಶಕ್ಕಾಗಿ ಸ್ವಾಧೀನ ಪಡಿಸಿಕೊಳ್ಳಲಾದ ಕಾರಣದಿಂದಾಗಿ ನಿರಾಶ್ರಿತನಾದ ವ್ಯಕ್ತಿ.

(2) "ಕುಟುಂಬ ಸದಸ್ಯರು" ಯೋಜನೆಗಳಿಂದ ನಿರಾಶ್ರಿತರಾದ ವ್ಯಕ್ತಿಗಳ ಸಂಬಂಧವೇನೆಂದರೆ ಅಂತಹ ವ್ಯಕ್ತಿಯ ಕುಟುಂಬವು ಆತನೊಂದಿಗೆ ವಾಸವಾಗಿರುವ ಮತ್ತು ಅವನ / ಅವಳ ಮೇಲೆ ಪಾಲನೆ ಹಾಗೂ ಪೋಷಣೆಗಾಗಿ ಅವಲಂಬಿತರಾಗಿರುವ ಗಂಡ / ಹೆಂಡತಿ, ಗಂಡು ಮಕ್ಕಳು, ಅವಿವಾಹಿತ ಹೆಣ್ಣು ಮಕ್ಕಳು, ಸೋದರರು ಮತ್ತು ಸೋದರಿಯರು.

(3) "ಯೋಜನೆ" ಎಂದರೆ, ನಿರಾಶ್ರಿತ ವ್ಯಕ್ತಿಗಳಿಂದ ಪಡೆಯಲಾದ ಜಮೀನನ್ನು ನಿರ್ಮಾಣ ಅಥವಾ ನೀರಾವರಿಯ ಉದ್ದೇಶಕ್ಕಾಗಿ ಅಥವಾ ನೀರು ಸರಬರಾಜು ಮಾಡುವ ಅಭಿವೃದ್ಧಿ ಕಾರ್ಯದ ವಿಸ್ತರಣೆ ಅಥವಾ ವಿದ್ಯುಚ್ಛಕ್ತಿ ಉತ್ಪಾದನೆ ಮತ್ತು ಪೂರೈಕೆ ಅಥವಾ ವಿದ್ಯುಚ್ಛಕ್ತಿ ಕಾರ್ಯಗಳ ಅನುಕೂಲಕರ ಅಭಿವೃದ್ಧಿಯೂ ಸೇರಿದಂತೆ ಸಾರ್ವಜನಿಕ ಉಪಯೋಗಗಳಿಗಾಗಿ ನಿರ್ಮಾಣ ಸುಧಾರಣೆ ಅಥವಾ ಅಭಿವೃದ್ಧಿ ಕಾರ್ಯಗಳ ಯೋಜನೆ.

**<u>ವಿಶೇಷ ಸೂಚನೆ:–</u>**

ಈ ಮೇಲ್ಕಂಡ ನಿಯಮಗಳು ಪ್ರಾರಂಭವಾಗುವುದಕ್ಕಿಂತ 20 ವರ್ಷಗಳ ಮುಂಚಿತವಾಗಿ ಯಾವುದೇ ಗ್ರಾಮೀಣದಲ್ಲಿನ ಅಥವಾ ಪ್ಲಾಟ್ ಅಥವಾ ಇನ್ನಿತರ ಯಾವುದೇ ಆಸ್ತಿಗಳನ್ನು ಹೊಂದಿದ್ದು, ಅಂತಹ ಆಸ್ತಿಗಳನ್ನು ಯೋಜನೆಗಳ ಉದ್ದೇಶಕ್ಕಾಗಿ ಉಪಯೋಗಿಸಿಕೊಂಡಿದ್ದಲ್ಲಿ, ಅಂತಹ ಜಮೀನುಗಳನ್ನು ಸ್ವಾಧೀನಪಡಿಸಿಕೊಂಡ ಕಾರಣದಿಂದಾಗಿ ನಿರಾಶ್ರಿತರಾದ ಕುಟುಂಬದ ಸದಸ್ಯರು/ವ್ಯಕ್ತಿಗಳು ಈ ನಿಯಮಗಳಿಗೆ ಸೌಲಭ್ಯ ಪಡೆಯಲು ಅರ್ಹರಿರುವುದಿಲ್ಲ.

ಯೋಜನೆಗಳಿಂದ ನಿರಾಶ್ರಿತರಾದ ಕುಟುಂಬದ ಅಭ್ಯರ್ಥಿಗಳು ಸರ್ಕಾರಿ ಸುತ್ತೋಲೆ ಸಂಖ್ಯೆ: ಸಿ.ಆ.ಸು.ಇ.:44:ಸೇ.ನೇನಿ ದಿನಾಂಕ 27–07–2001ರಲ್ಲಿ ನಿಗದಿಪಡಿಸಲಾದ ನಮೂನೆಯಲ್ಲಿ ಪ್ರಮಾಣ ಪತ್ರವನ್ನು ಸಕ್ಷಮ ಪ್ರಾಧಿಕಾರದಿಂದ ಪಡೆದು ಅದರ ಎರಡು ನಕಲು ಪ್ರತಿಗಳನ್ನು ಅರ್ಜಿಯೊಂದಿಗೆ ಲಗತ್ತಿಸತಕ್ಕದ್ದು.

**<u>ಕನ್ನಡ ಮಾಧ್ಯಮದ ಅಭ್ಯರ್ಥಿ:–</u>**

ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 71 ಎಸ್‌ಆರ್‌ಆರ್ 2001, ದಿನಾಂಕ: 24.10.2002 ರಲ್ಲಿ ಹೊರಡಿಸಿದ ಕರ್ನಾಟಕ ಸರ್ಕಾರಿ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ 9(1)(ಸಿ)ರ ಅನ್ವಯ ಅಭ್ಯರ್ಥಿಯು 1 ರಿಂದ 10ನೇ ತರಗತಿಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರಬೇಕು. ಈ ಬಗ್ಗೆ ಸಂಬಂಧಪಟ್ಟ ಶಾಲಾ ಮುಖ್ಯಸ್ಥರಿಂದ ನಿಗಧಿತ ನಮೂನೆಯಲ್ಲಿ ಪ್ರಮಾಣ ಪತ್ರವನ್ನು ಪಡೆದು ಸಂಬಂಧಿಸಿದ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೇಲು ಸಹಿ ಮಾಡಿಸಿ ಅರ್ಜಿಯೊಡನೆ ಲಗತ್ತಿಸಬೇಕು.

**<u>ತಾತ್ಕಾಲಿಕ ಆಯ್ಕೆಪಟ್ಟಿ:–</u>**

ಅರ್ಹತೆ (ಮೆರಿಟ್) ಮತ್ತು ಮೀಸಲಾತಿ ನಿಯಮಗಳನ್ವಯ ವಿವಿಧ ವರ್ಗದ ಹುದ್ದೆಗಳಿಗೆ ಅಭ್ಯರ್ಥಿಗಳನ್ನು ಆಯ್ಕೆಮಾಡಿ ತಾತ್ಕಾಲಿಕ ಆಯ್ಕೆಪಟ್ಟಿಯನ್ನು ಆಯ್ಕೆ ಪ್ರಾಧಿಕಾರಿಯಾದ ವಿಭಾಗೀಯ ಕಾರ್ಯದರ್ಶಿಗಳು, ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ ಮತ್ತು ಪದನಿಮಿತ್ತ ಸಹ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಗುಲ್ಬರ್ಗಾ ವಿಭಾಗ, ಗುಲ್ಬರ್ಗಾ ಇವರ ಕಚೇರಿ ಮತ್ತು ಈ ವಿಭಾಗದ ಎಲ್ಲಾ ಜಿಲ್ಲಾ ಉಪನಿರ್ದೇಶಕರು (ಆಡಳಿತ) ರವರ ಕಚೇರಿಗಳಲ್ಲಿ ಪ್ರಕಟಿಸಲಾಗುವುದು ಹಾಗೂ ಈ ಬಗ್ಗೆ ರಾಜ್ಯ ಮಟ್ಟದ ಕನಿಷ್ಠ

ಎರಡು ದಿನಪತ್ರಿಕೆಗಳಲ್ಲಿ ಸಂಕ್ಷಿಪ್ತ ಸೂಚನೆಯನ್ನು ಪ್ರಕಟಿಸಲಾಗುವುದು. ಅಭ್ಯರ್ಥಿಗಳು ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು ಪರಿಶೀಲಿಸಿ ತಮ್ಮ ಆಕ್ಷೇಪಣೆಗಳು ಏನಾದರೂ ಇದ್ದಲ್ಲಿ ಮುಂದೆ ತಿಳಿಸುವ ನಿಗದಿತ ದಿನಾಂಕದೊಳಗೆ ಆಕ್ಷೇಪಣೆಗಳನ್ನು ಸಲ್ಲಿಸಬಹುದಾಗಿದೆ. ಈ ದಿನಾಂಕದ ನಂತರ ಸಲ್ಲಿಸುವ ಯಾವುದೇ ಆಕ್ಷೇಪಣೆಗಳನ್ನು ಪರಿಗಣಿಸದೆ ತಿರಸ್ಕರಿಸಲಾಗುವುದು. ನಿಗದಿತ ಸಮಯದೊಳಗೆ ಆಕ್ಷೇಪಣೆಗಳನ್ನು ಸಲ್ಲಿಸದೆ ಇರುವ ಅಭ್ಯರ್ಥಿಗಳು ಅಂತಿಮ ಆಯ್ಕೆ ಪಟ್ಟಿ ಪ್ರಕಟವಾದ ನಂತರ ಯಾವುದೇ ರೀತಿಯ ಪರಿಹಾರಕ್ಕೆ ಅರ್ಹರಾಗುವುದಿಲ್ಲ. ಮತ್ತು ಈ ಬಗ್ಗೆ ವೈಯಕ್ತಿಕವಾಗಿ ಯಾವುದೇ ಅಭ್ಯರ್ಥಿಗೂ ಸೂಚನೆ ನೀಡಲಾಗುವುದಿಲ್ಲ.

**ವಿಶೇಷ ಸೂಚನೆ:–**

ತಾತ್ಕಾಲಿಕ ಆಯ್ಕೆಪಟ್ಟಿ ಪ್ರಕಟಿಸಿದ ನಂತರ ಅಭ್ಯರ್ಥಿಗಳು ಆಕ್ಷೇಪಣೆ ಸಲ್ಲಿಸುವಾಗ ಮೂಲ ಅರ್ಜಿಯಲ್ಲಿ ದಾಖಲಿಸಿದ ವಿಷಯಗಳಿಗೆ ಸಂಬಂಧಿಸಿದಂತೆ ಮಾತ್ರ ಆಕ್ಷೇಪಣೆ ಸಲ್ಲಿಸಬಹುದು. (ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ) ನಮೂದಿಸಲು ಬಿಟ್ಟು ಹೋಗಿದ್ದ / ಮರೆತು ಹೋಗಿದ್ದ ಯಾವುದೇ ಮಾಹಿತಿಗಳನ್ನು ಅಂದರೆ ಅಂಕಗಳ ವಿವರ, ಮಿಸಲಾತಿ ಪ್ರವರ್ಗ / ಗೌರವ ಶಿಕ್ಷಕರಾಗಿ / ಅರೆಕಾಲಿಕ ಶಿಕ್ಷಕರಾಗಿ / ಜನಗಣಗತಿ ಸಂಸ್ಥೆಯಲ್ಲಿ ಗುತ್ತಿಗೆ ಆಧಾರದ ಮೇಲೆ ಸೇವೆ ಸಲ್ಲಿಸಿದ ವರ್ಷಗಳ ಬಗ್ಗೆ ಮಾಹಿತಿಗಳು ಇತ್ಯಾದಿ ಆಯ್ಕೆಗೆ ಸಂಬಂಧಿಸಿದ ಮಾಹಿತಿಗಳನ್ನು ಅಥವಾ ಹೊಸದಾಗಿ ದಾಖಲಿಸಲು ಬಯಸುವ ಮಾಹಿತಿಗಳನ್ನು ಸಲ್ಲಿಸಲು ಅವಕಾಶವಿರುವುದಿಲ್ಲ. ಅಂತಹ ಆಕ್ಷೇಪಣೆ ಮತ್ತು ಲಗತ್ತುಗಳನ್ನು ಪರಿಗಣಿಸದೆ ತಿರಸ್ಕರಿಸಲಾಗುವುದು.

**ಅಂತಿಮ ಆಯ್ಕೆ ಪಟ್ಟಿ:–**

1) ತಾತ್ಕಾಲಿಕ ಆಯ್ಕೆಪಟ್ಟಿಯಲ್ಲಿ ಆಯ್ಕೆ ಹೊಂದಿರುವ ಎಲ್ಲಾ ಅಭ್ಯರ್ಥಿಗಳ ಮೂಲ ಅಂಕಪಟ್ಟಿ ಮತ್ತು ಪ್ರಮಾಣ ಪತ್ರಗಳನ್ನು ಪರಿಶೀಲಿಸಿ ದೃಢಪಡಿಸಿಕೊಂಡ ನಂತರ ಅಂತಿಮ ಆಯ್ಕೆಪಟ್ಟಿಯನ್ನು ಪ್ರಕಟಿಸಲಾಗುವುದು. ಮೂಲ ಪ್ರಮಾಣ ಪತ್ರಗಳನ್ನು ಪರಿಶೀಲನೆಗೆ ಸಲ್ಲಿಸದೇ ಇರುವ ಅಭ್ಯರ್ಥಿಗಳು ಅಂತಿಮ ಆಯ್ಕೆಪಟ್ಟಿಯಲ್ಲಿ ಪರಿಗಣನೆಗೆ ಬರುವುದಿಲ್ಲ.
2) ಅಂತಿಮ ಆಯ್ಕೆ ಪಟ್ಟಿಯನ್ನು ಪ್ರಕಟಿಸುವ ಸಂದರ್ಭದಲ್ಲಿ ಅಭ್ಯರ್ಥಿಗಳು ಅರ್ಜಿಯಲ್ಲಿ ನಮೂದಿಸಿರುವ ಜಿಲ್ಲಾ ಆದ್ಯತೆಯನ್ನು ಆಧಾರವಾಗಿಟ್ಟುಕೊಂಡು ಮೆರಿಟ್ ಮತ್ತು ಮೀಸಲಾತಿ ಆಧರಿಸಿ ನಿಯಮಾನುಸಾರ ಜಿಲ್ಲೆಗಳನ್ನು ಹಂಚಿಕೆ ಮಾಡಲಾಗುತ್ತದೆ.
3) ಜಿಲ್ಲಾ ಮಟ್ಟದ ಆಯ್ಕೆ ಪಟ್ಟಿಯಲ್ಲಿ ಆಯ್ಕೆಯಾದ ಅರ್ಹ ಅಭ್ಯರ್ಥಿಗಳ ಅರ್ಹತೆ ಮತ್ತು ಮೀಸಲಾತಿಗಳನ್ನು ಖಚಿತಪಡಿಸಿಕೊಂಡು ನೇಮಕಾತಿ ಪ್ರಾಧಿಕಾರಿಯಾದ ಸಂಬಂಧಿಸಿದ ಜಿಲ್ಲಾ ಉಪನಿರ್ದೇಶಕರು (ಆಡಳಿತ) ರವರು ನೇಮಕಾತಿ ಆದೇಶವನ್ನು ಕೌನ್ಸಿಲಿಂಗ್ ಮೂಲಕ ನೀಡುತ್ತಾರೆ.

**ವಿಶೇಷ ಸೂಚನೆ:–**

ಉನ್ನತೀಕರಿಸಲಾದ ಸರಕಾರಿ ಹಿರಿಯ ಪ್ರಾಥಮಿಕ ಶಾಲೆಗಳಲ್ಲಿ ಸ್ಥಳ ನಿಯುಕ್ತಿ ಹೊಂದಿದ ಅಭ್ಯರ್ಥಿಗಳು ಆಯಾಯಾ ಶಾಲೆಗಳಲ್ಲಿ 6ನೇ ಮತ್ತು 7ನೇ ತರಗತಿಯ ವಿಭಾಗಗಳಲ್ಲಿ ಗಣಿತ ಮತ್ತು ವಿಜ್ಞಾನ ವಿಷಯಗಳ ಬೋಧನೆ ಮಾಡಿ ಕಾರ್ಯಭಾರವನ್ನು ಸರಿದೂಗಿಸುವುದು ಕಡ್ಡಾಯವಾಗಿರುತ್ತದೆ. ಮತ್ತು ಇವರು ಹಿರಿಯ ಪ್ರಾಥಮಿಕ ಶಾಲೆಗಳ ಮುಖ್ಯೋಪಾಧ್ಯಾಯರ ಆಡಳಿತ ಮತ್ತು ಶೈಕ್ಷಣಿಕ ಮುಖಂಡತ್ವದಲ್ಲಿ ಸೇವೆ ಸಲ್ಲಿಸಲು ಬದ್ದರಾಗಿರಬೇಕಾಗುತ್ತದೆ.

**ನಿಬಂಧನೆಗಳು:–**

1) ಅಭ್ಯರ್ಥಿಗಳು ನಿಗದಿತ ನಮೂನೆಯಲ್ಲಿ ಮಾತ್ರ ಅರ್ಜಿಗಳನ್ನು ಭರ್ತಿಸಿ, ಸಹಿ ಮಾಡಿ ಸಲ್ಲಿಸಬೇಕು. ನಿಗದಿತ ನಮೂನೆಯಲ್ಲಿ ಇಲ್ಲದ ಅರ್ಜಿಗಳನ್ನು ತಿರಸ್ಕರಿಸಲಾಗುವುದು. ಈ ಬಗ್ಗೆ ಯಾವುದೇ ಸೂಚನೆಗಳನ್ನು ವೈಯಕ್ತಿಕವಾಗಿ ನೀಡಲಾಗುವುದಿಲ್ಲ. ಅಭ್ಯರ್ಥಿಗಳಿಗೆ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯ ಪ್ರವೇಶ ಪತ್ರವನ್ನು ಅರ್ಜಿ ಸ್ವೀಕರಿಸುವ ಸಮಯದಲ್ಲಿ ನೀಡಲಾಗುವುದು.
2) ಮೂಲ ಅರ್ಜಿಯಲ್ಲಿ (ಓ.ಎಂ.ಆರ್) ನೀಡಿರುವ ಮಾಹಿತಿಗಳ ಬದಲಾವಣೆಗೆ ಯಾವುದೇ ಹಂತದಲ್ಲೂ ಅವಕಾಶವಿರುವುದಿಲ್ಲ.
3) ಅಭ್ಯರ್ಥಿಯು ಕೋರುವ ಮೀಸಲಾತಿ ಮತ್ತು ಇತರೆ ಯಾವುದೇ ಸೌಲಭ್ಯಗಳಿಗೆ ಸಂಬಂಧಿಸಿದಂತೆ ಎಲ್ಲಾ ಪ್ರಮಾಣ ಪತ್ರಗಳ ದೃಢೀಕೃತ ಪ್ರತಿಗಳನ್ನು ಅರ್ಜಿಯೊಡನೆ ಲಗತ್ತಿಸಬೇಕು. ಹಾಗೂ ಅದರ ವಿವರಗಳನ್ನು ಅರ್ಜಿಯಲ್ಲಿ ನೀಡಲಾಗಿರುವ ನಿಗದಿತ ಕಾಲಂಗಳಲ್ಲಿ ತಪ್ಪದೆ ನಮೂದಿಸಬೇಕು. ಒಂದು ವೇಳೆ ಯಾವುದೇ ವಿವರಗಳನ್ನು ನಿಗದಿ ಪಡಿಸಿದ ಕಾಲಂಗಳಲ್ಲಿ ನಮೂದಿಸದೆ ಇದ್ದಲ್ಲಿ ಮತ್ತು ಮೀಸಲಾತಿಗೆ ಸಂಬಂಧ ಪಟ್ಟಂತಹ ದಾಖಲೆಗಳನ್ನು ಅರ್ಜಿಯೊಡನೆ ಲಗತ್ತಿಸದಿದ್ದಲ್ಲಿ ಅಂತಹ ಮೀಸಲಾತಿ/ಕೋರಿಕೆಯನ್ನು ತಿರಸ್ಕರಿಸಲಾಗುವುದು. ಅಭ್ಯರ್ಥಿಯು ಅರ್ಜಿಯಲ್ಲಿ ನಮೂದಿಸಿರುವ ಮಾಹಿತಿಯನ್ನು ಮಾತ್ರ ಪರಿಗಣಿಸಲಾಗುವುದು.
4) ಅಭ್ಯರ್ಥಿಯು ಅರ್ಜಿ ಸಲ್ಲಿಸುವ ಸಮಯದಲ್ಲಿ ಯಾವುದೇ ಸರ್ಕಾರಿ ಇಲಾಖೆಯಲ್ಲಿ ಖಾಯಂ ಅಥವಾ ಹಂಗಾಮಿಯಾಗಿ ನೌಕರಿಯಲ್ಲಿದ್ದರೆ ಅವನು / ಅವಳು ತಾನು ಸೇವೆ ಸಲ್ಲಿಸುತ್ತಿರುವ ಹುದ್ದೆಯ ನೇಮಕಾತಿ ಪ್ರಾಧಿಕಾರಿಯವರ ಸಮ್ಮತಿಯಿಲ್ಲದೆ ಅರ್ಜಿಯನ್ನು ಸಲ್ಲಿಸಿದ್ದರೆ, ಅಂತಹ ಅಭ್ಯರ್ಥಿ ನೇಮಕಾತಿಗೆ ಅರ್ಹರಾಗುವುದಿಲ್ಲ.
5) ಅರ್ಜಿ ನಮೂನೆ, ಉತ್ತರ ಪತ್ರಿಕೆ, ಪ್ರವೇಶ ಪತ್ರಗಳ ನಿಗದಿತ ಸ್ಥಳಗಳಲ್ಲಿ ಎಡಗೈ ಹೆಬ್ಬೆಟ್ಟು ಗುರುತನ್ನು ಸ್ಪಷ್ಟವಾಗಿ ಹಾಕಬೇಕು. ಎಡಗೈ ಹೆಬ್ಬೆರಳ ಗುರುತು ರಹಿತ ಅರ್ಜಿಯನ್ನು ಯಾವುದೇ ಸೂಚನೆ ನೀಡದೆ ತಿರಸ್ಕರಿಸಲಾಗುವುದು.
6) ಅರ್ಜಿಯೊಡನೆ ಲಗತ್ತಿಸುವ ಪಾಸ್‌ಪೋರ್ಟ್ ಅಳತೆಯ ಭಾವ ಚಿತ್ರವು ಅಧಿಸೂಚನೆ ದಿನಾಂಕದ ನಂತರ ತೆಗೆಸಿದ್ದಾಗಿರಬೇಕು. ನೇಮಕಾತಿ ಪ್ರಕ್ರಿಯೆಗೆ ಬಳಸುವ ಎಲ್ಲಾ ಭಾವ ಚಿತ್ರಗಳು ಒಂದೇ ಬಾರಿ ತೆಗೆಸಿದ್ದು ಒಂದೇ ತೆರನಾಗಿರಬೇಕು.
7) ಒಂದಕ್ಕಿಂತ ಹೆಚ್ಚು ಜಿಲ್ಲೆಯಲ್ಲಿ ಅರ್ಜಿ ಸಲ್ಲಿಸುವ ಅಭ್ಯರ್ಥಿಗಳು ಪಡೆದುಕೊಂಡ ಎಲ್ಲಾ ಪ್ರವೇಶ ಪತ್ರಗಳನ್ನು ನಿಗದಿತ ನಮೂನೆಯೊಂದಿಗೆ ಪರೀಕ್ಷಾ ದಿನದಂದು ಪರೀಕ್ಷೆಗೆ ಹಾಜರಾಗುವ ಕೇಂದ್ರದಲ್ಲಿ ಕೊಠಡಿ ಮೇಲ್ವಿಚಾರಕರಿಗೆ ಒಪ್ಪಿಸುವುದು. ತಪ್ಪಿದಲ್ಲಿ ಮುಂದಿನ ಆಗುಹೋಗುಗಳಿಗೆ ಅಭ್ಯರ್ಥಿಯೇ ಜವಾಬ್ದಾರರಾಗಿರುತ್ತಾರೆ.

8) ಆಯ್ಕೆಯಾದ ಅಭ್ಯರ್ಥಿಯು ನೇಮಕಾತಿ ಹೊಂದುವ ಜೇಷ್ಠತಾ ಘಟಕದಲ್ಲಿ (ಜಿಲ್ಲೆ) (Unit of seniority) ಯಲ್ಲಿ ಕಡ್ಡಾಯವಾಗಿ ಸೇವೆ ಸಲ್ಲಿಸತಕ್ಕದ್ದು.

**ಯಾವುದೇ ವ್ಯಕ್ತಿಯು ಸರ್ಕಾರಿ ನೇಮಕಾತಿಗೆ ಈ ಕೆಳಕಂಡ ಸಂದರ್ಭದಲ್ಲಿ ಅರ್ಹನಾಗುವುದಿಲ್ಲ.**

ಇ) ಯಾವುದೇ ನಿಷೇಧಿತ ಸಂಘ ಸಂಸ್ಥೆಯ ಸದಸ್ಯನಾಗಿರುವಲ್ಲಿ ಅಥವಾ ಸದಸ್ಯರಾಗಿದ್ದಲ್ಲಿ ಅಥವಾ ಯಾವುದೇ ನಿಷೇಧಿತ ಸಂಸ್ಥೆಯ ಕಾರ್ಯ ಚಟುವಟಿಕೆಯಲ್ಲಿ ಸಕ್ರಿಯವಾಗಿ ಭಾಗವಹಿಸಿದ್ದಲ್ಲಿ.

ಆ) ಭಾರತ ಸಂವಿಧಾನಕ್ಕೆ ಚ್ಯುತಿ ತರುವ ಕಾರ್ಯದಲ್ಲಿ ಪ್ರವೃತ್ತನಾದಲ್ಲಿ.

ಇ) ಕಾನೂನು ಭಂಗ ಮಾಡಿ ಹಿಂಸಾಕೃತ್ಯದಲ್ಲಿ ತೊಡಗಿದವರಾಗಿದ್ದರೆ.

ಎ) ಭಾರತ ದೇಶದ ಸಾರ್ವಭೌಮ ಹಾಗೂ ಸುಭದ್ರತೆಗೆ ಧಕ್ಕೆ ತರುವ ಕಾರ್ಯದಲ್ಲಿ ಪ್ರವೃತ್ತರಾಗಿದ್ದರೆ.

ಏ) ಭಾರತ ಸರ್ಕಾರದ ಅಥವಾ ಯಾವುದೇ ರಾಜ್ಯ ಸರ್ಕಾರದ ಸೇವೆಯಿಂದ ಉಚ್ಚಾಟನೆಗೊಂಡ ಪ್ರಸಂಗಗಳಲ್ಲಿ.

ಊ) ನ್ಯಾಯಬಾಹಿರ ಕೃತ್ಯಗಳಲ್ಲಿ ತೊಡಗಿ ಅಪರಾಧಕ್ಕೆ ಒಳಗಾದ ಪ್ರಸಂಗಗಳಲ್ಲಿ.

ಋ) ಒಬ್ಬ ಜೀವಂತ ಪತ್ನಿಗಿಂತ ಹೆಚ್ಚು ಮಂದಿ ಪತ್ನಿಯರನ್ನು ಹೊಂದಿರುವ ಪುರುಷ ಅಭ್ಯರ್ಥಿಯು ಮತ್ತು ಈಗಾಗಲೇ ಇನ್ನೊಬ್ಬ ಹೆಂಡತಿಯಿರುವ ವ್ಯಕ್ತಿಯನ್ನು ಮದುವೆಯಾಗಿರುವ ಮಹಿಳಾ ಅಭ್ಯರ್ಥಿಯು ಸರ್ಕಾರದಿಂದ ಪೂರ್ವಾನುಮತಿಯನ್ನು ಪಡೆಯದೆ ನೇಮಕಾತಿಗೆ ಅರ್ಹರಾಗುವುದಿಲ್ಲ.

9) ಅಭ್ಯರ್ಥಿಯು ಮತ್ತೊಬ್ಬ ವ್ಯಕ್ತಿಯಂತೆ ನಟಿಸಿ ವಂಚಿಸಿದ ಅಥವಾ ದಾಖಲೆಗಳನ್ನು ತಿದ್ದಿದ ಅಥವಾ ಸೃಷ್ಟಿಸಿದ ಅಥವಾ ಸರಿಯಿಲ್ಲದ ಅಥವಾ ಸುಳ್ಳು ಅಥವಾ ದೋಷಪೂರ್ಣ ವಿವರಗಳನ್ನು ನೀಡುವ ಅಥವಾ ನೇಮಕಾತಿಗಾಗಿ ನಡೆಸುವ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಅನುಚಿತ ರೀತಿಯಲ್ಲಿ ವರ್ತಿಸುವ ಅಥವಾ ವರ್ತಿಸಲು ಪ್ರಯತ್ನಿಸಿದ ಅಥವಾ ಅವನ / ಅವಳ ನೇಮಕಾತಿಗಾಗಿ ಸಂಬಂಧಿಸಿದಂತೆ ಯಾವುದೇ ಇತರ ಅಕ್ರಮ ಅನುಚಿತ ವಿಧಾನಗಳನ್ನು ಅನುಸರಿಸಿದ ಕಾರಣದಿಂದಾಗಿ ತಪ್ಪಿತಸ್ಥನೆಂದು ಕಂಡು ಬಂದಲ್ಲಿ ಅವನ / ಅವಳ ಅಭ್ಯರ್ಥಿ ತನವನ್ನು ಯಾವುದೇ ಸೂಚನೆ ನೀಡದೆ ರದ್ದುಗೊಳಿಸಲಾಗುವುದು ಮತ್ತು ಅಂತಹವರನ್ನು ಕ್ರಿಮಿನಲ್ ಪ್ರಾಸಿಕ್ಯೂಷನ್‌ಗೆ ಮತ್ತು ಶಿಸ್ತು ಕ್ರಮಕ್ಕೆ ಒಳಪಡಿಸಲಾಗುವುದು.

10) ಅರ್ಜಿ ಜೊತೆಗೆ ದೃಢೀಕರಿಸಲ್ಪಟ್ಟ ಎಲ್ಲಾ ಅಂಕಪಟ್ಟಿಗಳು, ಮೀಸಲಾತಿ ಹಾಗೂ ಇತರೆ ಪತ್ರಗಳನ್ನು ಲಗತ್ತಿಸಬೇಕು.

11) ಆಯ್ಕೆ ಪ್ರಾಧಿಕಾರಿಯು ನಡೆಸುವ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆ ಮತ್ತು ಅರ್ಹತಾ ಪರೀಕ್ಷೆಗಳಲ್ಲಿ ಪಡೆದಿರುವ ಅಂಕಗಳ ಆಧಾರದ ಮೇಲೆ ಆಯ್ಕೆ ಮಾಡಿದ ಆಯ್ಕೆಪಟ್ಟಿಯಲ್ಲಿ ಅವನ / ಅವಳ ಆಯ್ಕೆಯು ಖಾಯಂ ಆಗದ ಹೊರತು ನೇಮಕಾತಿಗಾಗಿ ಹಕ್ಕನ್ನು ಪಡೆದುಕೊಳ್ಳುವುದಿಲ್ಲ.

12) ಈ ನೇಮಕಾತಿಯು, ಮತ್ತು ಈ ಅಧಿಸೂಚನೆಯಲ್ಲಿ ತಿಳಿಸಿರುವ ಆದೇಶಗಳು, ಜ್ಞಾಪನಗಳು, ಸುತ್ತೋಲೆಗಳು ಕಾಲದಿಂದ ಕಾಲಕ್ಕೆ ಹೊರಡಿಸಿರುವ ಆದೇಶಗಳು ಮತ್ತು ತಿದ್ದುಪಡಿಗೆ ಒಳಪಟ್ಟಿರುತ್ತದೆ.

13) ಅಭ್ಯರ್ಥಿಗಳು ಇತ್ತೀಚಿನ ಪಾಸ್ ಪೋರ್ಟ್ ಅಳತೆಯ ಏಳು ಭಾವಚಿತ್ರಗಳನ್ನು ಸಲ್ಲಿಸಬೇಕು. ಇವುಗಳಲ್ಲಿ ಒಂದನ್ನು ಅರ್ಜಿ ನಮೂನೆಯ ನಿಗದಿಪಡಿಸಿದ ಜಾಗದಲ್ಲಿ ಅಂಟಿಸಿ ಎರಡನೆಯದನ್ನು ಅರ್ಜಿ ಸ್ವೀಕೃತಿ ಪತ್ರದಲ್ಲಿ ಅಂಟಿಸಬೇಕು. ಮೂರು ಮತ್ತು ನಾಲ್ಕನೆಯದನ್ನು ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯ ಪ್ರವೇಶ ಪತ್ರದ ಪ್ರಥಮ ಮತ್ತು ದ್ವಿತೀಯ ಪ್ರತಿಯಲ್ಲಿ ಗೊತ್ತಾದ ಜಾಗದಲ್ಲಿ ಅಂಟಿಸಬೇಕು. (ಭಾವ ಚಿತ್ರಗಳನ್ನು ಉಪನಿರ್ದೇಶಕರು ಅಥವಾ ಉಪನಿರ್ದೇಶಕರಿಂದ ಅನುಮೋದಿಸಲ್ಪಟ್ಟ ಪತ್ರಾಂಕಿತ ಅಧಿಕಾರಿಯಿಂದ ದೃಢೀಕರಿಸಿರಬೇಕು).

14) ಅಭ್ಯರ್ಥಿಗಳು ಅರ್ಜಿ ಸಲ್ಲಿಸುವ ಸಮಯದಲ್ಲಿ ಅರ್ಜಿಯೊಂದಿಗೆ ವಿದ್ಯಾರ್ಹತೆಯ ಎಲ್ಲಾ ವರ್ಷಗಳ, ಎಲ್ಲಾ ಪ್ರಯತ್ನಗಳ ಅಂಕಪಟ್ಟಿಗಳು, ಪದವಿಯ ಪ್ರಮಾಣಪತ್ರಗಳು, ವಮಯಸ್ಸಿನ ದೃಢೀಕರಣದ ಬಗ್ಗೆ ಎಸ್.ಎಸ್.ಎಲ್.ಸಿ. ಅಂಕಪಟ್ಟಿ, ಮೀಸಲಾತಿ ಪ್ರಮಾಣಪತ್ರಗಳು, ಅರೆಕಾಲಿಕ, ಗೌರವ ಶಿಕ್ಷಕ, ಜನಗಣತಿ ಸಂಸ್ಥೆಯಲ್ಲಿ ಸೇವೆ ಸಲ್ಲಿಸುವತ್ತಿರುವ/ಸಲ್ಲಿಸಿರುವ ಬಗ್ಗೆ ಸೇವಾ ದೃಢೀಕರಣ ಪ್ರಮಾಣ ಪತ್ರಗಳ ಪ್ರತಿಗಳನ್ನು (ನಮೂನೆಗಳ ಮಾದರಿಯನ್ನು ಅರ್ಜಿ ನಮೂನೆ–ಸಹಿತ–ಮಾಹಿತಿ ಪುಸ್ತಕದಲ್ಲಿ ನೀಡಲಾಗಿದೆ). ಅಭ್ಯರ್ಥಿಗಳಿಗೆ ಅನ್ವಯಿಸುವ ಅವಶ್ಯಕತೆಗೆ ಅನುಗುಣವಾಗಿ ತಪ್ಪದೆ ಲಗತ್ತಿಸುವುದು. ಈ ಲಗತ್ತುಗಳನ್ನು ಅರ್ಜಿ ಸ್ವೀಕರಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕ ಮತ್ತು ಸಮಯದೊಳಗೆ ಅರ್ಜಿ ಜೊತಿಯಲ್ಲಿ ತಪ್ಪದೆ ಲಗತ್ತಿಸಿರಬೇಕು. ಇವುಗಳನ್ನು ಅರ್ಜಿ ಜೊತಿ ಸಲ್ಲಿಸಲು ಸಾಧ್ಯವಾಗಲಿಲ್ಲವೆಂದು ತಿಳಿಸಿ, ತಾತ್ಕಾಲಿಕ ಪಟ್ಟಿ ಪ್ರಕಟಿಸಿದ ನಂತರ ಆಕ್ಷೇಪಣೆಯೊಂದಿಗೆ ಸಲ್ಲಿಸಲು ಅವಕಾಶವಿಲ್ಲ. ಅಂತಹ ಆಕ್ಷೇಪಣೆಗಳನ್ನು ತಿರಸ್ಕರಿಸಲಾಗುವುದು.

15) ಆಯ್ಕೆ ಮತ್ತು ನೇಮಕಾತಿ ಪ್ರಕ್ರಿಯೆಯ ಯಾವುದೇ ಹಂತದಲ್ಲಿ ಆಯ್ಕೆಗೆ ಪರಿಗಣಿಸಿರುವ ಅಂಶಗಳ ಬಗ್ಗೆ ವ್ಯತ್ಯಾಸ ಕಂಡು ಬಂದಲ್ಲಿ ಅಥವಾ ಆಕ್ಷೇಪಣೆ ಸಲ್ಲಿಕೆಯಾದಲ್ಲಿ, ಕೋರ್ಟಿನ ತೀರ್ಪುಗಳು, ಇಲಾಖೆ ಸುತ್ತೋಲೆಗಳು, ಸರಕಾರದ ನಿರ್ದೇಶನಗಳು ಬಂದಲ್ಲಿ ಪ್ರಕಟಿಸಿರುವ ಪಟ್ಟಿಗಳಲ್ಲಿ ಸೂಕ್ತ ಬದಲಾವಣೆ ಮಾಡಿ ಆಯ್ಕೆ ಪಟ್ಟಿ ಪರಿಷ್ಕರಿಸುವ ಅಧಿಕಾರವನ್ನು ಆಯ್ಕೆ ಪ್ರಾಧಿಕಾರ ಹೊಂದಿರುತ್ತದೆ.

16) ಹೆಚ್ಚಿನ ಮಾಹಿತಿಗಾಗಿ ಮಾಹಿತಿ ಪುಸ್ತಕವನ್ನು ಅವಲೋಕಿಸಬಹುದು, ಅಥವಾ ಆಯ್ಕೆಪ್ರಾಧಿಕಾರಿಗಳನ್ನು ಅಥವಾ ಸಂಬಂಧಿಸಿದ ಜಿಲ್ಲಾ ಉಪನಿರ್ದೇಶಕರು (ಆಡಳಿತ)ರವರನ್ನು ಸಂಪರ್ಕಿಸಬಹುದು.

**ವೈ.ಟಿ. ಗುರುಮೂರ್ತಿ**

ಆಯ್ಕೆ ಪ್ರಾಧಿಕಾರಿ ಹಾಗೂ ವಿಭಾಗೀಯ ಕಾರ್ಯದರ್ಶಿಗಳು
ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ ಮತ್ತು
ಪದನಿಮಿತ್ತ ಸಹ ನಿರ್ದೇಶಕರು, ಸಾ.ಶಿ.ಇ. ಆಯುಕ್ತಾಲಯ, ಗುಲ್ಬರ್ಗಾ.

**ಅನುಬಂಧ–1**

**ಗುಲಬರ್ಗಾ ವಿಭಾಗ ಗುಲಬರ್ಗಾ**

**2009–10ನೇ ಸಾಲಿನ ಪ್ರೌಢ ಶಾಲಾ ಸಹ ಶಿಕ್ಷಕರು ಗ್ರೇಡ್–2 ಹಾಗೂ ದೈಹಿಕ ಶಿಕ್ಷಣ ಶಿಕ್ಷಕರು ಗ್ರೇಡ್–1 ವೃಂದದ ಖಾಲಿ ಹುದ್ದೆಗಳನ್ನು ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯ ಮೂಲಕ ಭರ್ತಿ ಮಡಲು ಪ್ರಕಟಿಸಲಾದ ಹುದ್ದೆಗಳ ವಿವರ**

| ಕ್ರ. ಸಂ | ಜಿಲ್ಲೆಯ ಹೆಸರು | ಹೊಸ/ ಬ್ಯಾಕ್ ಲಾಗ | ಕಲಾ | | | ಭೌತ ವಿಜ್ಞಾನ | | | | ಜೀವ ವಿಜ್ಞಾನ | | | | | ಭಾಷೆಗಳು | | | | ದೈ.ಶಿ.ಶಿ | ಒಟ್ಟು |
|---|---|---|---|---|---|---|---|---|---|---|---|---|---|---|---|---|---|---|---|---|
| | | | ಕನ್ನಡ | ಮರಾಠಿ | ಉರ್ದು | ಕನ್ನಡ | ಮರಾಠಿ | ಉರ್ದು | ತೆಲುಗು | ಕನ್ನಡ | ಮರಾಠಿ | ಉರ್ದು | ತೆಲುಗು | ತಮಿಳು | ಕನ್ನಡ | ಇಂಗ್ಲೀಷ್ | ಹಿಂದಿ | ಮರಾಠಿ | | |
| **1** | **2** | **3** | **4** | **5** | **6** | **7** | **8** | **9** | **10** | **11** | **12** | **13** | **14** | **15** | **16** | **17** | **18** | **19** | **20** | **21** |
| 1. | ಬಳ್ಳಾರಿ | ಹೊಸ | 40 | 0 | 0 | 67 | 0 | 07 | 01 | 13 | 0 | 0 | 02 | 01 | 09 | 03 | 05 | 0 | 0 | 148 |
| | | ಬ್ಯಾಕ್ ಲಾಗ | 0 | 0 | 0 | 02 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 02 |
| | | **ಒಟ್ಟು** | **40** | **0** | **0** | **69** | **0** | **07** | **01** | **13** | **0** | **0** | **02** | **01** | **09** | **03** | **05** | **0** | **0** | **150** |
| 2. | ಬೀದರ | ಹೊಸ | 10 | 01 | 01 | 13 | 02 | 02 | 0 | 11 | 01 | 03 | 0 | 0 | 08 | 26 | 0 | 03 | 08 | 89 |
| | | ಬ್ಯಾಕ್ ಲಾಗ | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 |
| | | **ಒಟ್ಟು** | **10** | **01** | **01** | **13** | **02** | **02** | **0** | **11** | **01** | **03** | **0** | **0** | **08** | **26** | **0** | **03** | **08** | **89** |
| 3. | ಗುಲಬರ್ಗಾ | ಹೊಸ | 0 | 01 | 02 | 32 | 0 | 05 | 0 | 29 | 0 | 04 | 0 | 0 | 16 | 41 | 13 | 0 | 04 | 147 |
| | | ಬ್ಯಾಕ್ ಲಾಗ | 0 | 0 | 0 | 03 | 01 | 0 | 0 | 0 | 0 | 0 | 0 | 0 | 0 | 0 | 0 | 0 | 0 | 04 |
| | | **ಒಟ್ಟು** | **0** | **01** | **02** | **35** | **01** | **05** | **0** | **29** | **0** | **04** | **0** | **0** | **16** | **41** | **13** | **0** | **04** | **151** |
| 4. | ಕೊಪ್ಪಳ | ಹೊಸ | 29 | 0 | 0 | 28 | 0 | 01 | 0 | 14 | 0 | 01 | 0 | 0 | 04 | 08 | 06 | 0 | 07 | 98 |
| | | ಬ್ಯಾಕ್ ಲಾಗ | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 |
| | | **ಒಟ್ಟು** | **29** | **0** | **0** | **28** | **0** | **01** | **0** | **14** | **0** | **01** | **0** | **0** | **04** | **08** | **06** | **0** | **07** | **98** |
| **5.** | ರಾಯಚೂರು | ಹೊಸ | 17 | 0 | 0 | 75 | 0 | 04 | 0 | 17 | 0 | 0 | 0 | 0 | 11 | 13 | 11 | 0 | 08 | 156 |
| | | ಬ್ಯಾಕ್ ಲಾಗ | 0 | 0 | 0 | 03 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 03 |
| | | **ಒಟ್ಟು** | **17** | **0** | **0** | **78** | **0** | **04** | **0** | **17** | **0** | **0** | **0** | **0** | **11** | **13** | **11** | **0** | **08** | **159** |
| **6.** | ಯಾದಗೀರ | ಹೊಸ | 08 | 0 | 01 | 19 | 0 | 01 | 0 | 17 | 0 | 03 | 0 | 0 | 02 | 07 | 08 | 0 | 07 | 73 |
| | | ಬ್ಯಾಕ್ ಲಾಗ | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 |
| | | **ಒಟ್ಟು** | 08 | 0 | 01 | 19 | 0 | 01 | 0 | 17 | 0 | 03 | 0 | 0 | 02 | 07 | 08 | 0 | 07 | 73 |
| | **ಒಟ್ಟು** | ಹೊಸ | 104 | 02 | 04 | 234 | 02 | 20 | 01 | 101 | 01 | 11 | 02 | 01 | 50 | 98 | 43 | 03 | 34 | 711 |
| | | ಬ್ಯಾಕ್ ಲಾಗ | 0 | 0 | 0 | 08 | 01 | 0 | 0 | 0 | 0 | 0 | 0 | 0 | 0 | 0 | 0 | 0 | 0 | 09 |
| | | **ಒಟ್ಟು** | **104** | **02** | **04** | **242** | **03** | **20** | **01** | **101** | **01** | **11** | **02** | **01** | **50** | **98** | **43** | **03** | **34** | **720** |

**ಸಹಿ/–**

**ಆಯ್ಕೆ ಪ್ರಾಧಿಕಾರಿಗಳು/ಕಾರ್ಯದರ್ಶಿಗಳು**

ಹಾಗೂ ಪದನಿಮಿತ್ತ ಸಹನಿರ್ದೇಶಕರು ಸಾ.ಶಿ. ಇ. ಆಯುಕ್ತಾಲಯ, ಗುಲಬರ್ಗಾ

**ಅನುಬಂಧ –2**

**ಪ್ರಕಟಿತ ಹುದ್ದೆಗಳ ವರ್ಗೀಕರಣ**

| 2007–08ನೇ ಸಾಲಿನ ನೇಮಕಾತಿಯ ರೋಸ್ಟರೀನ ಅಂತಿಮ ಬಿಂದು | | | | 07 | 02 | 02 | 06 | 02 | 01 | 01 | 20 | 41 |
|---|---|---|---|---|---|---|---|---|---|---|---|---|
| ಜಿಲ್ಲೆ | ವಿಷಯ | ಪ್ರಕಟಿತ ಹುದ್ದೆ | | ಪ.ಜಾ | ಪ.ಪಂ | ಪ್ರ–1 | 2ಎ | 2ಬಿ | 3ಎ | 3ಬಿ | ಸಾ.ಅ | ಒಟ್ಟು |
| **ಬಳ್ಳಾರಿ** | **ಕಲಾ (ಕನ್ನಡ ಮಾಧ್ಯಮ)** | 40 | **ಇತರೆ** | 01 | – | 01 | 02 | – | – | – | 04 | **08** |
| | | | ಗ್ರಾಮೀಣ | 02 | 01 | 01 | 01 | 01 | 01 | 01 | 05 | **13** |
| | | | ಕ.ಮಾ.ಅ. | – | – | – | – | – | – | – | 01 | **01** |
| | | | ಯೋ.ಅ. | – | – | – | – | – | – | – | 01 | **01** |
| | | | ಮಾ.ಸ್ಯೆ. | 01 | – | – | 01 | – | – | – | 02 | **04** |
| | | | ಅಂ.ವಿ. | – | – | – | – | – | – | – | 01 | **01** |
| | | | ಮ.ಅ. | 02 | – | – | 02 | – | 01 | 01 | 06 | **12** |
| | | | **ಒಟ್ಟು** | 06 | 01 | 02 | 06 | 01 | 02 | 02 | 20 | **40** |

| 2007–08ನೇ ಸಾಲಿನ ನೇಮಕಾತಿಯ ರೋಸ್ಟರೀನ ಅಂತಿಮ ಬಿಂದು | | | | 60 | 12 | 16 | 59 | 16 | 15 | 19 | 196 | 393 |
|---|---|---|---|---|---|---|---|---|---|---|---|---|
| ಜಿಲ್ಲೆ | ವಿಷಯ | ಪ್ರಕಟಿತ ಹುದ್ದೆ | | ಪ.ಜಾ | ಪ.ಪಂ | ಪ್ರ–1 | 2ಎ | 2ಬಿ | 3ಎ | 3ಬಿ | ಸಾ.ಅ | ಒಟ್ಟು |
| **ಬಳ್ಳಾರಿ** | **ಭೌತ ವಿಜ್ಞಾನ (ಕನ್ನಡ ಮಾಧ್ಯಮ)** | 67 | **ಇತರೆ** | 02 | – | – | 02 | – | – | 01 | 06 | **11** |
| | | | ಗ್ರಾಮೀಣ | 03 | 01 | – | 03 | – | 01 | – | 08 | **16** |
| | | | ಕ.ಮಾ.ಅ. | – | 01 | – | – | – | – | – | 01 | **02** |
| | | | ಯೋ.ಅ. | – | – | 01 | – | 01 | 01 | – | 02 | **05** |
| | | | ಮಾ.ಸ್ಯೆ. | 01 | – | – | 01 | – | – | 01 | 04 | **07** |
| | | | ಅಂ.ವಿ. | 01 | – | 01 | 01 | – | – | – | 03 | **06** |
| | | | ಮ.ಅ. | 03 | – | 01 | 03 | 01 | 01 | 01 | 10 | **20** |
| | | | **ಒಟ್ಟು** | 10 | 02 | 03 | 10 | 02 | 03 | 03 | 34 | **67** |

ಈ ಹಿಂದೆ 2007–08ನೇ ಸಾಲಿನಲ್ಲಿ ಪ್ರಕಟಿಸಲಾದ ಪ್ರೌಢ ಶಾಲಾ ಶಿಕ್ಷಕರ ನೇಮಕಾತಿ ಅಧಿಸೂಚನೆಯಲ್ಲಿ ಪ್ರಕಟಿತ ಹುದ್ದೆಗಳ ಕೊನೆಯ ಕೋಷ್ಟಕ ಬಿಂದುವಿನಿಂದ ಮುಂದುವರಿಸಲಾಗಿದೆ.

ಸಹಿ/–

ನೇಮಕಾತಿ ಪ್ರಾಧಿಕಾರಿಗಳು/ಉಪನಿರ್ದೇಶಕರು

(ಆಡಳಿತ) ಸಾರ್ವಜನಿಕ ಶಿಕ್ಷಣ ಇಲಾಖೆ, ಬಳ್ಳಾರಿ ಜಿಲ್ಲೆ

**ಅನುಬಂಧ –2**

**ಪ್ರಕಟಿತ ಹುದ್ದೆಗಳ ವರ್ಗೀಕರಣ**

| 2007–08ನೇ ಸಾಲಿನ ನೇಮಕಾತಿಯ ರೋಸ್ಟರೀನ ಅಂತಿಮ ಬಿಂದು | | | | 02 | 01 | 01 | 01 | – | – | – | 04 | 09 |
|---|---|---|---|---|---|---|---|---|---|---|---|---|
| ಜಿಲ್ಲೆ | ವಿಷಯ | ಪ್ರಕಟಿತ ಹುದ್ದೆ | | ಪ.ಜಾ | ಪ.ಪಂ | ಪ್ರ–1 | 2ಎ | 2ಬಿ | 3ಎ | 3ಬಿ | ಸಾ.ಅ | ಒಟ್ಟು |
| **ಬಳ್ಳಾರಿ** | **ಭೌತ ವಿಜ್ಞಾನ (ಉರ್ದು ಮಾಧ್ಯಮ)** | 07 | **ಇತರೆ** | – | – | – | – | 01 | – | – | 01 | **02** |
| | | | ಗ್ರಾಮೀಣ | 01 | – | – | – | – | – | – | 01 | **02** |
| | | | ಕ.ಮಾ.ಅ. | – | – | – | – | – | – | – | – | – |
| | | | ಯೋ.ಅ. | – | – | – | – | – | – | – | – | – |
| | | | ಮಾ.ಸ್ಯೆ. | – | – | – | – | – | – | – | – | – |
| | | | ಅಂ.ವಿ. | – | – | – | – | – | – | – | – | – |
| | | | ಮ.ಅ. | – | – | – | 01 | – | – | – | 02 | **03** |
| | | | **ಒಟ್ಟು** | 01 | – | – | 01 | 01 | – | – | 04 | **07** |

| 2007–08ನೇ ಸಾಲಿನ ನೇಮಕಾತಿಯ ರೋಸ್ಟರೀನ ಅಂತಿಮ ಬಿಂದು | | | | 01 | 01 | – | – | – | – | – | 02 | 04 |
|---|---|---|---|---|---|---|---|---|---|---|---|---|
| ಜಿಲ್ಲೆ | ವಿಷಯ | ಹುದ್ದೆಗಳ ಸಂಖ್ಯೆ | | ಪ.ಜಾ | ಪ.ಪಂ | ಪ್ರ–1 | 2ಎ | 2ಬಿ | 3ಎ | 3ಬಿ | ಸಾ.ಅ | ಒಟ್ಟು |
| ಬಳ್ಳಾರಿ | ಭೌತ ವಿಜ್ಞಾನ (ತೆಲುಗು ಮಾಧ್ಯಮ) | 01 | **ಇತರೆ** | – | – | 01 | – | – | – | – | – | 01 |
| | | | ಗ್ರಾಮೀಣ | – | – | – | – | – | – | – | – | – |
| | | | ಕ.ಮಾ.ಅ. | – | – | – | – | – | – | – | – | – |
| | | | ಯೋ.ಅ. | – | – | – | – | – | – | – | – | – |
| | | | ಮಾ.ಸೈ. | – | – | – | – | – | – | – | – | – |
| | | | ಅಂ.ವಿ. | – | – | – | – | – | – | – | – | – |
| | | | ಮ.ಅ. | – | – | – | – | – | – | – | – | – |
| | | | **ಒಟ್ಟು** | – | – | 01 | – | – | – | – | – | 01 |

ಈ ಹಿಂದೆ 2007–08ನೇ ಸಾಲಿನಲ್ಲಿ ಪ್ರಕಟಿಸಲಾದ ಪ್ರೌಢ ಶಾಲಾ ಶಿಕ್ಷಕರ ನೇಮಕಾತಿ ಅಧಿಸೂಚನೆಯಲ್ಲಿ ಪ್ರಕಟಿತ ಹುದ್ದೆಗಳ ಕೊನೆಯ ಕೋಷ್ಟಕ ಬಿಂದುವಿನಿಂದ ಮುಂದುವರಿಸಲಾಗಿದೆ.

ಸಹಿ/–

ನೇಮಕಾತಿ ಪ್ರಾಧಿಕಾರಿಗಳು/ಉಪನಿರ್ದೇಶಕರು

(ಆಡಳಿತ) ಸಾರ್ವಜನಿಕ ಶಿಕ್ಷಣ ಇಲಾಖೆ, ಬಳ್ಳಾರಿ ಜಿಲ್ಲೆ

**ಅನುಬಂಧ –2**

**ಪ್ರಕಟಿತ ಹುದ್ದೆಗಳ ವರ್ಗೀಕರಣ**

| 2007–08ನೇ ಸಾಲಿನ ನೇಮಕಾತಿಯ ರೋಸ್ಟರೀನ ಅಂತಿಮ ಬಿಂದು | | | | 10 | 02 | 03 | 10 | 03 | 02 | 02 | 31 | 63 |
|---|---|---|---|---|---|---|---|---|---|---|---|---|
| ಜಿಲ್ಲೆ | ವಿಷಯ | ಹುದ್ದೆಗಳ ಸಂಖ್ಯೆ | | ಪ.ಜಾ | ಪ.ಪಂ | ಪ್ರ–1 | 2ಎ | 2ಬಿ | 3ಎ | 3ಬಿ | ಸಾ. ಅ | ಒಟ್ಟು |
| ಬಳ್ಳಾರಿ | ಜೀವ ವಿಜ್ಞಾನ (ಕನ್ನಡ ಮಾಧ್ಯಮ) | 13 | **ಇತರೆ** | 01 | – | – | 01 | – | – | – | – | 02 |
| | | | ಗ್ರಾಮೀಣ | – | 01 | – | – | – | 01 | 01 | 02 | 05 |
| | | | ಕ.ಮಾ.ಅ. | – | – | – | – | – | – | – | 01 | 01 |
| | | | ಯೋ.ಅ. | – | – | – | – | – | – | – | 01 | 01 |
| | | | ಮಾ.ಸೈ. | – | – | – | – | – | – | – | – | – |
| | | | ಅಂ.ವಿ. | – | – | – | – | – | – | – | – | – |
| | | | ಮ.ಅ. | 01 | – | – | – | – | – | – | 03 | 04 |
| | | | **ಒಟ್ಟು** | 02 | 01 | – | 01 | – | 01 | 01 | 07 | 13 |

| 2007–08ನೇ ಸಾಲಿನ ನೇಮಕಾತಿಯ ರೋಸ್ಟರೀನ ಅಂತಿಮ ಬಿಂದು | | | | – | – | – | – | – | – | – | – | – |
|---|---|---|---|---|---|---|---|---|---|---|---|---|
| ಜಿಲ್ಲೆ | ವಿಷಯ | ಹುದ್ದೆಗಳ ಸಂಖ್ಯೆ | | ಪ.ಜಾ | ಪ.ಪಂ | ಪ್ರ–1 | 2ಎ | 2ಬಿ | 3ಎ | 3ಬಿ | ಸಾ.ಅ | ಒಟ್ಟು |
| ಬಳ್ಳಾರಿ | ಜೀವ ವಿಜ್ಞಾನ (ತೆಲುಗು ಮಾಧ್ಯಮ) | 02 | **ಇತರೆ** | 01 | – | – | – | – | – | – | 01 | 02 |
| | | | ಗ್ರಾಮೀಣ | – | – | – | – | – | – | – | – | – |
| | | | ಕ.ಮಾ.ಅ. | – | – | – | – | – | – | – | – | – |
| | | | ಯೋ.ಅ. | – | – | – | – | – | – | – | – | – |
| | | | ಮಾ.ಸೈ. | – | – | – | – | – | – | – | – | – |
| | | | ಅಂ.ವಿ. | – | – | – | – | – | – | – | – | – |
| | | | ಮ.ಅ. | – | – | – | – | – | – | – | – | – |
| | | | **ಒಟ್ಟು** | 01 | – | – | – | – | – | – | 01 | 02 |

ಈ ಹಿಂದೆ 2007–08ನೇ ಸಾಲಿನಲ್ಲಿ ಪ್ರಕಟಿಸಲಾದ ಪ್ರೌಢ ಶಾಲಾ ಶಿಕ್ಷಕರ ನೇಮಕಾತಿ ಅಧಿಸೂಚನೆಯಲ್ಲಿ ಪ್ರಕಟಿತ ಹುದ್ದೆಗಳ ಕೊನೆಯ ಕೋಷ್ಟಕ ಬಿಂದುವಿನಿಂದ ಮುಂದುವರಿಸಲಾಗಿದೆ.

ಸಹಿ/–

ನೇಮಕಾತಿ ಪ್ರಾಧಿಕಾರಿಗಳು/ಉಪನಿರ್ದೇಶಕರು

(ಆಡಳಿತ) ಸಾರ್ವಜನಿಕ ಶಿಕ್ಷಣ ಇಲಾಖೆ, ಬಳ್ಳಾರಿ ಜಿಲ್ಲೆ

11) ಸರ್ಕಾರದ ಆದೇಶ ಸಂಖ್ಯೆ:ಸಿಅಸುಇ.26.ಸಹಿಮ.2002 ದಿನಾಂಕ: 11/04/2003.

12) ಈ ಕಛೇರಿಯ ಅಧಿಸೂಚನೆ ಸಂಖ್ಯೆ:ಎ.10. ವಿಶೇಷ ಶಿಕ್ಷಕರು.ನೇಮಕಾತಿ/01/2004-05. ದಿ:18/04/2005 ಮತ್ತು ದಿ:23/12/2006.

13) ಸರ್ಕಾರದ ಅಧಿಸೂಚನೆ ಸಂಖ್ಯೆ:ಡಿಪಿಎಆರ್.31.ಎಸ್ಆರ್ಇ.94. ದಿ:21/05/1998.

14) ಸರ್ಕಾರದ ಅಧಿಸೂಚನೆ ಸಂಖ್ಯೆ:ಡಿಪಿಎಆರ್.59.ಎಸ್ಆರ್ಇ.2002. ದಿ:24/06/2003.

15) ಸರ್ಕಾರದ ಅಧಿಸೂಚನೆ ಸಂಖ್ಯೆ:ಇಡಿ.82.ಎಸ್ಎಲ್ಬಿ.2003(ಪಾರ್ಟ್). ದಿ:17/06/2006.

16) ಆಯುಕ್ತರು, ಸಾ.ಶಿ.ಇ, ಬೆಂಗಳೂರು ರವರ ಪತ್ರ ಸಂಖ್ಯೆ:ಸಿ4 (5)/ಸಂ.ಶಿ.ನೇ/30/2008-09, ದಿ. 5.5.2009.

17) ಸರ್ಕಾರದ ಅಧಿಸೂಚನೆ ಸಂಖ್ಯೆ.ಡಿ.ಪಿ.ಎ.ಆರ್.50.ಎಸ್.ಆರ್.ಆರ್.2000 ದಿ.03-09-2008.

18) ಸರ್ಕಾರದ ಅಧಿಸೂಚನೆ ಸಂಖ್ಯೆ.ಡಿ.ಪಿ.ಎ.ಆರ್.52.ಎಸ್.ಆರ್.ಆರ್.99. ದಿ.29-11-2002

19) ಸರ್ಕಾರದ ಪತ್ರ ಸಂಖ್ಯೆ. ಇಡಿ 04 ಎಸ್ಟಿಬಿ 2009, ದಿ. 13-3-2009.

20) ಸರ್ಕಾರದ ಆದೇಶ ಸಂಖ್ಯೆ. ಇಡಿ 310 ಎಸ್ಎಲ್ಬಿ 91, ದಿ. 16.3.1992.

21) ಸರ್ಕಾರದ ಸುತ್ತೋಲೆ ಸಂಖ್ಯೆ: ಸಿಆಸುಇ 16 ಸೇನೆನಿ 2008, ದಿ. 1.9.2008.

ಸಾರ್ವಜನಿಕ ಶಿಕ್ಷಣ ಇಲಾಖೆ ಗುಲ್ಬರ್ಗಾ ವಿಭಾಗದ ಆರು ಶೈಕ್ಷಣಿಕ ಜಿಲ್ಲೆಗಳಲ್ಲಿರುವ ಸರ್ಕಾರಿ ಪ್ರೌಢ ಶಾಲೆ/ ಸಂಯುಕ್ತ ಪದವಿ ಪೂರ್ವ ಕಾಲೇಜು(ಪ್ರೌಢ ಶಾಲಾ ವಿಭಾಗ)ಗಳಲ್ಲಿರುವ **"ಪ್ರೌಢಶಾಲಾ ಸಂಗೀತ ಶಿಕ್ಷಕರು ಗ್ರೇಡ್-2" (ಹಾಡುಗಾರಿಕೆ ಮಾತ್ರ)** ಹುದ್ದೆಗಳಿಗೆ ಉಲ್ಲೇಖಿತದಲ್ಲಿ ನಮೂದಿಸಿರುವ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳು ಮತ್ತು ಕಾಲದಿಂದ ಕಾಲಕ್ಕೆ ಹೊರಡಿಸಲಾದ ಸರ್ಕಾರದ ಆದೇಶಗಳ ಪ್ರಕಾರ ಹಾಗೂ ಪ್ರಚಲಿತ ನಿಯಮಗಳನ್ನು ಅನುಸರಿಸಿ ನೇರ ನೇಮಕಾತಿಗಾಗಿ ಅರ್ಹ ಅಭ್ಯರ್ಥಿಗಳನ್ನು ಆಯ್ಕೆ ಮಾಡಲು, ಅಧಿಸೂಚನಾ ದಿನಾಂಕವಾದ 18/05/2009ರಂದು ಸಂಗೀತ ಶಿಕ್ಷಕರು ಗ್ರೇಡ್-2 ಹುದ್ದೆಗೆ ನಿಗಧಿಪಡಿಸಿರುವ ಎಲ್ಲಾ ವಿದ್ಯಾರ್ಹತೆಗಳನ್ನು ಹೊಂದಿರುವ ಮತ್ತು ನಿಗಧಿತ ವಯೋಮಿತಿಯೊಳಗಿರುವ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಿ ಈ ಅಧಿಸೂಚನೆಯನ್ನು ಹೊರಡಿಸಿದೆ.

**1. ನೇಮಕಾತಿಗಾಗಿ ಅಧಿಸೂಚಿಸಿರುವ ಹುದ್ದೆಗಳು:-**

ಪ್ರೌಢ ಶಾಲಾ ಸಂಗೀತ ಶಿಕ್ಷಕರು ಗ್ರೇಡ್-2 (ಹಾಡುಗಾರಿಕೆ ಮಾತ್ರ)

**2. ಆಯ್ಕೆಗೆ ಅರ್ಹತೆ:-**

ಅಭ್ಯರ್ಥಿಗಳು ನೇಮಕಾತಿ ಅಧಿಸೂಚನೆ ದಿನಾಂಕವಾದ 18/05/2009ರಂದು **"ಸಂಗೀತ ಶಿಕ್ಷಕರು ಗ್ರೇಡ್-2" (ಹಾಡುಗಾರಿಕೆ ಮಾತ್ರ)** ಹುದ್ದೆಗಳಿಗೆ ಆಯ್ಕೆ ಹೊಂದಲು **"ದಿ ಕರ್ನಾಟಕ ಎಜುಕೇಶನ್ ಡಿಪಾರ್ಟಮೆಂಟ್ ಸರ್ವಿಸಸ್ (ಡಿಪಾರ್ಟಮೆಂಟ್ ಆಫ ಪಬ್ಲಿಕ್ ಇನ್ಸಟ್ರಕ್ಷನ್) (ರಿಕ್ರೂಟಮೆಂಟ್) ರೂಲ್ಸ್ 1967, ಇದಕ್ಕೆ ದಿನಾಂಕ:21-05-1998, 24-06-2003 ಮತ್ತು 17-06-2006ರಂದು ತಿದ್ದುಪಡಿ ಮಾಡಿ ಹಾಲಿ ಜಾರಿಯಲ್ಲಿರುವ ನೇಮಕಾತಿ ನಿಯಮಗಳ ಪ್ರಕಾರ,** ನಿಗಧಿಪಡಿಸಿರುವ ಎಲ್ಲಾ ಶೈಕ್ಷಣಿಕ ವಿದ್ಯಾರ್ಹತೆಗಳನ್ನು ಹೊಂದಿದ್ದು, ನಿಗಧಿತ ವಯೋಮಿತಿಯೊಳಗಿರಬೇಕು. **ದಿನಾಂಕ: 18/05/2009ರ ನಂತರ ಈ ವಿದ್ಯಾರ್ಹತೆಗಳನ್ನು ಹೊಂದಿರುವ ಅಭ್ಯರ್ಥಿಗಳು ನೇಮಕಾತಿಗೆ ಪರಿಗಣಿಸಲು ಅರ್ಹತೆ ಪಡೆಯುವುದಿಲ್ಲ.**

**3. ಆಯ್ಕೆ ಮತ್ತು ನೇಮಕಾತಿ:**

ಅರ್ಹ ಅಭ್ಯರ್ಥಿಗಳನ್ನು ವಿಭಾಗ ಮಟ್ಟದಲ್ಲಿ ಆಯ್ಕೆ ಪ್ರಾಧಿಕಾರಿಯಾದ ವಿಭಾಗೀಯ ಕಾರ್ಯದರ್ಶಿಗಳು, **"ದಿ ಕರ್ನಾಟಕ ಎಜುಕೇಶನ್ ಡಿಪಾರ್ಟಮೆಂಟ್ ಸರ್ವಿಸಸ್ (ಡಿಪಾರ್ಟಮೆಂಟ್ ಆಫ ಪಬ್ಲಿಕ್ ಇನ್ಸಟ್ರಕ್ಷನ್) (ರಿಕ್ರೂಟಮೆಂಟ್) ರೂಲ್ಸ್ 1967, ಇದಕ್ಕೆ ದಿನಾಂಕ:21-05-1998, 24-06-2003 ಮತ್ತು 17-06-2006ರಂದು ತಿದ್ದುಪಡಿ ಮಾಡಿ ಹಾಲಿ ಜಾರಿಯಲ್ಲಿರುವ ನೇಮಕಾತಿ ನಿಯಮಗಳ ಪ್ರಕಾರ,** ಹಾಗೂ ಪ್ರಚಲಿತದಲ್ಲಿರುವ ಸರ್ಕಾರದ ಮೀಸಲಾತಿ ನಿಯಮಗಳನ್ನು ಅನುಸರಿಸಿ ಆಯ್ಕೆ ಮಾಡುತ್ತಾರೆ. ಆಯ್ಕೆಗೊಂಡ ಅಭ್ಯರ್ಥಿಗಳನ್ನು ಈ ಹುದ್ದೆಗಳ ನೇಮಕಾತಿ ಪ್ರಾಧಿಕಾರಿಯಾದ ಆಯಾ ಜಿಲ್ಲಾ ಉಪನಿರ್ದೇಶಕರು (ಆಡಳಿತ) ರವರು ನೇಮಕಾತಿಯನ್ನು ಜಿಲ್ಲಾ ಮಟ್ಟದಲ್ಲಿ ಮಾಡುತ್ತಾರೆ.

**4. ನಿಗದಿತ ಅರ್ಜಿ ನಮೂನೆ ಮತ್ತು ದೊರೆಯುವ ಸ್ಥಳ:**

ನಿಗದಿತ ಅರ್ಜಿ ನಮೂನೆಯನ್ನು ಆಯ್ಕೆಗಾಗಿ ಪ್ರಕಟಿಸಲಾಗಿರುವ **ಅರ್ಜಿ-ಸಹಿತ-ಮಾಹಿತಿ ಪುಸ್ತಕದಲ್ಲಿ** ಲಗತ್ತಿಸಲಾಗಿದೆ. **ಅರ್ಜಿ-ಸಹಿತ-ಮಾಹಿತಿ ಪುಸ್ತಕ ಗುಲ್ಬರ್ಗಾ** ವಿಭಾಗದ ವ್ಯಾಪ್ತಿಯಲ್ಲಿರುವ ಎಲ್ಲಾ ಜಿಲ್ಲೆಗಳ ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪ ನಿರ್ದೇಶಕರು (ಆಡಳಿತ) ಇವರ ಕಛೇರಿಯಲ್ಲಿ **ದಿನಾಂಕ:08-06-2009ರಿಂದ** ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕವಾದ **08-07-2009**ರವರೆಗೆ ಎಲ್ಲಾ ಕೆಲಸದ ದಿನಗಳಂದು ಬೆಳಿಗ್ಗೆ 10.00 ರಿಂದ ಸಂಜೆ 5.30 ರವರೆಗೆ ದೊರೆಯುತ್ತದೆ. ಈ ನಿಗಧಿತ **ಅರ್ಜಿ-ಸಹಿತ-ಮಾಹಿತಿ ಪುಸ್ತಕವನ್ನು** ಅರ್ಹ ಅಭ್ಯರ್ಥಿಗಳು ನಿಗದಿತ ಶುಲ್ಕವನ್ನು **"ವಿಶೇಷಾಧಿಕಾರಿ, ಕೇಂದ್ರೀಕೃತ ದಾಖಲಾತಿ ಘಟಕ, ಬೆಂಗಳೂರು"** ಇವರಿಗೆ **(Special officer, centrelised admission cell, Bangalore)** ಪಾವತಿಯಾಗುವ ರೀತಿ ಸ್ಟೇಟ್ ಬ್ಯಾಂಕ್ ಆಫ್ ಮೈಸೂರ್‌ನ ಯಾವುದೇ ಶಾಖೆಯಲ್ಲಿ ಖರೀದಿಸಿದ ಬ್ಯಾಂಕ್ ಹುಂಡಿ (Demand Draft) ಯನ್ನು ಸಲ್ಲಿಸಿ ಪಡೆಯಬಹುದಾಗಿದೆ.

**5. ಅರ್ಜಿ-ಸಹಿತ-ಮಾಹಿತಿ ಪುಸ್ತಕದ ಶುಲ್ಕ:**

1. ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ ಮತ್ತು ಪ್ರವರ್ಗ-1 ಕ್ಕೆ ಸೇರಿದ ಅಭ್ಯರ್ಥಿಗಳಿಗೆ ರೂ. 100/-
2. ಸಾಮಾನ್ಯ ಮತ್ತು ಇತರೆ ಪ್ರವರ್ಗಗಳ ಎಲ್ಲಾ ಅಭ್ಯರ್ಥಿಗಳಿಗೆ ರೂ. 200/-

**ಟಿಪ್ಪಣಿ:** ಅಂಗವಿಕಲ ಅಭ್ಯರ್ಥಿಗಳಿಗೆ ಸರ್ಕಾರದ ಪತ್ರ ಸಂಖ್ಯೆ: ಇಡಿ 04 ಎಸ್‌ಟಿಬಿ 2009, ದಿ. 13.3.2009ರ ಪ್ರಕಾರ ಅರ್ಜಿ-ಸಹಿತ-ಮಾಹಿತಿ ಪುಸ್ತಕದ ಶುಲ್ಕ ವಿನಾಯಿತಿ ನೀಡಲಾಗಿದ್ದು, ವಿನಾಯಿತಿ ಪಡೆಯುವ ಅಂಗವಿಕಲ ಅಭ್ಯರ್ಥಿಗಳು ಅರ್ಜಿ ಪಡೆಯುವ ಸಂಧರ್ಭದಲ್ಲಿ ನಿಗಧಿತ ನಮೂನೆಯಲ್ಲಿ ಅಂಗವಿಕಲ ಅಭ್ಯರ್ಥಿ ಎನ್ನುವ ಬಗ್ಗೆ ಪ್ರಮಾಣ ಪತ್ರವನ್ನು ಹಾಜರು ಪಡಿಸಬೇಕು

**ವಿಶೇಷ ಸೂಚನೆ:** ಈ ಹಿಂದೆ ದಿನಾಂಕ: 18-04-2005ರಂದು ಹೊರಡಿಸಲಾಗಿದ್ದ ನೇಮಕಾತಿ ಅಧಿಸೂಚನೆಯನ್ನು ರದ್ದುಗೊಳಿಸಿ, 2004-05ರ ವಿಶೇಷ ಶಿಕ್ಷಕರ ನೇಮಕಾತಿ ಪ್ರಕ್ರಿಯೆಯನ್ನು ಅಂತ್ಯಗೊಳಿಸಿ, ದಿನಾಂಕ: 23-12-2006ರಂದು ಅಧಿಸೂಚನೆಯನ್ನು ಹೊರಡಿಸಿದೆ. ಹಾಗೂ ಈ ಸೂಚನೆಯು ದಿ:30-12-2006ರಂದು ಕರ್ನಾಟಕ ರಾಜ್ಯ ಪತ್ರದ ವಿಶೇಷ ಪತ್ರಿಕೆಯಲ್ಲಿ ಪ್ರಕಟವಾಗಿದೆ. ಆದುದರಿಂದ ಮೇಲೆ ಉಲ್ಲೇಖಿಸಿದ 18-04-2005ರ ನೇಮಕಾತಿ ಅಧಿಸೂಚನೆ ಅನ್ವಯ ಆಯಾ ಜಿಲ್ಲಾ ಉಪನಿರ್ದೇಶಕರ ಕಛೇರಿಗೆ ಹಿಂದೆ ಅರ್ಜಿ ಸಲ್ಲಿಸಿರುವ ಅಭ್ಯರ್ಥಿಗಳು ಈಗ ಅರ್ಜಿ ಸಲ್ಲಿಸಬಯಸಿದಲ್ಲಿ, ಅರ್ಜಿ ಸಲ್ಲಿಸಿರುವ ಬಗ್ಗೆ ಯಾವುದೇ ದಾಖಲೆ ನೀಡಿದಲ್ಲಿ ಅಂತಹ ಅಭ್ಯರ್ಥಿಗಳಿಗೆ ಮಾತ್ರ **"**ಅರ್ಜಿ-ಸಹಿತ-ಮಾಹಿತಿ**"** ಪುಸ್ತಕದ ಈಗ ನಿಗಧಿಪಡಿಸಿರುವ ಶುಲ್ಕದ ವ್ಯತ್ಯಾಸವನ್ನು ಕಂಡಿಕೆ(4) ರಲ್ಲಿ ತಿಳಿಸಿರುವ ರೀತ್ಯಾ ಬ್ಯಾಂಕ್ ಹುಂಡಿ ಮೂಲಕ ಸಲ್ಲಿಸಿ ಈ ನೇಮಕಾತಿ ಅಧಿಸೂಚನೆಯ **"**ಅರ್ಜಿ-ಸಹಿತ-ಮಾಹಿತಿ**"** ಪುಸ್ತಕವನ್ನು ಪಡೆಯಬಹುದು.

**ಶುಲ್ಕ ವ್ಯತ್ಯಾಸ:** 1. ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡ ಮತ್ತು ಪ್ರವರ್ಗ-1 ಕ್ಕೆ ಸೇರಿದ ಅಭ್ಯರ್ಥಿಗಳಿಗೆ ರೂ. 25/-

2. ಸಾಮಾನ್ಯ ಅರ್ಹತೆ ಮತ್ತು ಇತರೆ ಪ್ರವರ್ಗಗಳ ಅಭ್ಯರ್ಥಿಗಳಿಗೆ ರೂ. 50/-

**6. ಅರ್ಜಿ ಸಲ್ಲಿಸುವ ವಿಧಾನ, ಕೊನೆಯ ದಿನಾಂಕ, ಸ್ಥಳ :**

1. **ಅರ್ಜಿ-ಸಹಿತ-ಮಾಹಿತಿ ಪುಸ್ತಿಕೆಯು** ಒಂದು ಮೂಲ ಅರ್ಜಿ ನಮೂನೆಯನ್ನು (O.M.R Sheet) ಒಳಗೊಂಡಿದೆ. ಮೂಲ ಅರ್ಜಿಯನ್ನು ಭರ್ತಿ ಮಾಡಿದ ನಂತರ, ಅದರ ಮೂರು ಯಥಾ ಪ್ರತಿಗಳನ್ನು (ಜೆರಾಕ್ಸ್) ಮಾಡಿಸಿಕೊಂಡು ನಿಗಧಿತ ಸ್ಥಳದಲ್ಲಿ ಪಾಸ್‌ಪೋರ್ಟ್ ಅಳತೆಯ ಭಾವಚಿತ್ರಗಳನ್ನು ಅಂಟಿಸಿ (ಈ ಭಾವ ಚಿತ್ರಗಳನ್ನು ನೇಮಕಾತಿ ಅಧಿಸೂಚನೆ ದಿನಾಂಕದ ನಂತರ ಒಂದೇ ದಿನ ತೆಗೆಸಿದ್ದಾಗಿರಬೇಕು ಮತ್ತು ಅವುಗಳನ್ನು ಜಿಲ್ಲಾ ಉಪನಿರ್ದೇಶಕರ ಕಛೇರಿಯ ನೋಡೆಲ್ ಅಧಿಕಾರಿಗಳಿಂದ ದೃಢೀಕರಿಸಿಕೊಳ್ಳುವುದು) ಅರ್ಜಿಯ ನಿಗಧಿತ ಸ್ಥಳದಲ್ಲಿ ಸಹಿಮಾಡಿ, ಎಡಗೈ ಹೆಬ್ಬೆರಳ ಗುರುತನ್ನು ಹಾಕುವುದು. **ಮೊದಲನೆಯ ಯಥಾ ಪ್ರತಿಯನ್ನು** (ಜೆರಾಕ್ಸ್) ಸಹನಿರ್ದೇಶಕರ ಪ್ರತಿಗಳನ್ನಾಗಿಯೂ, **ಎರಡನೇ ಯಥಾ ಪ್ರತಿಯನ್ನು**(ಜೆರಾಕ್ಸ್) ಉಪನಿರ್ದೇಶಕರ ಪ್ರತಿಯನ್ನಾಗಿ ಮತ್ತು **ಮೂರನೇ ಯಥಾ ಪ್ರತಿಯನ್ನು** (ಜೆರಾಕ್ಸ್) ಮಾತ್ರ ಅಭ್ಯರ್ಥಿಯ ಪ್ರತಿಯನ್ನಾಗಿ ಅಭ್ಯರ್ಥಿ ಉಳಿಸಿಕೊಂಡು ಅರ್ಜಿ ಸಲ್ಲಿಸಲು ನಿಗಧಿಪಡಿಸಿರುವ ದಿನಾಂಕ:08/07/2009ರ ಸಂಜೆ 5.30 ಗಂಟೆಯೊಳಗೆ ಅಥವಾ ಅದಕ್ಕೂ ಮುಂಚಿತವಾಗಿ ಅಭ್ಯರ್ಥಿಯು **ಅರ್ಜಿ-ಸಹಿತ-ಮಾಹಿತಿ ಪುಸ್ತಕೆಯನ್ನು** ಖರೀದಿಸಿದ ಈ ವಿಭಾಗದ ಜಿಲ್ಲೆಯ ಉಪನಿರ್ದೇಶಕರು (ಆಡಳಿತ) ಅವರ ಕಛೇರಿಗೆ ಖುದ್ದಾಗಿ **ಮೂಲ ಅರ್ಜಿ** (O.M.R Sheet) ಮತ್ತು ಮೊದಲನೇ ಯಥಾ ಪ್ರತಿ (ಸಹನಿರ್ದೇಶಕರ ಪ್ರತಿ) ಹಾಗೂ ಎರಡನೇ ಯಥಾ ಪ್ರತಿ (ಉಪನಿರ್ದೇಶಕರ ಪ್ರತಿ) ಯನ್ನು ಸಲ್ಲಿಸಿ ಸ್ವೀಕೃತಿಯನ್ನು ಖುದ್ದಾಗಿ ಪಡೆಯತಕ್ಕದ್ದು. ಉಳಿದ ಮೂರನೇ ಯಥಾ ಪ್ರತಿಯನ್ನು ಅಭ್ಯರ್ಥಿಯು ತನ್ನ ಪ್ರತಿಯನ್ನಾಗಿ ಉಳಿಸಿಕೊಳ್ಳುವುದು. ಅಂಚೆ ಮೂಲಕ ಸಲ್ಲಿಸಿದ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ. ನಿಗಧಿಪಡಿಸಿದ ಕೊನೆಯ ದಿನಾಂಕದ ನಂತರ ಯಾವುದೇ ಅರ್ಜಿಗಳನ್ನು ಯಾವುದೇ ಕಾರಣಕ್ಕೂ ಸ್ವೀಕರಿಸಲಾಗುವುದಿಲ್ಲ.

2. ಅಭ್ಯರ್ಥಿಯು ಅರ್ಜಿಯಲ್ಲಿ ನಮೂದಿಸಿರುವ ವಿವರಗಳಿಗೆ ಸಂಬಂಧಪಟ್ಟಂತೆ ವಿದ್ಯಾರ್ಹತೆಗಳ ಎಲ್ಲಾ ವರ್ಷಗಳ, ಎಲ್ಲಾ ಪ್ರಯತ್ನಗಳ ಅಂಕಪಟ್ಟಿಗಳು ಮತ್ತು ತೇರ್ಗಡೆಹೊಂದಿದ ಪ್ರಮಾಣ ಪತ್ರಗಳು ಹಾಗೂ ಅಭ್ಯರ್ಥಿಗೆ ಅನ್ವಯವಾಗುವ ಮೀಸಲಾತಿ ಪ್ರವರ್ಗ (ನೇರ ಮತ್ತು ಸಮತಲ ಮೀಸಲಾತಿ), ಗ್ರಾಮೀಣ ಪ್ರದೇಶದ, ಯೋಜನಾ ಪ್ರದೇಶ ನಿರಾಶ್ರಿತ ಅಭ್ಯರ್ಥಿ, ಕನ್ನಡ ಮಾಧ್ಯಮ, ಮಾಜಿ ಸೈನಿಕ, ಮಾಜಿ ಸೈನಿಕ ಅವಲಂಬಿತ, ಅಂಗವಿಕಲ ಅಭ್ಯರ್ಥಿ ಎನ್ನುವ ಬಗ್ಗೆ ಪ್ರಚಲಿತದಲ್ಲಿರುವ ಪ್ರಮಾಣ ಪತ್ರಗಳ ಸ್ವಯಂ ದೃಢೀಕರಿಸಿದ ಪ್ರತಿಗಳನ್ನು ಸಹನಿರ್ದೇಶಕರು ಹಾಗೂ ಉಪನಿರ್ದೇಶಕರ ಅರ್ಜಿ ಪ್ರತಿಯೊಂದಿಗೆ ತಪ್ಪದೇ ಲಗತ್ತಿಸುವುದು.

3. ಭರ್ತಿಮಾಡಿದ ಅರ್ಜಿಗಳನ್ನು ಸಲ್ಲಿಸಲು ಕೊನೆಯ ದಿನಾಂಕ: 08/07/2009 ಸಂಜೆ 05-30 ರೊಳಗೆ ಅಥವಾ ಮುಂಚಿತವಾಗಿ.

4. ಭರ್ತಿ ಮಾಡಿದ ಮೂಲ ಅರ್ಜಿ (O.M.R Sheet), ಸಹನಿರ್ದೇಶಕರ ಪ್ರತಿ ಮತ್ತು ಉಪನಿರ್ದೇಶಕರ ಪ್ರತಿಯನ್ನು ಅಭ್ಯರ್ಥಿಯು **ಅರ್ಜಿ-ಸಹಿತ-ಮಾಹಿತಿ ಪುಸ್ತಕವನ್ನು** ಗುಲ್ಬರ್ಗಾ ವಿಭಾಗದ ಯಾವ ಜಿಲ್ಲೆಯ ಉಪನಿರ್ದೇಶಕರ (ಆಡಳಿತ) ಕಛೇರಿಯಿಂದ ಖರೀಸಿದರೋ ಅದೇ ಕಛೇರಿಗೆ ಖುದ್ದಾಗಿ ಸಲ್ಲಿಸಿ ಸ್ವೀಕೃತಿ ಪಡೆಯುವುದು.

5. ಹಾಲಿ ರಾಜ್ಯ ಸರ್ಕಾರದ ಸೇವೆಯಲ್ಲಿರುವ ಖಾಯಂ ನೌಕರರು ತಮ್ಮ ಹುದ್ದೆಯ ನೇಮಕಾತಿ ಪ್ರಾಧಿಕಾರಿಯಿಂದ ಎನ್.ಓ.ಸಿ ಪಡೆದು, ಅವರ ಮೂಲಕವೇ ಕರ್ನಾಟಕ ಸಿವಿಲ್ ಸರ್ವಿಸಸ್ (ಜನರಲ್ ರಿಕ್ರೂಟ್‌ಮೆಂಟ್) ರೂಲ್ಸ್ 1977 ನಿಯಮ (11) ರೀತ್ಯಾ ಸಂಬಂಧಿಸಿದ ಉಪನಿರ್ದೇಶಕರ ಕಛೇರಿಗೆ ಅರ್ಜಿ ಸಲ್ಲಿಸಲು ಕೊನೆಯ ದಿನಾಂಕವಾದ **08/07/2009ರ** ಸಂಜೆ 05-30

ರೊಳಗೆ ಅಥವಾ ಅದಕ್ಕೂ ಮುಂಚಿತವಾಗಿ ತಲುಪುವಂತೆ ಸಲ್ಲಿಸುವುದು. ಕೊನೆಯ ದಿನಾಂಕದ ನಂತರ ಬರುವ ಅರ್ಜಿಗಳನ್ನು ಯಾವ ಕಾರಣಕ್ಕೂ ಸ್ವೀಕರಿಸಲಾಗುವುದಿಲ್ಲ.

6. ಅರ್ಜಿಯನ್ನು ಸ್ವೀಕರಿಸುವ ಕೊನೆಯ ದಿನಾಂಕವು ಸರ್ಕಾರದ ರಜಾ ದಿನವಾಗಿದ್ದಲ್ಲಿ, ನಂತರದ ಕಛೇರಿಯ ಕೆಲಸದ ದಿನವು ಅರ್ಜಿ ಸ್ವೀಕರಿಸಲು ಕೊನೆಯ ದಿನಾಂಕವಾಗಿರುತ್ತದೆ.

ಅರ್ಜಿಯನ್ನು ಒಳಗೊಂಡ ಲಕೋಟೆಯ ಮೇಲೆ **"ಗುಲ್ಬರ್ಗಾ ವಿಭಾಗದಲ್ಲಿ 2009-10ನೇ ಸಾಲಿನ "ಪ್ರೌಢ ಶಾಲಾ ಸಂಗೀತ ಶಿಕ್ಷಕರು ಗ್ರೇಡ್-2" (ಹಾಡುಗಾರಿಕೆ ಮಾತ್ರ) ಹುದ್ದೆಗಾಗಿ ಅರ್ಜಿ"** ಎಂದು ದಪ್ಪ ಅಕ್ಷರಗಳಲ್ಲಿ ಬರೆದು ಲಕೋಟೆ ಹಿಂಬದಿಯಲ್ಲಿ ಅರ್ಜಿದಾರರ ಪೂರ್ಣ ವಿಳಾಸವನ್ನು ನಮೂದಿಸಬೇಕು.

7. **ಅರ್ಜಿ ಜೊತೆ ಲಗತ್ತಿಸಬೇಕಾದ ಲಗತ್ತುಗಳು:-**

1. ಎಸ್.ಎಸ್.ಎಲ್.ಸಿ ದೃಢೀಕೃತ ಅಂಕಪಟ್ಟಿ (ಒಂದಕ್ಕಿಂತ ಹೆಚ್ಚಿನ ಪ್ರಯತ್ನಗಳಲ್ಲಿ ಉತ್ತೀರ್ಣರಾದವರು ಕ್ರೋಢೀಕೃತ ಅಂಕಪಟ್ಟಿ ಸಲ್ಲಿಸುವುದು)
2. ಮೀಸಲಾತಿ ಕೋರಿರುವ ಪ್ರವರ್ಗದ ದೃಢೀಕರಿಸಿದ ಪ್ರಮಾಣ ಪತ್ರದ ಪ್ರತಿ.
3. ಮಾಜಿ ಸೈನಿಕನಾಗಿ ಕಾರ್ಯನಿರ್ವಹಿಸಿರುವ / ಕುಟುಂಬದ ಸದಸ್ಯ [ಕೆ.ಸಿ.ಎಸ್ (ಜನರಲ್ ರಿಕ್ರೂಟ್‌ಮೆಂಟ್) ರೂಲ್ಸ್ 1977ರಲ್ಲಿ ನಿರ್ಧಿಷ್ಠಪಡಿಸಿರುವಂತಹ)] ಅಭ್ಯರ್ಥಿ ಎನ್ನುವ ಬಗ್ಗೆ ಮಾತ್ರ ಪ್ರಮಾಣ ಪತ್ರದ ಪ್ರತಿ (ಮಾದರಿ ಅರ್ಜಿ-ಸಹಿತ-ಮಾಹಿತಿ-ಪುಸ್ತಕದಲ್ಲಿ ನೀಡಿದೆ.).
4. ಗ್ರಾಮೀಣ ಪ್ರದೇಶದ ಶಾಲೆಗಳಲ್ಲಿ 01 ರಿಂದ 10 ನೇ ತರಗತಿಯವರೆಗೆ ವ್ಯಾಸಂಗ ಮಾಡಿರುವ ಬಗ್ಗೆ ದೃಢೀಕೃತ ಪ್ರಮಾಣ ಪತ್ರದ ಪ್ರತಿ. (ವ್ಯಾಸಂಗ ಮತ್ತು ಸಿಂಧುತ್ವ ಪ್ರಮಾಣ ಪತ್ರದ ಮಾದರಿಯನ್ನು ಅರ್ಜಿ-ಸಹಿತ-ಮಾಹಿತಿ- ಪುಸ್ತಕದಲ್ಲಿ ನೀಡಿದೆ).
5. ಅಂಗವಿಕಲ ಅಭ್ಯರ್ಥಿ ಎಂಬ ಬಗ್ಗೆ ಪ್ರಮಾಣ ಪತ್ರದ ದೃಢೀಕರಿಸಿದ ಪ್ರತಿ (ಮಾದರಿ ಪ್ರತಿಯನ್ನು ಅರ್ಜಿ-ಸಹಿತ-ಮಾಹಿತಿ-ಪುಸ್ತಕದಲ್ಲಿ ನೀಡಿದೆ).
6. ಕನ್ನಡ ಮಾಧ್ಯಮದಲ್ಲಿ 01 ರಿಂದ 10ನೇ ತರಗತಿಯವರೆಗೆ ವ್ಯಾಸಂಗ ಮಾಡಿರುವ ಬಗ್ಗೆ ಪ್ರಮಾಣ ಪತ್ರದ ದೃಢೀಕೃತ ಪ್ರತಿ (ಮಾದರಿ ಪ್ರತಿಯನ್ನು ಅರ್ಜಿ-ಸಹಿತ-ಮಾಹಿತಿ-ಪುಸ್ತಕದಲ್ಲಿ ನೀಡಿದೆ).
7. ಯೋಜನೆಗಳಿಂದ ನಿರಾಶ್ರಿತರಾದ ಅಭ್ಯರ್ಥಿ ಅಥವಾ ನಿರಾಶ್ರಿತ ಕುಟುಂಬದ ಸದಸ್ಯ ಎಂಬ ಬಗ್ಗೆ ಪಡೆದಿರುವ ಪ್ರಮಾಣ ಪತ್ರದ ದೃಢೀಕರಿಸಿದ ಪ್ರತಿ. (ಸರ್ಕಾರದ ಅಧಿಸೂಚನೆ ಸಂಖ್ಯೆ:ಡಿಪಿಎಆರ್ /23/ಎಸ್‌ಆರ್‌ಆರ್/99. ದಿ:23/11/2000 ಮತ್ತು ಸುತ್ತೋಲೆ ಸಂಖ್ಯೆ:ಸಿಆಸುಇ. 44/ಸೇನೇನಿ/2001 ದಿ:27/07/2001ರ ಪ್ರಕಾರ) ಮಾದರಿ ಪ್ರತಿಯನ್ನು ಅರ್ಜಿ-ಸಹಿತ-ಮಾಹಿತಿ-ಪುಸ್ತಕದಲ್ಲಿ ನೀಡಿದೆ).
8. ಗೌರವ ಶಿಕ್ಷಕರಾಗಿ ಸೇವೆ ಸಲ್ಲಿಸಿದ ಬಗ್ಗೆ ಪಡೆದಿರುವ ಪ್ರಮಾಣ ಪತ್ರದ ದೃಢೀಕೃತ ಪ್ರತಿ. (ಮಾದರಿ ಪ್ರತಿಯನ್ನು ಅರ್ಜಿ-ಸಹಿತ-ಮಾಹಿತಿ-ಪುಸ್ತಕ ದಲ್ಲಿ ನೀಡಿದೆ).
9. ಅರೆಕಾಲಿಕ ಶಿಕ್ಷಕರಾಗಿ ಸೇವೆ ಸಲ್ಲಿಸಿದ ಬಗ್ಗೆ ಪಡೆದಿರುವ ಪ್ರಮಾಣ ಪತ್ರದ ದೃಢೀಕರಿಸಿದ ಪ್ರತಿ. (ಮಾದರಿ ಪ್ರತಿಯನ್ನು ಅರ್ಜಿ-ಸಹಿತ-ಮಾಹಿತಿ-ಪುಸ್ತಕ ದಲ್ಲಿ ನೀಡಿದೆ).
10. ಭಾರತೀಯ ಜನಗಣತಿ ಸಂಸ್ಥೆಯಲ್ಲಿ ಗುತ್ತಿಗೆ ಆಧಾರದ ಮೇಲೆ ನೇಮಕಾತಿ ಹೊಂದಿ, ಒಂದು ವರ್ಷಕ್ಕಿಂತ ಕಡಿಮೆ ಇಲ್ಲದಂತೆ ಸೇವೆ ಸಲ್ಲಿಸಿರುವ ಬಗ್ಗೆ ಸಕ್ಷಮ ಪ್ರಾಧಿಕಾರದಿಂದ ಪಡೆದಿರುವ ಪ್ರಮಾಣ ಪತ್ರದ ದೃಢೀಕರಿಸಿದ ಪ್ರತಿ.
11. ಎಸ್.ಎಸ್.ಎಲ್.ಸಿ ಮತ್ತು ಅಭ್ಯರ್ಥಿ ಅರ್ಜಿ ಸಲ್ಲಿಸಿರುವ ಹುದ್ದೆಗೆ ನಿಗಧಿಪಡಿಸಿರುವ ವಿದ್ಯಾರ್ಹತೆ ಪರೀಕ್ಷೆಯ ಎಲ್ಲಾ ವರ್ಷಗಳ ಮತ್ತು ಎಲ್ಲಾ ಪ್ರಯತ್ನಗಳ ಅಂಕಪಟ್ಟಿಗಳು ಮತ್ತು ತೇರ್ಗಡೆ ಹೊಂದಿರುವ ಬಗ್ಗೆ ಪಡೆದುಕೊಂಡಿರುವ ಪ್ರಮಾಣ ಪತ್ರದ ದೃಢೀಕರಿಸಿದ ಪ್ರತಿ.
12. ಅರ್ಜಿಯಲ್ಲಿ ಕೋರಿರುವ ಮಾಹಿತಿಗಳಿಗೆ ಸಂಬಂಧಿಸಿದಂತೆ ಅವಶ್ಯವೆಂದು ಕಂಡು ಬರುವ ದಾಖಲೆಗಳ ದೃಢೀಕರಿಸಿದ ಪ್ರತಿಗಳು.

**ವಿಶೇಷ ಸೂಚನೆ:-** ಅಭ್ಯರ್ಥಿಗೆ ಅನ್ವಯಿಸುವ ಮೇಲ್ಕಂಡ ಎಲ್ಲಾ ದಾಖಲೆಗಳ ದೃಢೀಕರಿಸಿದ ಪ್ರತಿಗಳನ್ನು ಅಭ್ಯರ್ಥಿಯು ಉಪನಿರ್ದೇಶಕರ ಕಛೇರಿಯಲ್ಲಿ ತನ್ನ ಅರ್ಜಿಯನ್ನು ಸಲ್ಲಿಸುವಾಗಲೇ ಲಗತ್ತಿಸಿ ಸಲ್ಲಿಸುವುದು. ನಂತರ ಯಾವುದೇ ಹೊಸ ದಾಖಲೆಗಳ ಪ್ರತಿಗಳನ್ನಾಗಲೀ ಅಥವಾ ಅರ್ಜಿ ಸಲ್ಲಿಸುವಾಗ ಕೈಬಿಟ್ಟುಹೋದ ದಾಖಲೆಯನ್ನಾಗಿ ಸಲ್ಲಿಸಲು ಅವಕಾಶವಿಲ್ಲ ಮತ್ತು ಯಾವುದೇ ಹಂತದಲ್ಲಿ ಸ್ವೀಕರಿಸಲಾಗುವುದಿಲ್ಲ.

8. **ವಿದ್ಯಾರ್ಹತೆಗಳು ಹಾಗೂ ವೇತನ ಶ್ರೇಣಿಗಳು:-**

**"ದಿ ಕರ್ನಾಟಕ ಎಜುಕೇಶನ್ ಡಿಪಾರ್ಟಮೆಂಟ್ ಸರ್ವಿಸಸ್ (ಡಿಪಾರ್ಟಮೆಂಟ್ ಆಫ ಪಬ್ಲಿಕ್ ಇನ್ಸಟ್ರಕ್ಷನ್) (ರಿಕ್ರೂಟ್‌ಮೆಂಟ್) ರೂಲ್ಸ್ 1967, ಇದಕ್ಕೆ ದಿನಾಂಕ:21-05-1998, 24-06-2003 ಮತ್ತು 17/06/2006ರಂದು ತಿದ್ದುಪಡಿ ಮಾಡಿ ಹಾಲಿ ಜಾರಿಯಲ್ಲಿರುವ**

**ನೇಮಕಾತಿ ನಿಯಮಗಳ ಪ್ರಕಾರ,** ಹಾಗೂ ಪ್ರಚಲಿತದಲ್ಲಿರುವ ಇಲಾಖಾ ಆದೇಶಗಳನ್ವಯ ನಿಗಧಿಪಡಿಸಿರುವಂತೆ, ಅಧಿಸೂಚನೆಯ ದಿನಾಂಕವಾದ 18/05/2009 ರಂದು ಈ ಹುದ್ದೆಗೆ ಹೊಂದಿರಬೇಕಾದ ವಿದ್ಯಾರ್ಹತೆ ವಿವರಗಳು ಈ ರೀತಿ ಇದೆ.

**ಪ್ರೌಢ ಶಾಲಾ ಸಂಗೀತ ಶಿಕ್ಷಕರು ಗ್ರೇಡ್–2 (ಹಾಡುಗಾರಿಕೆ)**

(1) ಸರ್ಕಾರದಿಂದ ನಡೆಸಲ್ಪಟ್ಟಿರುವ ಎಸ್.ಎಸ್.ಎಲ್.ಸಿ ಪರೀಕ್ಷೆ ಅಥವಾ ಈ ಪರೀಕ್ಷೆಗೆ ತತ್ಸಮಾನ ಪರೀಕ್ಷೆ ಎಂದು ಸರ್ಕಾರವು ಮಾನ್ಯತೆ ನೀಡಿರುವ ಪರೀಕ್ಷೆಯನ್ನು ಪಾಸು ಮಾಡಿರಬೇಕು.

**ಮತ್ತು**

(2) ಸರ್ಕಾರದಿಂದ ನಡೆಸಲ್ಪಡುವ ಸಂಗೀತ ವಿಷಯದಲ್ಲಿ ಪ್ರೋಫೆಸಿಯನ್ಸಿ/ಪ್ರವೀಣ/ವಿದ್ವತ್/ವಿದ್ವಾನ್ ಪರೀಕ್ಷೆ ಅಥವಾ ಈ ಪರೀಕ್ಷೆಗಳಿಗೆ ತತ್ಸಮಾನ ಪರೀಕ್ಷೆ ಎಂದು ಸರ್ಕಾರವು ಮಾನ್ಯತೆ ನೀಡಿರುವ ಪರೀಕ್ಷೆಯನ್ನು ಪಾಸು ಮಾಡಿರಬೇಕು.

**(3) ತತ್ಸಮಾನ ಪರೀಕ್ಷೆಗಳು :** ಸರ್ಕಾರದ ಆದೇಶ ಸಂಖ್ಯೆ: ಇಡಿ/310/ಎಸ್‌ಎಲ್‌ಬಿ/91, ದಿ. 16.3.1992 ರ ಪ್ರಕಾರ;

**(ಅ)** ತಮಿಳನಾಡು ಸರ್ಕಾರದ ಸಂಗೀತ ವಿದ್ವಾನ್ 3 ವರ್ಷದ ಪರೀಕ್ಷೆಗಳು (ಇರೈತಲೈಮಣಿ) (ಹಾಡುಗಾರಿಕೆ ಮಾತ್ರ)

**(ಆ)** ಸೆಂಟ್ರಲ್ ಕಾಲೇಜ್ ಆಫ್ ಕರ್ನಾಟಕ ಮ್ಯೂಸಿಕ್, ಮದ್ರಾಸ್ ಇವರು ನೀಡುವ 2 ವರ್ಷಗಳ ಸಂಗೀತ ವಿದ್ವಾನ್ ಕೋರ್ಸ್.

**(ಇ)** ವಿಶ್ವ ವಿದ್ಯಾಲಯದ ಧನಸಹಯೋಗ ಆಯೋಗದಿಂದ ಮನ್ನಣೆ ಪಡೆದಿರುವ ಒಂದು ಅಧಿಕೃತ ವಿಶ್ವವಿದ್ಯಾನಿಲಯದಿಂದ (ಬೆಂಗಳೂರು ವಿಶ್ವವಿದ್ಯಾಲಯವು ಸೇರಿದಂತೆ) ಸಂಗೀತ (ಹಾಡುಗಾರಿಕೆ) ದಲ್ಲಿ ಸ್ನಾತಕೋತ್ತರ ಪದವಿ. (ಮಾಸ್ಟರ್ ಡಿಗ್ರಿ ಇನ್ ಮ್ಯೂಸಿಕ್ (ಹಾಡುಗಾರಿಕೆ).

**ಟಿಪ್ಪಣಿ: ನೇರ ನೇಮಕಾತಿಯಲ್ಲಿ ಎಲ್ಲ ಅಂಶಗಳು ಸರಿ ಸಮಾನವಿದ್ದಲ್ಲಿ ಅಂಥ ಅಭ್ಯರ್ಥಿಗಳಿಗೆ ಮೊದಲ ಆದ್ಯತೆ ನೀಡಲಾಗುವುದು.**

**ವೇತನ ಶ್ರೇಣಿ: ರೂ. 7275–175–7800–200–8600–225–9500–250–10500–300–12300–350–13350**

**9. ವಯೋಮಿತಿ:–**

ಅಭ್ಯರ್ಥಿಗಳು ನೇಮಕಾತಿ ಅಧಿಸೂಚನೆ ದಿನಾಂಕವಾದ 18/05/2009 ರಂದು ಮುಂದೆ ತಿಳಿಸಿರುವ ಕನಿಷ್ಠ ಮತ್ತು ಗರಿಷ್ಠ ವಯೋಮಿತಿ ಹೊಂದಿರಬೇಕು.

**ಕನಿಷ್ಠ :** 20 ವರ್ಷಗಳು ತುಂಬಿರಬೇಕು.

**ಗರಿಷ್ಠ :**

| ಸಾಮಾನ್ಯ ವರ್ಗ | 40 ವರ್ಷಗಳನ್ನು ಮೀರಿರಬಾರದು |
|---|---|
| 2ಎ, 2ಬಿ, 3ಎ, 3ಬಿ | 43 ವರ್ಷಗಳನ್ನು ಮೀರಿರಬಾರದು |
| ಪ.ಜಾ/ಪ.ಪಂ/ಪ್ರವರ್ಗ–1 | 45 ವರ್ಷಗಳನ್ನು ಮೀರಿರಬಾರದು |

**10. ಆಯ್ಕೆ ವಿಧಾನ ಮತ್ತು ಅರ್ಹತೆ ನಿರ್ಧರಿಸುವುದು :–**

**ಅ) ಆಯ್ಕೆ ವಿಧಾನ:–**

ಅಭ್ಯರ್ಥಿಗಳನ್ನು **"ದಿ ಕರ್ನಾಟಕ ಎಜುಕೇಶನ್ ಡಿಪಾರ್ಟಮೆಂಟ್ ಸರ್ವಿಸಸ್ (ಡಿಪಾರ್ಟಮೆಂಟ್ ಆಫ ಪಬ್ಲಿಕ್ ಇನ್ಸ್ಟ್ರಕ್ಷನ್) (ರಿಕ್ರೂಟಮೆಂಟ್) ರೂಲ್ಸ್ 1967, ಇದಕ್ಕೆ ದಿನಾಂಕ:21–05–1998, 24–06–2003 ಮತ್ತು 17–06–2006 ರಂದು ತಿದ್ದುಪಡಿ ಮಾಡಿ ಹಾಲಿ ಜಾರಿಯಲ್ಲಿರುವ ನೇಮಕಾತಿ ನಿಯಮಗಳ ಪ್ರಕಾರ,** ಈ ಹುದ್ದೆಗೆ ನಿಗಧಿ ಪಡಿಸಿರುವ ವಿದ್ಯಾರ್ಹತೆಗಳ ಎಲ್ಲಾ ಪಬ್ಲಿಕ್ ಪರೀಕ್ಷೆಗಳಲ್ಲಿ ಗಳಿಸಿದ ಅಂಕಗಳ ಸರಾಸರಿ ತೆಗೆದು ಮೆರಿಟ್ ಮತ್ತು ಸರ್ಕಾರದ ಪ್ರಚಲಿತ ಮೀಸಲಾತಿ ನಿಯಮಗಳನ್ವಯ (ನೇರ ಮತ್ತು ಸಮತಲ ಮೀಸಲಾತಿ) ಆಯ್ಕೆ ಮಾಡಲಾಗುವುದು.

**ಆ) ಅರ್ಹತೆ ನಿರ್ಧರಿಸುವುದು :–**

1. ಎಸ್.ಎಸ್.ಎಲ್.ಸಿ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಗಳಿಸಿದ ಒಟ್ಟು ಅಂಕಗಳ ಸರಾಸರಿ ಶೇಕಡಾ 50. ಮತ್ತು
2. ಈ ಹುದ್ದೆಗೆ ನಿಗಧಿಪಡಿಸಿರುವ ವೃತ್ತಿ (ಪ್ರೋಫೆಷನಲ್) ವಿದ್ಯಾರ್ಹತೆಯ ಪಬ್ಲಿಕ್ ಪರೀಕ್ಷೆಗಳಲ್ಲಿ ಗಳಿಸಿರುವ ಒಟ್ಟು ಅಂಕಗಳ ಶೇ.50.
3. ಮೇಲಿನ ಎರಡು ಪರೀಕ್ಷೆಗಳಲ್ಲಿ ಗಳಿಸಿದ ಶೇಕಡಾ ಅಂಕಗಳ ಸರಾಸರಿ ಅಂಕಗಳನ್ನು ಅರ್ಹತಾ ಅಂಕಗಳೆಂದು ಪರಿಗಣಿಸಲಾಗುವುದು.
4. ಈ ಮೇಲಿನ ಒಟ್ಟು ಶೇಕಡಾ ಅಂಕಗಳಿಂದ ತಯಾರಿಸಲಾದ ಮೆರಿಟ್ ಲಿಸ್ಟ್‌ಗೆ ಅಭ್ಯರ್ಥಿಯು ಸರ್ಕಾರಿ ಪ್ರೌಢ ಶಾಲೆಗಳಲ್ಲಿ ಅಥವಾ ಸಂಯುಕ್ತ ಸರ್ಕಾರಿ ಪದವಿ ಪೂರ್ವ ಕಾಲೇಜುಗಳ (ಪ್ರೌಢ ಶಾಲಾ ವಿಭಾಗದಲ್ಲಿ) 'ಅರೆಕಾಲಿಕಾ' ಅಥವಾ 'ಗೌರವ ಶಿಕ್ಷಕರಾಗಿ' (ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರು/ ಸಹನಿರ್ದೇಶಕರಿಂದ ನೇಮಕಾತಿ ಹೊಂದಿರಬೇಕು) ಅಥವಾ ಭಾರತೀಯ ಜನಗಣತಿ ಸಂಸ್ಥೆಯಲ್ಲಿ ಗುತ್ತಿಗೆ ಅಧಾರದ ಮೇಲೆ ನೇಮಕಾತಿ ಹೊಂದಿ ಸೇವೆ ಸಲ್ಲಿಸುತ್ತಿರುವ /

ಸೇವೆ ಸಲ್ಲಿಸಿದ್ದಲ್ಲಿ, ಹಾಗೇ ಸೇವೆ ಸಲ್ಲಿಸಿದ ಪ್ರತಿ ಪೂರ್ಣಗೊಂಡ ಒಂದು ವರ್ಷದ ಸೇವೆಗೆ, ಶೇಕಡಾ 2% ರಷ್ಟು ಕೃಪಾಂಕಗಳನ್ನು ನೇಮಕಾತಿ ನಿಯಮಗಳ ಪ್ರಕಾರ ಎಲ್ಲಾ ವಿದ್ಯಾರ್ಹತೆಗಳನ್ನು ಹೊಂದಿದ್ದಲ್ಲಿ ಅಂತಹ ಅಭ್ಯರ್ಥಿಗಳ ಸರಾಸರಿ ಶೇಕಡಾ ಅಂಕಗಳಿಗೆ ಸೇರಿಸಲಾಗುವುದು.

**11. ಮೀಸಲಾತಿ ಅವಕಾಶಗಳು:–**

ಸರ್ಕಾರದ ಆದೇಶ ಸಂಖ್ಯೆ:ಸಿಅಸುಇ/08/ಸಹಿಮ/95 ದಿ:20/06/1995 ಮತ್ತು ಸಿಅಸುಇ/53/ಸೇನೇನಿ/2007. ದಿ:04/01/2008 ರ ಮೀಸಲಾತಿ (ನೇರ ಮತ್ತು ಸಮತಲ) ನಿಯಮಗಳ ಪ್ರಕಾರ ಹುದ್ದೆಗಳನ್ನು ವರ್ಗೀಕರಿಸಿ ಭರ್ತಿಸಲಾಗುವುದು.

ಸರ್ಕಾರದ ಆದೇಶ ಸಂಖ್ಯೆ:ಸಿಅಸುಇ/08/ಸಹಿಮ/95 ದಿನಾಂಕ 20–06–1995 ರನ್ವಯ ಜಾರಿಯಲ್ಲಿರುವ ಮೀಸಲಾತಿ ನಿಯಮಗಳ ಪ್ರಕಾರ ಲಭ್ಯವಿರುವ ರಿಕ್ತ ಸ್ಥಾನಗಳನ್ನು ಈ ಕೆಳಕಂಡ ಪ್ರಮಾಣದಲ್ಲಿ ನಿಯಮಾನುಸಾರ ಮೀಸಲಿರಿಸಲಾಗಿದೆ.

| 1 | ಸಾಮಾನ್ಯ ಅರ್ಹತೆ | ಶೇ 50 |
|---|---|---|
| 2 | ಪರಿಶಿಷ್ಠ ಜಾತಿ | ಶೇ 15 |
| 3 | ಪರಿಶಿಷ್ಠ ಪಂಗಡ | ಶೇ 03 |
| 4 | ಪ್ರವರ್ಗ–1 | ಶೇ 04 |
| 5 | ಪ್ರವರ್ಗ–2ಎ | ಶೇ 15 |
| 6 | ಪ್ರವರ್ಗ–2ಬಿ | ಶೇ 04 |
| 7 | ಪ್ರವರ್ಗ–3ಎ | ಶೇ 04 |
| 8 | ಪ್ರವರ್ಗ–3ಬಿ | ಶೇ 05 |
|  | **ಒಟ್ಟು** | **ಶೇ 100** |

ಮೇಲೆ ವಿವರಿಸಿದ ಸಾಮಾನ್ಯ ಅರ್ಹತೆ ಸೇರಿದಂತೆ ಪ್ರತಿ ಮೀಸಲಾತಿ ಪ್ರವರ್ಗಗಳಿಗೆ ಈ ಕೆಳಕಂಡ ಆದೇಶಗಳ ಪ್ರಕಾರ **"ಸಮತಲ ಮೀಸಲಾತಿ"** ಅನ್ವಯ (Horizontal reservation) ಹುದ್ದೆಗಳನ್ನು ವರ್ಗೀಕರಿಸಲಾಗಿದೆ.

| | | | |
|---|---|---|---|
| 1. | ಮಾಜಿ ಸೈನಿಕರಿಗೆ | ಶೇ 10 | ಕರ್ನಾಟಕ ಸಿವಿಲ್ ಸರ್ವಿಸಸ್ (ಜನರಲ್ ರೆಕ್ರೂಟಮೆಂಟ್)ರೂಲ್ಸ್ 1977 ರ ನಿಯಮ 9(1)ರ ಅನ್ವಯ ಹಾಗೂ ಸರಕಾರದ ಆದೇಶಸಂಖ್ಯೆ:ಸಿಆಸುಇ 53 ಸೇನೆನಿ 2007 ದಿನಾಂಕ 04/01/2008 |
| 2. | ಅಂಗವಿಕಲರಿಗೆ | ಶೇ. 5 | ಕರ್ನಾಟಕ ಸಿವಿಲ್ ಸರ್ವಿಸಸ್ (ಜನರಲ್ ರೆಕ್ರೂಟಮೆಂಟ್) ರೂಲ್ಸ್ 1977 ರ ನಿಯಮ 9(1) ರ ಅನ್ವಯ ಹಾಗೂ ಸರಕಾರದ ಆದೇಶಸಂಖ್ಯೆ ಸಿಆಸುಇ 53 ಸೇನೆನಿ 2007 ದಿನಾಂಕ 04/01/2008 |
| 3. | ಮಹಿಳಾ ಅಭ್ಯರ್ಥಿಗಳಿಗೆ | ಶೇ.30 | ಕರ್ನಾಟಕ ಸಿವಿಲ್ ಸರ್ವಿಸಸ್ (ಜನರಲ್ ರೆಕ್ರೂಟಮೆಂಟ್) ರೂಲ್ಸ್ 1977 ರ ನಿಯಮ 9(1) ರ ಅನ್ವಯ ಹಾಗೂ ಸರಕಾರದ ಆದೇಶಸಂಖ್ಯೆ ಸಿಆಸುಇ 53 ಸೇನೆನಿ 2007 ದಿನಾಂಕ 04/01/2008 ಹಾಗೂ ಸರ್ಕಾರದ ಸುತ್ತೋಲೆ ಸಂಖ್ಯೆ. ಸಿ.ಆ.ಸು.ಇ.16. ಸೇ. ನೇ. ನಿ.2008 ದಿನಾಂಕ.01–09–2008 ರ ಪ್ರಕಾರ ಪರಿಗಣಿಸಲಾಗುವುದು. |
| 4. | ಯೋಜನೆಗಳಿಂದ ನಿರಾಶ್ರಿತ ಅಭ್ಯರ್ಥಿ/ "ಕುಟುಂಬ"ದ ಅಭ್ಯರ್ಥಿಗಳಿಗಾಗಿ | ಶೇ.5 | ಸರಕಾರದ ಅಧಿಸೂಚನೆ ಸಂಖ್ಯೆ ಡಿಪಿಎಆರ್/23 ಎಸ್.ಆರ್.ಆರ್.99 ದಿನಾಂಕ 23–11–2000 ಮತ್ತು ಸರಕಾರದ ಆದೇಶ ಸಂಖ್ಯೆ:ಸಿಆಸುಇ 53 ಸೇನೆನಿ 2007 ದಿನಾಂಕ 04/01/2008 |
| 5. | ಗ್ರಾಮೀಣ ಅಭ್ಯರ್ಥಿ | ಶೇ.25 | ಕರ್ನಾಟಕ ಗ್ರಾಮೀಣ ಅಭ್ಯರ್ಥಿಗಳಿಗಾಗಿ (ರಾಜ್ಯ ಸಿವಿಲ್ ಸೇವೆಗಳಲ್ಲಿ) ನೇಮಕಾತಿಗಳ ಅಥವಾ ಹುದ್ದೆಗಳ ಮೀಸಲಾತಿ ಅಧಿನಿಯಮ 2000 ಇದರ ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ08ಸೇನೆನಿ2001 ದಿನಾಂಕ:13/02/2001. ಹಾಗೂ ಸರಕಾರದ ಆದೇಶ ಸಂಖ್ಯೆ:ಸಿಆಸುಇ 53 ಸೇನೆನಿ 2007 ದಿನಾಂಕ 04/01/2008 |
| 6. | ಕನ್ನಡ ಮಾಧ್ಯಮದ ಅಭ್ಯರ್ಥಿಗಳಿಗಾಗಿ | ಶೇ. 5 | ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್–71ಎಸ್.ಆರ್.ಆರ್. 2001 ದಿನಾಂಕ 24/10/2002 ಮತ್ತು ಸರ್ಕಾರದ ಆದೇಶಸಂಖ್ಯೆ ಸಿಆಸುಇ 53 ಸೇನೆನಿ 2007 ದಿನಾಂಕ 04/01/2008 |

ಮಹಿಳಾ ಅಭ್ಯರ್ಥಿಗಳಿಗಾಗಿ ಮೀಸಲಿರಿಸಿರುವ ರಿಕ್ತ ಸ್ಥಾನಗಳಿಗೆ ಅರ್ಹ ಮಹಿಳಾ ಅಭ್ಯರ್ಥಿಗಳು ದೊರೆಯದಿದ್ದಲ್ಲಿ ಅಂತಹ ರಿಕ್ತ ಸ್ಥಾನಗಳನ್ನು ಆಯಾ ವರ್ಗಕ್ಕೆ ಸೇರಿದ ಪುರುಷ ಅಭ್ಯರ್ಥಿಗಳಿಂದ ಭರ್ತಿ ಮಾಡಲಾಗುವುದು.

ಮುಂದುವರೆದು, ಆಯ್ಕೆಪಟ್ಟಿಯನ್ನು ಸಿದ್ಧಪಡಿಸುವಾಗ ಸಮತಳ ಮೀಸಲಾತಿಗೆ ಸಂಬಂಧಿಸಿದಂತೆ ಗೌರವಾನ್ವಿತ ಸರ್ವೋಚ್ಛ ನ್ಯಾಯಾಲಯವು ವಿವರಿಸಿರುವ ಕಾರ್ಯವಿಧಾನವನ್ನು ಸರ್ಕಾರವು ಸುತ್ತೋಲೆ ಸಂಖ್ಯೆ: ಸಿಆಸುಇ 16 ಸೇನೆನಿ 2008, ದಿ. 1.9.2008ರಲ್ಲಿ ಆದೇಶಿರುವಂತೆ ಅಳವಡಿಸಿಕೊಳ್ಳಲಾಗುವುದು.

ಮಾಜಿ ಸೈನಿಕ, ಯೋಜನಾ ನಿರಾಶ್ರಿತ, ಗ್ರಾಮೀಣ ಅಭ್ಯರ್ಥಿ, ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಅಭ್ಯರ್ಥಿಗಳಿಗೆ ಮೀಸಲಿರಿಸಿದ ರಿಕ್ತ ಸ್ಥಾನಗಳಿಗೆ ಅರ್ಹ ಅಭ್ಯರ್ಥಿಗಳು ಲಭ್ಯವಾಗದಿದ್ದಲ್ಲಿ ಅಂತಹ ರಿಕ್ತ ಸ್ಥಾನಗಳನ್ನು ಆಯಾ ವರ್ಗಕ್ಕೆ ಸೇರಿದ ಇತರೆ ಅರ್ಹ ಅಭ್ಯರ್ಥಿಗಳಿಂದ ಭರ್ತಿ ಮಾಡಲಾಗುವುದು.

ಅರ್ಹ ಅಂಗವಿಕಲ ಅಭ್ಯರ್ಥಿಗಳು ದೊರೆಯದಿದ್ದಲ್ಲಿ ಅಂತಹ ರಿಕ್ತ ಸ್ಥಾನಗಳನ್ನು ಭರ್ತಿ ಮಾಡದೇ ಬ್ಯಾಕ್ ಲಾಗ್ ಹುದ್ದೆಗಳೆಂದು ಪರಿಗಣಿಸಲಾಗುವುದು.

**12. ಹುದ್ದೆಗಳ ವರ್ಗೀಕರಣ;**

ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 08 ಸಹಿಮ 95 ದಿನಾಂಕ 20–06–1995 ಮತ್ತು ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 53 ಸೇ.ನೇ.ನಿ.2007 ದಿನಾಂಕ 04–01–2008 ಪ್ರಕಾರ ವಿಷಯವಾರು ಹುದ್ದೆಗಳನ್ನು ಅನುಬಂಧ–1 ರಲ್ಲಿ ವರ್ಗೀಕರಿಸಿದೆ.

**ಸೂಚನೆ: ಈಗ ಅಧಿಸೂಚಿಸಿರುವ ಹುದ್ದೆಗಳ ಸಂಖ್ಯೆ ಮತ್ತು ವರ್ಗೀಕರಣವು ಅವಶ್ಯವಿದ್ದಲ್ಲಿ ವ್ಯತ್ಯಾಸಕ್ಕೆ ಒಳಪಟ್ಟಿರುತ್ತದೆ.**

**ಮೀಸಲಾತಿ ಸೌಲಭ್ಯ ಪಡೆಯಲು ಅಭ್ಯರ್ಥಿಗಳು ಸಲ್ಲಿಸಬೇಕಾದ ಪ್ರಮಾಣ ಪತ್ರಗಳು:**

ಇ) ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ ಮತ್ತು ಹಿಂದುಳಿದ ಪ್ರವರ್ಗ –1 ಕ್ಕೆ ಸೇರಿದ ಅಭ್ಯರ್ಥಿಗಳು ಸರ್ಕಾರದ ಅಧಿಸೂಚನೆ ಸಂಖ್ಯೆ ಎಸ್‌ಡಬ್ಲ್ಯೂಡಿ 132 ಎಸ್‌ಎಡಿ 97 ದಿನಾಂಕ 08–02–2000 ಮತ್ತು ಹಿಂದುಳಿದ ಪ್ರವರ್ಗಗಳಾದ ಪ್ರವರ್ಗ –2 ಎ , 2ಬಿ, 3 ಎ, ಮತ್ತು 3ಬಿ ಗೆ ಸೇರಿದ ಅಭ್ಯರ್ಥಿಗಳು ಸರ್ಕಾರದ ಆದೇಶ ಸಂಖ್ಯೆ: ಎಸ್‌ಡಬ್ಲ್ಯೂಡಿ 126 ಬಿಸಿಎ ದಿನಾಂಕ 13–02–2003 ರಂದು ಹೊರಡಿಸಿದ **"ಕರ್ನಾಟಕ ಅನುಸೂಚಿತ ಜಾತಿಗಳು, ಅನುಸೂಚಿತ ಬುಡಕಟ್ಟುಗಳು, ಮತ್ತು ಇತರೆ ಹಿಂದುಳಿದ ವರ್ಗಗಳ (ನೇಮಕಾತಿ ಮುಂತಾದ ಮೀಸಲಾತಿ) (ತಿದ್ದುಪಡಿ) ನಿಯಮಗಳು 2000"** ರನ್ವಯ ನಿಗದಿಪಡಿಸಿರುವ ಅಭ್ಯರ್ಥಿಗಳಿಗೆ ಅನ್ವಯಿಸುವ ಕೆಳಕಂಡ ನಮೂನೆಗಳಲ್ಲಿಯೇ ಸಂಬಂಧಿಸಿದ ವ್ಯಾಪ್ತಿಯ ತಹಸೀಲ್ದಾರರ ದರ್ಜೆಗಿಂತ ಕಡಿಮೆ ಇಲ್ಲದ ರೆವಿನ್ಯೂ ಪ್ರಾಧಿಕಾರಿಯಿಂದ ಪ್ರಮಾಣ ಪತ್ರವನ್ನು ಪಡೆದಿರಬೇಕು.

| | | |
|---|---|---|
| 1 | ಅನುಸೂಚಿತ ಜಾತಿ ಅಥವಾ ಅನುಸೂಚಿತ ಪಂಗಡಕ್ಕೆ ಸೇರಿದ ಅಭ್ಯರ್ಥಿಗಳು | ನಮೂನೆ –ಡಿ (ನಿಯಮ 3ಎ(2)(3), ಸರ್ಕಾರದ ಆದೇಶ ಸಂಖ್ಯೆ: ಎಸ್.ಡಬ್ಲ್ಯೂಡಿ 132 ಎಸ್.ಎ.ಡಿ. 97 ದಿನಾಂಕ 08–02–2000. |
| 2 | ಹಿಂದುಳಿದ ಪ್ರವರ್ಗ 1ಕ್ಕೆ ಸೇರಿದ ಅಭ್ಯರ್ಥಿಗಳು | ನಮೂನೆ –ಇ (ನಿಯಮ 3ಎ(2)(3), ಸರ್ಕಾರದ ಆದೇಶ ಸಂಖ್ಯೆ: ಎಸ್.ಡಬ್ಲ್ಯೂಡಿ 132 ಎಸ್.ಎ.ಡಿ. 97 ದಿನಾಂಕ 08–02–2000. |
| 3 | ಹಿಂದುಳಿದ ಪ್ರವರ್ಗ 2ಎ, 2ಬಿ, 3ಎ, ಮತ್ತು 3ಬಿ ಗೆ ಸೇರಿದ ಅಭ್ಯರ್ಥಿಗಳು | ನಮೂನೆ : ಎಫ್. (ನಿಯಮ 3ಎ(2)(3), ಸರ್ಕಾರದ ಆದೇಶ ಸಂಖ್ಯೆ: ಎಸ್.ದಬ್ಲ್ಯೂಡಿ 126 ಬಿಸಿಎ ದಿನಾಂಕ 13–02–2003 |

**ಮೇಲ್ಕಂಡ ಮೀಸಲಾತಿ ಪ್ರಮಾಣ ಪತ್ರಗಳು ಉಲ್ಲೇಖಿಸಿರುವ ನಿಯಮಗಳ ಪ್ರಕಾರ ಚಾಲ್ತಿಯಲ್ಲಿರಬೇಕು. ಚಾಲ್ತಿಯಲ್ಲಿರದ ಮೀಸಲಾತಿ ಪ್ರಮಾಣ ಪತ್ರಗಳನ್ನು ತಿರಸ್ಕರಿಸಲಾಗುವುದು.**

**ಅ) ಗ್ರಾಮೀಣ ಅಭ್ಯರ್ಥಿಗಳು:**

ಗ್ರಾಮೀಣ ಅಭ್ಯರ್ಥಿ ಎಂದರೆ ಕರ್ನಾಟಕ ಪೌರನಿಯಮಗಳ ಅಧಿನಿಯಮ 1976 ಅಥವಾ ಕರ್ನಾಟಕ ಪೌರಸಭೆಗಳ ಆಧಿನಿಯಮ 1964 ರಡಿಯಲ್ಲಿ ನಿರ್ದಿಷ್ಟಪಡಿಸಿದ ಒಂದು ದೊಡ್ಡ ಪ್ರದೇಶ, ಸಣ್ಣನಗರ ಪ್ರದೇಶ ಅಥವಾ ಪರಿವರ್ತನೆ ಹಂತದಲ್ಲಿರುವ ಪ್ರದೇಶ ಹೊರತಾಗಿ ಇತರೆ ಯಾವುದೇ ಪ್ರದೇಶದಲ್ಲಿರುವ ಶಾಲೆಯಲ್ಲಿ 1ನೇ ತರಗತಿಯಿಂದ 10 ನೇ ತರಗತಿಯವರೆಗೆ ವ್ಯಾಸಂಗ ಮಾಡಿದ ಅಭ್ಯರ್ಥಿ.

**ಗ್ರಾಮೀಣ ಅಭ್ಯರ್ಥಿಗಳ ಮೀಸಲಾತಿ ಅಡಿಯಲ್ಲಿ ಅರ್ಜಿ ಸಲ್ಲಿಸುವ ಅಭ್ಯರ್ಥಿಗಳು ಸಂಬಂಧಿಸಿದ ಪ್ರಮಾಣ ಪತ್ರಗಳನ್ನ** ಸರಕಾರಿ ಆದೇಶ ಸಂಖ್ಯೆ: ಡಿಪಿಎಆರ್ 96 ಸೇನೆನಿ 2005 ದಿನಾಂಕ 10–08–2005 **ರಲ್ಲಿ ನೀಡಿದ ನಿಗದಿತ ನಮೂನೆಯಲ್ಲಿ ಮಾತ್ರ ಸಲ್ಲಿಸಬೇಕು.**

**ಸೂಚನೆಗಳು :**

ಸದರಿ ಅಧಿನಿಯಮದಲ್ಲಿ "**ಗ್ರಾಮೀಣ ಅಭ್ಯರ್ಥಿಯನ್ನು**" ಈ ಕೆಳಗೆ ಉದ್ಧರಿಸಿದಂತೆ ಪರಿಭಾಷಿಸಲಾಗಿದೆ.

1. ಗ್ರಾಮೀಣ ಅಭ್ಯರ್ಥಿ ಎಂದರೆ ಒಂದು ಹುದ್ದೆಗಾಗಿ ನಿಗಧಿಪಡಿಸಲಾದ ಅರ್ಹತಾ ಪರೀಕ್ಷೆಯು ಎಸ್.ಎಸ್.ಎಲ್.ಸಿ ಅಥವಾ ಉನ್ನತ ಪರೀಕ್ಷೆಯಾಗಿದ್ದಲ್ಲಿ 1ನೇ ತರಗತಿಯಿಂದ 10ನೇ ತರಗತಿಯವರೆಗೆ.

2. ಒಂದು ಹುದ್ದೆಗೆ ನಿಗಧಿ ಪಡಿಸಲಾದ ಅರ್ಹತಾ ಪರೀಕ್ಷೆಯು ಎಸ್.ಎಸ್.ಎಲ್.ಸಿಗಿಂತ ಕಡಿಮೆಯಾಗಿದ್ದಲ್ಲಿ 1ನೇ ತರಗತಿಯಿಂದ ಅರ್ಹತಾ ಪರೀಕ್ಷೆಯವರೆಗೆ:

3. ಸಾಮಾನ್ಯ ವರ್ಗದ ಅಭ್ಯರ್ಥಿಗಳು ನಮೂನೆ–1ರಲ್ಲಿ ಅಂದರೆ, ಮೇಲುಸ್ಥರದಲ್ಲಿ (Creamy layer) ಬರುವುದಿಲ್ಲವೆಂದು ಸಂಬಂಧಿಸಿದ ತಹಸೀಲ್ದಾರರವರಿಂದ ಪಡೆದ ಪ್ರಮಾಣ ಪತ್ರ ನಮೂನೆ–1ರಲ್ಲಿ ಪತ್ರವನ್ನು ಸಲ್ಲಿಸತಕ್ಕದ್ದು.

4. ಪ್ರವರ್ಗ–1, 2ಎ, 2ಬಿ, 3ಎ, 3ಬಿ, ಪರಿಶಿಷ್ಠ ಜಾತಿ ಮತ್ತು ಪರಿಶಿಷ್ಠ ಪಂಗಡಕ್ಕೆ ಸೇರಿದ ಅಭ್ಯರ್ಥಿಗಳು ತಮ್ಮ ಮೀಸಲಾತಿ ಪ್ರಮಾಣ ಪತ್ರದ ಜೊತೆಗೆ ಸರ್ಕಾರದ ಆದೇಶ ದಿನಾಂಕ:10/08/2005 ರಲ್ಲಿ ನಿಗಧಿ ಪಡೆಸಲಾದ ನಮೂನೆ–2ರಲ್ಲಿ ಗ್ರಾಮೀಣ ವ್ಯಾಸಂಗ ಪ್ರಮಾಣ ಪತ್ರವನ್ನು ಸಲ್ಲಿಸತಕ್ಕದ್ದು.

**ಈ ಬಗ್ಗೆ ನಿಖರ ಮಾಹಿತಿಗಾಗಿ ಸಂಬಂಧಪಟ್ಟ ಮಹಾನಗರಸಭೆ/ ನಗರ ಸಭೆ/ ಪುರಸಭೆ/ ಪಟ್ಟಣ ಪಂಚಾಯ್ತಿ/** ಮಂಡಲ **ಪಂಚಾಯ್ತಿ/ ಗ್ರಾಮ ಪಂಚಾಯ್ತಿಯ ಅಧಿಕಾರಿಗಳನ್ನು ಸಂಪರ್ಕಿಸಲು ತಿಳಿಸಿದೆ.**

**ವಿಶೇಷ ಸೂಚನೆ :– (1)** ಸರ್ಕಾರದ ಆದೇಶ ಸಂಖ್ಯೆ : ಡಿಪಿಎಆರ್ 96 ಸೇನೇನಿ 2005 ದಿನಾಂಕ : 10.8.2005ರ ನಮೂನೆ–2ರಲ್ಲಿ ನೀಡಿದ ವ್ಯಾಸಂಗ ಪ್ರಮಾಣ ಪತ್ರಗಳನ್ನು ನೇಮಕಾತಿ ಅಧಿಸೂಚನೆ ದಿನಾಂಕದ ನಂತರ, ಅರ್ಜಿ ಸಲ್ಲಿಸುವ ಕೊನೆಯ ದಿನಾಂಕದೊಳಗೆ ಪಡೆದು ಅರ್ಜಿಯೊಡನೆ ಲಗತ್ತಿಸತಕ್ಕದ್ದು. ಈ ಹಿಂದೆ ಪಡೆಯಲಾದ ಪ್ರಮಾಣ ಪತ್ರಗಳನ್ನು ಪರಿಗಣಿಸಲಾಗುವುದಿಲ್ಲ.

**(2)** 1995 ರಿಂದ ಅನೇಕ ಪ್ರದೇಶಗಳು ಪರಿವರ್ತಿತ ಪ್ರದೇಶಗಳೆಂದು ಗುರುತಿಸಲ್ಪಟ್ಟಿದ್ದು, ತದನಂತರ ಪುರಸಭೆ/ನಗರ ಸಭೆಗಳಾಗಿ ಅಧಿಸೂಚಿಸಲ್ಪಟ್ಟಿದೆ. ಅಭ್ಯರ್ಥಿಯು ವ್ಯಾಸಂಗ ಮಾಡುವ ಅವಧಿಯಲ್ಲಿ ಸದರಿ ಪ್ರದೇಶವು ಗ್ರಾಮೀಣ ಪ್ರದೇಶವೋ ಅಥವಾ ಪರಿವರ್ತಿತ ಪ್ರದೇಶ ಎಂದು ಗುರುತಿಸಲ್ಪಟ್ಟಿದೆಯೋ ಇಲ್ಲವೋ ಎಂಬ ಬಗ್ಗೆ ಸ್ಥಳೀಯ ಪುರಸಭೆ, ನಗರ ಸಭೆ ಅಥವಾ ಪಟ್ಟಣ ಪಂಚಾಯಿತಿಯ ಅಧಿಕಾರಿಗಳಿಂದ ನಿಖರ ಮಾಹಿತಿ (ಸರ್ಕಾರದ ಅಧಿಸೂಚನೆಯೊಂದಿಗೆ) ಪಡೆದ ನಂತರ ಪ್ರಮಾಣ ಪತ್ರ ನೀಡಲು, ಮೇಲು ಸಹಿ ಮಾಡಲು ಸಕ್ಷಮ ಪ್ರಾಧಿಕಾರಿಗಳು ಕ್ರಮ ತೆಗೆದುಕೊಳ್ಳುವುದು.

**ಆ) ಅಂಗವಿಕಲ ಅಭ್ಯರ್ಥಿಗಳು:**

ಸರ್ಕಾರದ ಆದೇಶ ಸಂಖ್ಯೆ: ಡಿಪಿಎಆರ್ 52 ಎಸ್.ಆರ್..ಆರ 99 ದಿನಾಂಕ; 29–11–2002 ರಲ್ಲಿ ನಿಗದಿಪಡಿಸಿರುವ ಅಂಗವಿಕಲ ಅಭ್ಯರ್ಥಿಗಳನ್ನು ಮಾತ್ರ ಪರಿಗಣಿಸಲಾಗುವುದು. ಸರ್ಕಾರಿ ಆದೇಶ ಸಂಖ್ಯೆ:ಎಂ.ಎಂ.ಇ.107. ಪಿ.ಹೆಚ್.ಪಿ/2003 ದಿನಾಂಕ 11/07/2003 ರಲ್ಲಿ ವೈದ್ಯಕೀಯ ಪ್ರಮಾಣ ಪತ್ರವನ್ನು ಸಕ್ಷಮ ವೈದ್ಯಾಧಿಕಾರಿಗಳಿಂದ ಪಡೆದಿರಬೇಕು. ಈ ಪ್ರಮಾಣ ಪತ್ರವನ್ನು ಅರ್ಜಿ ಸ್ವೀಕರಿಸಲು ನಿಗದಿಪಡಿಸಿರುವ ಕಡೆಯ ದಿನಾಂಕದೊಳಗೆ ಅಭ್ಯರ್ಥಿಯು ಪಡೆದುಕೊಂಡಿರಬೇಕು. ಹಾಗೂ ನಿಯಮಾನುಸಾರ ಕನಿಷ್ಠ ಅಂಗವಿಕಲತೆ ಪ್ರಮಾಣವನ್ನು ಹೊಂದಿರಬೇಕು.

ಸರ್ಕಾರಿ ಅಧಿಸೂಚನೆ ಸಂಖ್ಯೆ: ಡಿಪಿಎಆರ್.52 ಎಸ್.ಆರ್ಆರ್99 ದಿನಾಂಕ: 29–11–2002 ರ ಪ್ರಕಾರ Persons with disabilities (equal opportunities, protection of rights & full participation) Act 1995 ಅಧಿನಿಯಮದ ಸೆಕ್ಷನ್ 32 ರ ಪ್ರಕಾರ ರಾಜ್ಯ ಸರ್ಕಾರವು ವಿವಿಧ ಇಲಾಖೆಗಳಲ್ಲಿ ಅಂಗವಿಕಲರು ನಿರ್ವಹಿಸಬಹುದಾದ ಹುದ್ದೆಗಳನ್ನು ಗುರುತಿಸಿದೆ. ಸದರಿ ಅಧಿಸೂಚನೆಯ ಪುಟ–21 ರಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆಗೆ ಸಂಬಂಧಿಸಿದಂತೆ ಅಂಗವಿಕಲ ಅಭ್ಯರ್ಥಿಗಳಿಗೆ ಗುರುತಿಸಿರುವ ಹುದ್ದೆಗಳ ಉದ್ಧೃತವನ್ನು ಈ ಕೆಳಗೆ ನೀಡಲಾಗಿದೆ.

| Sl.No. 68. | |
|---|---|
| Name of the Dept - Public Instruction | |
| Blind | Music Teacher Gr.1 & II (HS) |
| Low Vision | MusicTr Gr.1 & II (HS) Packer, Counter, Grp. D - Sweeper, Cleaner, Peon |
| Leprosy Cured | Pri School HM, Sr Librarian, Gr.1 & II Pry. School Teacher /Drawing, Music, Art Master (SSLC with Asst.Master Certi)Sec.sch Asst II,Tr-1, Asst. Agri. Teacher, Pri.Sch Tr, Trained & Untrained, FDA, SDA, Drama, Craft, Hindi Trs. Group-D Post: Lift Attender, Peon/Packer/Carrien Counter Cleaner, Pacher, Attender |
| Hearing Impaired | PriSchool HM, Sr Librarian, Pry. Schools Nursery school Tr Drawing, Art Master(SSLC with Asst.MasterCertificate) Sec School Assistant-II, Tr Gr-I , Asst Agricultural Teacher, Pry. School Tr, Trained & Untrained Drama Teacher, FDA, SDA, Craft, Hindi Tr, Group D Post. Attender/Lift Attender/ Packers/Caariern/Counter/Pacher/Peon/Cleaner,Sweeper |
| Locomotor Disability | Primary School HM, Nursery School Teacher / Mother, Librarian State education Library, FDA, Drawing Art master(SSLC with Asst Master cert) Secondary school Asst Gr II, Teacher, Gr-1, Asst.craft and Hindi teacher, Group D, Post Attender/Lift Attender, Packers / Carriern/Counter/Pacher, Peon/Cleaner |
| Mentally Ill | Pry.School HM, Sr.Librarian, Pry.Schools,Nursery school Teacher/Drawing Asst Master(SSLC with Asst Master Certificate), Sec.School Asst-II, Teacher-I, Asst.Agri. Teacher, Pry.Sch. Tr, Trained & Untrained, FDA, SDA, Craft & Hindi Teacher, Group D Post. Lift Attender/Pachers/Caarreon/ Counter / Pacher / Peon / Cleaner, Sweeper |
| Mentally Retarded | |

ಅಂಗವಿಕಲ ಅಭ್ಯರ್ಥಿಗಳು ಸರ್ಕಾರದ ಆದೇಶ ಸಂಖ್ಯೆ ಎಂ.ಎಂ.ಇ.107ಪಿಹೆಚ್.ಪಿ 2003 ದಿನಾಂಕ: 11–07–2003 ರನ್ವಯ ನಿಗದಿತ ನಮೂನೆಯಲ್ಲಿ ಅಂಗವಿಕಲತೆಯ ಬಗ್ಗೆ ಸಂಬಂಧಪಟ್ಟ ಜಿಲ್ಲಾ ವೈದ್ಯಕೀಯ ಮಂಡಳಿಯು ನೀಡುವ ಪ್ರಮಾಣ ಪತ್ರವನ್ನು ಪಡೆದು ಅದರ ಸ್ವದೃಢೀಕೃತ ಪ್ರತಿಯನ್ನು ಅರ್ಜಿಗೆ ಲಗತ್ತಿಸಬೇಕು. ಅವರು ಆಯ್ಕೆಯಾದ ಪಕ್ಷದಲ್ಲಿ ಅದರ ಮೂಲ ಪ್ರತಿಯನ್ನು ನೇಮಕಾತಿ ಪ್ರಾಧಿಕಾರಿಗಳಿಗೆ ಸಲ್ಲಿಸಬೇಕು. ಅಂಗವಿಕಲರೆಂದು ವೈದ್ಯಕೀಯ ಪ್ರಮಾಣ ಪತ್ರದ ಆಧಾರದ ಮೇಲೆ ಅಂಗವಿಕಲ ಮೀಸಲಾತಿ ಹುದ್ದೆಯಲ್ಲಿ ನೇಮಕಾತಿ ಹೊಂದಿ ಸೇವೆ ಸಲ್ಲಿಸುತ್ತಿದ್ದವರು ಬೇರೆ ಯಾವುದೇ ಹುದ್ದೆಗೆ ಕಛೇರಿ ಮುಖ್ಯಸ್ಥರ ಮುಖಾಂತರ ಅರ್ಜಿಯನ್ನು ಸಲ್ಲಿಸಿದಾಗ ಅವರು ಪುನಃ ವೈದ್ಯಕೀಯ ಪ್ರಮಾಣ ಪತ್ರವನ್ನು ಸಲ್ಲಿಸುವ ಅವಶ್ಯಕತೆ ಇರುವುದಿಲ್ಲ. ಅರ್ಜಿಯನ್ನು ಆಯ್ಕೆ ಪ್ರಾಧಿಕಾರಿಗೆ ಕಳುಹಿಸುವಾಗ, ಅರ್ಜಿದಾರನು ಅಂಗವಿಕಲ ಮೀಸಲಾತಿಯ ಹುದ್ದೆಗೆ ಆಯ್ಕೆಯಾದವನು ಎಂಬ ಪ್ರಮಾಣ ಪತ್ರದೊಡನೆ ಮೇಲಾಧಿಕಾರಿಗಳು ಅರ್ಜಿಯನ್ನು ಕಳುಹಿಸಿಕೊಡುವುದು.

**ಇ) ಮಾಜಿ ಸೈನಿಕರ ಗುಂಪಿನಲ್ಲಿ ಆಯ್ಕೆ ಬಯಸುವ ಅಭ್ಯರ್ಥಿಗಳಿಗೆ ಸೂಚನೆಗಳು:**

ಮಾಜಿ ಸೈನಿಕರ ಗುಂಪಿನಲ್ಲಿ ಆಯ್ಕೆಗೆ ಕೆಳಗಿನವರು ಅರ್ಹರು:–

(1) ಮಾಜಿ ಸೈನಿಕ ಎಂದರೆ ಸಶಸ್ತ್ರ ದಳಗಳಾದ ನಿಯಮಿತ ಭೂದಳ, ನೌಕಾದಳ ಮತ್ತು ವಾಯುದಳದಲ್ಲಿ ಯಾವುದೇ ಶ್ರೇಣಿಯಲ್ಲಿ (ಯೋಧ ಅಥವಾ ಅಯೋಧನಾಗಿ) ಸೇವೆ ಸಲ್ಲಿಸಿದ ವ್ಯಕ್ತಿ. ಅಂದರೆ:–

(ಅ) ಅಂತಹ ಸೇವೆಯಿಂದ ನಿವೃತ್ತಿ ಹೊಂದಿದ ನಂತರ ನಿವೃತ್ತಿ ವೇತನ ಪಡೆಯುತ್ತಿರುವ ವ್ಯಕ್ತಿ.

**ಅಥವಾ**

(ಆ) ವೈದ್ಯಕೀಯ ಕಾರಣಗಳಿಂದ ಮಿಲಿಟರಿ ಸೇವೆಗೆ ಅನರ್ಹನಾದವನೆಂದೋ ಅಥವಾ ವ್ಯಕ್ತಿಯ ಹಿಡಿತಕ್ಕೂ ಮೀರಿದ ಪರಿಸ್ಥಿತಿಗಳಿಂದ ಮತ್ತು ವೈದ್ಯಕೀಯ ಅಥವಾ ಅಸಾಮರ್ಥ್ಯದ ಪಿಂಚಣಿ ಪಡೆದು ಸೇವೆಯಿಂದ ಬಿಡುಗಡೆಯಾದ ವ್ಯಕ್ತಿ.

**ಅಥವಾ**

(ಇ) ಸ್ವಂತ ಕೋರಿಕೆ ಹೊರತುಪಡಿಸಿ ಸಿಬ್ಬಂದಿ ಕಡಿತದ ಪರಿಣಾಮದಿಂದ ಅಂತಹ ಸೇವೆಯಿಂದ ಬಿಡುಗಡೆ ಹೊಂದಿದ ವ್ಯಕ್ತಿ.

**ಅಥವಾ**

(ಈ) ತನ್ನ ಸ್ವಂತ ಕೋರಿಕೆಯ ಮೇರೆಗೆ ಅಥವಾ ದುರ್ನಡತೆ ಅಥವಾ ಅಸಾಮರ್ಥ್ಯದ ಕಾರಣದಿಂದಾಗಿ ತೆಗೆದು ಹಾಕಿರುವ ಅಥವಾ ಕರ್ತವ್ಯದಿಂದ ವಜಾ ಮಾಡಿದ ವ್ಯಕ್ತಿಗಳನ್ನು ಹೊರತುಪಡಿಸಿ, ನಿರ್ಧಿಷ್ಟ ಅವಧಿಯನ್ನು ಪೂರೈಸಿದ ತರುವಾಯ ಬಿಡುಗಡೆ ಹೊಂದಿದ ವ್ಯಕ್ತಿ ಮತ್ತು ಗ್ರಾಚ್ಯುಟಿ ಪಡೆಯುತ್ತಿರುವ ವ್ಯಕ್ತಿ.

**ಅಥವಾ**

(ಉ) ಪ್ರಾಂತೀಯ ಸೇವೆಯ ಈ ಕೆಳಗೆ ಹೆಸರಿಸಿದ ವರ್ಗದ ಸಿಬ್ಬಂದಿ.

1) ನಿರಂತರ ಸೇವೆ ಸಲ್ಲಿಸಿ ನಿವೃತ್ತಿ ಹೊಂದಿದ ಪಿಂಚಣಿದಾರರು.

2) ಮಿಲಿಟರಿ ಸೇವೆಯಿಂದ ಉಂಟಾದ ದೈಹಿಕ ಅಸಾಮರ್ಥ್ಯತೆ ಹೊಂದಿ ಬಿಡುಗಡೆಯಾದ ವ್ಯಕ್ತಿ.

3) ಗ್ಯಾಲಂಟ್ರಿ ಪ್ರಶಸ್ತಿ ವಿಜೇತರು.

(2) ಮಾಜಿ ಸೈನಿಕ ಅವಲಂಬಿತರ ಗುಂಪಿನಲ್ಲಿ ಆಯ್ಕೆ ಬಯಸುವ ಅಭ್ಯರ್ಥಿಗಳು ಅಂದರೆ:–

ಕೇಂದ್ರ ಸಶಸ್ತ್ರ ದಳದಲ್ಲಿ ಸೇವೆ ಸಲ್ಲಿಸುವಾಗ ಕೊಲ್ಲಲ್ಪಟ್ಟ ಅಥವಾ ಶಾಶ್ವತವಾಗಿ ದೈಹಿಕ ವಿಕಲತೆ ಹೊಂದಿದ ವ್ಯಕ್ತಿಗಳ ಕುಟುಂಬದವರು. (ಸಂಬಂಧಾನುಸಾರ ಹೆಂಡತಿ ಅಥವಾ ಗಂಡ ಮತ್ತು ಮಕ್ಕಳು ಮತ್ತು ಮಲ ಮಕ್ಕಳು ಮಾಜಿ ಸೈನಿಕರ ಅವಲಂಬಿತರಡಿಯಲ್ಲಿ ಮೀಸಲಾತಿಗೆ ಅರ್ಹರಾಗಿರುತ್ತಾರೆ. ಆದರೆ ಅಂತಹವರಿಗೆ ವಯೋಮಿತಿ ಸಡಿಲಿಕೆ ಇಲ್ಲ)

**ವಿವರಣೆ:**

1. ಈ ಸೌಲಭ್ಯಕ್ಕೆ ಡಿಫೆನ್ಸ್ ಸೆಕ್ಯುರಿಟಿ ಕೋರ್ಸ್, ಜನರಲ್ ರಿಸರ್ವ್ ಇಂಜಿನಿಯರಿಂಗ್ ಕೋರ್ಸ್ ಲೋಕ ಸಹಾಯಕ ಸೇವೆ ಮತ್ತು ಪ್ಯಾರಾ ಮಿಲಿಟರಿ ದಳದಲ್ಲಿ ಸೇವೆ ಸಲ್ಲಿಸಿದ ವ್ಯಕ್ತಿ ಅರ್ಹರಲ್ಲ.

2. ಕೇಂದ್ರ ಸಶಸ್ತ್ರದಳದ ಸೇವೆಯಲ್ಲಿ ವ್ಯಕ್ತಿಗಳು ಸೇವೆಯಿಂದ ನಿವೃತ್ತಿ ಹೊಂದಿದ ನಂತರ ಮಾಜಿ ಸೈನಿಕರ ವರ್ಗದಡಿ ಬರುವ ವ್ಯಕ್ತಿಗೆ ಒಪ್ಪಂದವು ಪೂರ್ಣವಾಗಲು ಒಂದು ವರ್ಷಕ್ಕೆ ಮುನ್ನ ಪುನರ್ ಉದ್ಯೋಗಕ್ಕೆ ಅರ್ಜಿ ಹಾಕಿಕೊಳ್ಳಲು ಹಾಗೂ ಅವರಿಗೆ ಮಾಜಿ ಸೈನಿಕರಿಗೆ ದೊರೆಯುವ ಎಲ್ಲಾ ಸೌಲಭ್ಯಗಳನ್ನು ಹೊಂದಲು ಅನುಮತಿ ನೀಡಲಾಗಿದ್ದು, ಆದರೆ, ಸಮವಸ್ತ್ರವನ್ನು ತ್ಯಜಿಸಲು ಅನುಮತಿ ನೀಡುವವರೆಗೆ ರಾಜ್ಯ ನಾಗರೀಕ ಸೇವೆ ಅಥವಾ ಹುದ್ದೆಗೆ ನೇಮಕ ಹೊಂದುವಂತಿಲ್ಲ.

**ಈ) ಯೋಜನಾ ನಿರಾಶ್ರಿತರ ಗುಂಪಿನಲ್ಲಿ ಆಯ್ಕೆ ಬಯಸುವ ಅಭ್ಯರ್ಥಿಗಳಿಗೆ ಸೂಚನೆಗಳು:–**

ಅಧಿಸೂಚನಾ ಸಂಖ್ಯೆ: ಡಿಪಿಎಆರ್ 23 ಎಸ್.ಆರ್.ಆರ್. 99 ದಿನಾಂಕ 23–11–2000 ದಲ್ಲಿ ಸರ್ಕಾರ ರಾಜ್ಯ ಸಿವಿಲ್ ಸೇವೆಗಳಲ್ಲಿನ "ಗ್ರೂಪ್ ಸಿ ಮತ್ತು ಡಿ" ಹುದ್ದೆಗಳ ನೇರ ನೇಮಕಾತಿಗಾಗಿ ಶೇಕಡ 5% ರಷ್ಟು ರಿಕ್ತ ಸ್ಥಾನಗಳನ್ನು "ಯೋಜನೆಗಳಿಂದ ನಿರಾಶ್ರಿತರಾದವರ ಕುಟುಂಬಗಳ" ಅಭ್ಯರ್ಥಿಗಳಿಂದ ಭರ್ತಿ ಮಾಡಲು ಆಸ್ಪದ ಕಲ್ಪಿಸಿದ್ದು, ಎಲ್ಲಾ ಅಂಶಗಳು (ಪಡೆದಿರುವ ಪ್ರತಿಶತ ಅಂಕಗಳು ಹಾಗೂ ಜನ್ಮ ದಿನಾಂಕ ಸರಿಸಮಾನ ಇದ್ದಲ್ಲಿ) (when all things are being equal) ಈ ಕೆಳಕಂಡ ಆದ್ಯತೆಯಾನುಸಾರ ಭರ್ತಿ ಮಾಡಲು ನಿಗದಿಪಡಿಸಿದೆ:–

(i) ಯೋಜನೆಗಾಗಿ ಯಾವುದೇ ವ್ಯಕ್ತಿಯು ತನಗೆ ಆಧಾರವಾಗಿದ್ದ ವಾಸದ ಮನೆಯನ್ನು ಮತ್ತು ಕೊನೆಪಕ್ಷ ಶೇಕಡ 50 ರಷ್ಟು ಕೃಷಿ ಜಮೀನನ್ನು ಯೋಜನೆಗಾಗಿ ಕಳೆದುಕೊಳ್ಳಲಾದ ಅವನ ಕುಟುಂಬದ ಸದಸ್ಯರು.

(ii) ಯೋಜನೆಯ ಪೂರ್ವದ ಅವಧಿಯಲ್ಲಿ ಯಾವುದೇ ವ್ಯಕ್ತಿಯು ಭೂರಹಿತನಾಗಿದ್ದು, ತದನಂತರ ತನ್ನ ವಾಸದ ಮನೆಯನ್ನು ಯೋಜನೆಗಾಗಿ ಕಳೆದುಕೊಂಡ ವ್ಯಕ್ತಿಯ ಕುಟುಂಬದ ಸದಸ್ಯರು.

(iii) ಯೋಜನೆಗಾಗಿ ಯಾವುದೇ ವ್ಯಕ್ತಿಯು ತನಗೆ ಆಧಾರವಾಗಿದ್ದ ಶೇಕಡ 50ರಷ್ಟು ಮಾತ್ರ ಅಥವಾ ಅದಕ್ಕಿಂತ ಕಡಿಮೆ ಬೇಸಾಯದ ಭೂಮಿಯನ್ನು ಕಳೆದುಕೊಂಡ ವ್ಯಕ್ತಿಯ ಕುಟುಂಬದ ಸದಸ್ಯರು.

(iv) ಯೋಜನೆಗಾಗಿ ಇನ್ನಾವುದೇ ಪ್ರಕರಣದಲ್ಲಿ ನಿರಾಶ್ರಿತರಾದವರ ಕುಟುಂಬದ ಸದಸ್ಯರು.

**ವಿವರಣೆ:–** ಈ ಮೇಲ್ಕಂಡ ಉಪ ನಿಯಮದ ಉದ್ದೇಶ:–

(1) "ಯೋಜನೆಗಳಿಂದ ನಿರಾಶ್ರಿತರಾದ ವ್ಯಕ್ತಿ" ಎಂದರೆ, ಬಾಡಿಗೆ ಆಧಾರದ ಮೇಲೆ, ಅನುಭೋಗದ ಅವಧಿಗೆ ಜಮೀನು ಪಡೆದ ವ್ಯಕ್ತಿ ಸರ್ಕಾರದಿಂದ ಗುತ್ತಿಗೆ ಪಡೆದ, ಅಥವಾ ಇತರೆ ಆಸ್ತಿಗಳನ್ನು ಹೊಂದಿದ ಮಾಲೀಕನಾಗಿದ್ದು, ಯೋಜನೆಗಾಗಿ ಭೂಮಿಯನ್ನು : ಜಮೀನನ್ನು ಸ್ವಾಧೀನ ಪಡಿಸಿಕೊಳ್ಳುವುದಕ್ಕಿಂತ ಪೂರ್ವಭಾವಿಯಾಗಿ ಅಧಿಸೂಚನೆ ಹೊರಡಿಸುವ 5 ವರ್ಷಗಳ ಮುಂಚಿತವಾಗಿ ಯಾವುದೇ ವ್ಯಕ್ತಿಯ ಸ್ವಾಧೀನದಲ್ಲಿರುವ ಗ್ರಾಮಠಾಣದಲ್ಲಿನ ಅಥವಾ ಯೋಜನೆಯ ಪರಿಣಾಮದಿಂದಾಗಿ ಅದರ ವ್ಯಾಪ್ತಿಯಲ್ಲಿ ಬರುವಂತಹ ಜಮೀನು ಅಥವಾ ಆಸ್ತಿಯನ್ನು ಯೋಜನೆಯ ಉದ್ದೇಶಕ್ಕಾಗಿ ಸ್ವಾಧೀನ ಪಡಿಸಿಕೊಳ್ಳಲಾದ ಕಾರಣದಿಂದಾಗಿ ನಿರಾಶ್ರಿತನಾದ ವ್ಯಕ್ತಿ.

(2) "ಕುಟುಂಬ ಸದಸ್ಯರು" ಯೋಜನೆಗಳಿಂದ ನಿರಾಶ್ರಿತರಾದ ವ್ಯಕ್ತಿಗಳ ಸಂಬಂಧವೇನೆಂದರೆ ಅಂತಹ ವ್ಯಕ್ತಿಯ ಕುಟುಂಬವು ಆತನೊಂದಿಗೆ ವಾಸವಾಗಿರುವ ಮತ್ತು ಅವನ / ಅವಳ ಮೇಲೆ ಪಾಲನೆ ಹಾಗೂ ಪೋಷಣೆಗಾಗಿ ಅವಲಂಬಿತರಾಗಿರುವ ಗಂಡ / ಹೆಂಡತಿ, ಗಂಡು ಮಕ್ಕಳು, ಅವಿವಾಹಿತ ಹೆಣ್ಣು ಮಕ್ಕಳು, ಸೋದರರು ಮತ್ತು ಸೋದರಿಯರು.

(3) "ಯೋಜನೆ" ಎಂದರೆ, ನಿರಾಶ್ರಿತ ವ್ಯಕ್ತಿಗಳಿಂದ ಪಡೆಯಲಾದ ಜಮೀನನ್ನು ನಿರ್ಮಾಣ ಅಥವಾ ನೀರಾವರಿಯ ಉದ್ದೇಶಕ್ಕಾಗಿ ಅಥವಾ ನೀರು ಸರಬರಾಜು ಮಾಡುವ ಅಭಿವೃದ್ಧಿ ಕಾರ್ಯದ ವಿಸ್ತರಣೆ ಅಥವಾ ವಿದ್ಯುಚ್ಛಕ್ತಿ ಉತ್ಪಾದನೆ ಮತ್ತು ಪೂರೈಕೆ ಅಥವಾ ವಿದ್ಯುಚ್ಛಕ್ತಿ ಕಾರ್ಯಗಳ ಅನುಕೂಲಕರ ಅಭಿವೃದ್ಧಿಯೂ ಸೇರಿದಂತೆ ಸಾರ್ವಜನಿಕ ಉಪಯೋಗಗಳಿಗಾಗಿ ನಿರ್ಮಾಣ ಸುಧಾರಣೆ ಅಥವಾ ಅಭಿವೃದ್ಧಿ ಕಾರ್ಯಗಳ ಯೋಜನೆ.

**ವಿಶೇಷ ಸೂಚನೆ:–**

ಈ ಮೇಲ್ಕಂಡ ನಿಯಮಗಳು ಪ್ರಾರಂಭವಾಗುವುದಕ್ಕಿಂತ 20 ವರ್ಷಗಳ ಮುಂಚಿತವಾಗಿ ಯಾವುದೇ ಭೂಮಿ, ಗ್ರಾಮಠಾಣದಲ್ಲಿನ ಫ್ಲಾಟ್ ಅಥವಾ ಇನ್ನಿತರ ಯಾವುದೇ ಆಸ್ತಿಗಳನ್ನು ಹೊಂದಿದ್ದು, ಅಂತಹ ಆಸ್ತಿಗಳನ್ನು ಯೋಜನೆಗಳ ಉದ್ದೇಶಕ್ಕಾಗಿ ಸ್ವಾಧೀನಪಡಿಸಿಕೊಂಡ ಕಾರಣದಿಂದಾಗಿ ನಿರಾಶ್ರಿತರಾದ ಕುಟುಂಬದ ಸದಸ್ಯರು/ವ್ಯಕ್ತಿಗಳು ಈ ನಿಯಮಗಳ ಸೌಲಭ್ಯ ಪಡೆಯಲು ಅರ್ಹರಿರುವುದಿಲ್ಲ.

ಯೋಜನೆಗಳಿಂದ ನಿರಾಶ್ರಿತರಾದ ಕುಟುಂಬದ ಅಭ್ಯರ್ಥಿಗಳು ಸರ್ಕಾರಿ ಸುತ್ತೋಲೆ ಸಂಖ್ಯೆ: ಸಿ.ಆ.ಸು.ಇ.44:ಸೇ.ನೇ.ನಿ ದಿನಾಂಕ 27–07–2001ರಲ್ಲಿ ನಿಗದಿಪಡಿಸಲಾದ ನಮೂನೆಯಲ್ಲಿ ಪ್ರಮಾಣ ಪತ್ರವನ್ನು ಸಕ್ಷಮ ಪ್ರಾಧಿಕಾರದಿಂದ ಪಡೆದು ಅದರ ಎರಡು ನಕಲು ಪ್ರತಿಗಳನ್ನು ಅರ್ಜಿಯೊಂದಿಗೆ ಲಗತ್ತಿಸತಕ್ಕದ್ದು.

**ಉ) ಕನ್ನಡ ಮಾಧ್ಯಮದ ಅಭ್ಯರ್ಥಿ:–**

ಸರ್ಕಾರವು ಅಧಿಸೂಚನೆ ಸಂಖ್ಯೆ:ಡಿಪಿಎಆರ್71/ಎಸ್ಆರ್ಆರ್ 2001, ದಿನಾಂಕ: 24/10/2002ರಲ್ಲಿ ಹೊರಡಿಸಿದ ಕರ್ನಾಟಕ ಸರ್ಕಾರಿ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ (9)(1)(ಸಿ)ರ ಅನ್ವಯ ಅಭ್ಯರ್ಥಿಯು 01 ರಿಂದ 10ನೇ ತರಗತಿವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರುತ್ತಾರೆ ಎನ್ನುವ ಬಗ್ಗೆ ಸಂಬಂಧಪಟ್ಟ ಶಾಲಾ ಮುಖ್ಯಸ್ಥರಿಂದ ಪ್ರಮಾಣ ಪತ್ರವನ್ನು ಪಡೆದು, ಸಂಬಂಧಿಸಿದ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೇಲು ಸಹಿ ಮಾಡಿಸಿ ಅರ್ಜಿಯೊಂದಿಗೆ ಲಗತ್ತಿಸಬೇಕು.

**13. ತಾತ್ಕಾಲಿಕ ಆಯ್ಕೆಪಟ್ಟಿ:–**

ಅರ್ಹತೆ (ಮೇರಿಟ್) ಮತ್ತು ಮೀಸಲಾತಿ ನಿಯಮಗಳನ್ವಯ ವಿವಿಧ ವರ್ಗದ ಹುದ್ದೆಗಳಿಗೆ ಅಭ್ಯರ್ಥಿಗಳನ್ನು ಆಯ್ಕೆಮಾಡಿ ತಾತ್ಕಾಲಿಕ ಆಯ್ಕೆಪಟ್ಟಿಯನ್ನು ಆಯ್ಕೆ ಪ್ರಾಧಿಕಾರಿಯಾದ ವಿಭಾಗೀಯ ಕಾರ್ಯದರ್ಶಿಗಳು, ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ ಮತ್ತು ಪದನಿಮಿತ್ತ ಸಹ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಗುಲ್ಬರ್ಗಾ ವಿಭಾಗ, ಗುಲ್ಬರ್ಗಾ ಇವರ ಕಚೇರಿ ಮತ್ತು ಈ ವಿಭಾಗದ ಎಲ್ಲಾ ಜಿಲ್ಲಾ ಉಪನಿರ್ದೇಶಕರು (ಆಡಳಿತ) ರವರ ಕಛೇರಿಗಳಲ್ಲಿ ಪ್ರಕಟಿಸಲಾಗುವುದು ಹಾಗೂ ಈ ಬಗ್ಗೆ ರಾಜ್ಯ ಮಟ್ಟದ ಕನಿಷ್ಠ ಎರಡು ದಿನಪತ್ರಿಕೆಗಳಲ್ಲಿ ಸಂಕ್ಷಿಪ್ತ ಸೂಚನೆಯನ್ನು ಪ್ರಕಟಿಸಲಾಗುವುದು. ಅಭ್ಯರ್ಥಿಗಳು ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು ಪರಿಶೀಲಿಸಿ ತಮ್ಮ ಆಕ್ಷೇಪಣೆಗಳು ಏನಾದರೂ ಇದ್ದಲ್ಲಿ ಮುಂದೆ ತಿಳಿಸುವ ನಿಗದಿತ ದಿನಾಂಕದೊಳಗೆ ಆಕ್ಷೇಪಣೆಗಳನ್ನು ಸಲ್ಲಿಸಬಹುದಾಗಿದೆ. ಈ ದಿನಾಂಕದ

ನಂತರ ಸಲ್ಲಿಸುವ ಯಾವುದೇ ಆಕ್ಷೇಪಣೆಗಳನ್ನು ಪರಿಗಣಿಸದೆ ತಿರಸ್ಕರಿಸಲಾಗುವುದು. ನಿಗದಿತ ಸಮಯದೊಳಗೆ ಆಕ್ಷೇಪಣೆಗಳನ್ನು ಸಲ್ಲಿಸದೆ ಇರುವ ಅಭ್ಯರ್ಥಿಗಳು ಅಂತಿಮ ಆಯ್ಕೆ ಪಟ್ಟಿ ಪ್ರಕಟವಾದ ನಂತರ ಯಾವುದೇ ರೀತಿಯ ಪರಿಹಾರಕ್ಕೆ ಅರ್ಹರಾಗುವುದಿಲ್ಲ. ಮತ್ತು ಈ ಬಗ್ಗೆ ವೈಯಕ್ತಿಕವಾಗಿ ಯಾವುದೇ ಅಭ್ಯರ್ಥಿಗೂ ಸೂಚನೆ ನೀಡಲಾಗುವುದಿಲ್ಲ.

**ವಿಶೇಷ ಸೂಚನೆ:–**

ತಾತ್ಕಾಲಿಕ ಆಯ್ಕೆಪಟ್ಟಿ ಪ್ರಕಟಿಸಿದ ನಂತರ ಅಭ್ಯರ್ಥಿಗಳು ಆಕ್ಷೇಪಣೆ ಸಲ್ಲಿಸುವಾಗ ಮೂಲ ಅರ್ಜಿಯಲ್ಲಿ ದಾಖಲಿಸಿದ ವಿಷಯಗಳಿಗೆ ಸಂಬಂಧಿಸಿದಂತೆ ಮಾತ್ರ ಆಕ್ಷೇಪಣೆ ಸಲ್ಲಿಸಬಹುದು. (ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ) ನಮೂದಿಸಲು ಬಿಟ್ಟು ಹೋಗಿದ್ದ / ಮರೆತು ಹೋಗಿದ್ದ ಯಾವುದೇ ಮಾಹಿತಿಗಳನ್ನು ಅಂದರೆ ಅಂಕಗಳ ವಿವರ, ಮಿಸಲಾತಿ ಪ್ರವರ್ಗ / ಗೌರವ ಶಿಕ್ಷಕರಾಗಿ / ಅರೆಕಾಲಿಕ ಶಿಕ್ಷಕರಾಗಿ / ಜನಗಣಗತಿ ಸಂಸ್ಥೆಯಲ್ಲಿ ಗುತ್ತಿಗೆ ಆಧಾರದ ಮೇಲೆ ಸೇವೆ ಸಲ್ಲಿಸಿದ ವರ್ಷಗಳ ಬಗ್ಗೆ ಮಾಹಿತಿಗಳು ಇತ್ಯಾದಿ ಆಯ್ಕೆಗೆ ಸಂಬಂಧಿಸಿದ ಮಾಹಿತಿಗಳನ್ನು ಅಥವಾ ಹೊಸದಾಗಿ ದಾಖಲಿಸಲು ಬಯಸುವ ಮಾಹಿತಿಗಳನ್ನು ಸಲ್ಲಿಸಲು ಅವಕಾಶವಿರುವುದಿಲ್ಲ. ಅಂತಹ ಆಕ್ಷೇಪಣೆ ಮತ್ತು ಲಗತ್ತುಗಳನ್ನು ಪರಿಗಣಿಸದೆ ತಿರಸ್ಕರಿಸಲಾಗುವುದು.

**14. ಅಂತಿಮ ಆಯ್ಕೆ ಪಟ್ಟಿ:–**

1) ತಾತ್ಕಾಲಿಕ ಆಯ್ಕೆಪಟ್ಟಿಯಲ್ಲಿ ಆಯ್ಕೆ ಹೊಂದಿರುವ ಎಲ್ಲಾ ಅಭ್ಯರ್ಥಿಗಳ ಮೂಲ ಅಂಕಪಟ್ಟಿ ಮತ್ತು ಪ್ರಮಾಣ ಪತ್ರಗಳನ್ನು ಪರಿಶೀಲಿಸಿ ದೃಢಪಡಿಸಿಕೊಂಡ ನಂತರ ಅಂತಿಮ ತಾತ್ಕಾಲಿಕ ಆಯ್ಕೆಪಟ್ಟಿಯನ್ನು ಪ್ರಕಟಿಸಲಾಗುವುದು. ಮೂಲ ಪ್ರಮಾಣ ಪತ್ರಗಳನ್ನು ಪರಿಶೀಲನೆಗೆ ಸಲ್ಲಿಸದೇ ಇರುವ ಅಭ್ಯರ್ಥಿಗಳು ಅಂತಿಮ ಆಯ್ಕೆಪಟ್ಟಿಯಲ್ಲಿ ಪರಿಗಣನೆಗೆ ಬರುವುದಿಲ್ಲ.

2) ಆಯ್ಕೆ ಪಟ್ಟಿಯಲ್ಲಿ ಆಯ್ಕೆಯಾದ ಅರ್ಹ ಅಭ್ಯರ್ಥಿಗಳ ಅರ್ಹತೆ ಮತ್ತು ಮೀಸಲಾತಿಗಳನ್ನು ಖಚಿತಪಡಿಸಿಕೊಂಡು ಸಂಬಂಧಿಸಿದ ಜಿಲ್ಲಾ ಉಪನಿರ್ದೇಶಕರು (ಆಡಳಿತ) ರವರು ನೇಮಕಾತಿ ಆದೇಶವನ್ನು ಕೌನ್ಸಿಲಿಂಗ್ ಮೂಲಕ ನೀಡುತ್ತಾರೆ.

**15. ನಿಬಂಧನೆಗಳು:–**

1) ಅಭ್ಯರ್ಥಿಗಳು ನಿಗದಿತ ನಮೂನೆಯಲ್ಲಿ ಮಾತ್ರ ಅರ್ಜಿಗಳನ್ನು ಭರ್ತಿಸಿ, ಸಹಿ ಮಾಡಿ ಸಲ್ಲಿಸಬೇಕು. ನಿಗದಿತ ನಮೂನೆಯಲ್ಲಿ ಇಲ್ಲದ ಅರ್ಜಿಗಳನ್ನು ತಿರಸ್ಕರಿಸಲಾಗುವುದು. ಈ ಬಗ್ಗೆ ಯಾವುದೇ ಸೂಚನೆಗಳನ್ನು ವೈಯಕ್ತಿಕವಾಗಿ ನೀಡಲಾಗುವುದಿಲ್ಲ.

2) ಮೂಲ ಅರ್ಜಿಯಲ್ಲಿ ನೀಡಿರುವ ಮಾಹಿತಿಗಳ ಬದಲಾವಣೆಗೆ ಯಾವುದೇ ಹಂತದಲ್ಲೂ ಅವಕಾಶವಿರುವುದಿಲ್ಲ.

3) ಅರ್ಜಿ ನಮೂನೆಯಲ್ಲಿ ನಿಗಧಿತ ಸ್ಥಳದಲ್ಲಿ ಎಡಗೈ ಹೆಬ್ಬೆರಳ ಗುರುತನ್ನು ಹಾಕುವುದು. ಎಡಗೈ ಹೆಬ್ಬೆರಳು ಗುರುತು ರಹಿತ ಅರ್ಜಿಯನ್ನು ಯಾವುದೇ ಸೂಚನೆ ನೀಡದೇ ತಿರಸ್ಕರಿಸಲಾಗುವುದು. ಎಡಗೈ ಹೆಬ್ಬೆರಳು ಗುರುತು ಸ್ಪಷ್ಟವಾಗಿರಬೇಕು.

4) ಅಭ್ಯರ್ಥಿಯು ಮೀಸಲಾತಿ ಮತ್ತು ಕೋರುವ ಇತರ ಯಾವುದೇ ಸೌಲಭ್ಯಗಳಿಗೆ ಸಂಬಂಧಿಸಿದಂತೆ ಎಲ್ಲಾ ಪ್ರಮಾಣ ಪತ್ರಗಳ ದೃಢೀಕೃತ ಪ್ರತಿಗಳನ್ನು ಅರ್ಜಿಯೊಡನೆ ಲಗತ್ತಿಸಬೇಕು. ಹಾಗೂ ಅದರ ವಿವರಗಳನ್ನು ಅರ್ಜಿಯಲ್ಲಿ ನೀಡಿರುವ ಸಂಬಂಧಿಸಿದ ಕಲಂಗಳಲ್ಲಿ ತಪ್ಪದೇ ನಮೂದಿಸಬೇಕು. ಒಂದು ವೇಳೆ ವಿವರಗಳನ್ನು ನಮೂದಿಸದೇ ಇದ್ದಲ್ಲಿ ಮತ್ತು ಅದರ ದಾಖಲೆಗಳನ್ನು ಲಗತ್ತಿಸದೇ ಇದ್ದಲ್ಲಿ ಅಂತಹ ಮೀಸಲಾತಿ ಮತ್ತು ಸೌಲಭ್ಯಗಳ ಕೋರಿಕೆಗಳನ್ನು ತಿರಸ್ಕರಿಸಲಾಗುವುದು. ಅರ್ಜಿಯಲ್ಲಿ ಮೀಸಲಾತಿ (ನೇರ ಮತ್ತು ಸಮತಳ) ಕಲಂಗಳನ್ನು ಭರ್ತಿಸದೇ ಹಾಗೆಯೇ ಖಾಲಿ ಬಿಟ್ಟು ಪ್ರಮಾಣಪತ್ರಗಳ ಪ್ರತಿಗಳನ್ನು ಮಾತ್ರ ಸಲ್ಲಿಸಿದ್ದಲ್ಲಿ ಅಂತಹ ಮೀಸಲಾತಿ ಸೌಲಭ್ಯಗಳನ್ನು ಅಭ್ಯರ್ಥಿಗಳಿಗೆ ನೀಡದೆ ಸಾಮನ್ಯ ಅರ್ಹತೆಯ ಅಭ್ಯರ್ಥಿ ಎಂದು ಪರಿಗಣಿಸಲಾಗುವುದು.

5) ಅಭ್ಯರ್ಥಿಯು ಉಪಯೋಗಿಸುವ ಪಾಸ್‌ಪೋರ್ಟ್ ಅಳತೆಯ ಭಾವಚಿತ್ರವು ಅಧಿಸೂಚನೆ ದಿನಾಂಕದ ನಂತರ ತೆಗೆಸಿದ್ದಾಗಿರಬೇಕು. ಎಲ್ಲಾ ಭಾವ ಚಿತ್ರಗಳೂ ಒಂದೇ ಸಮಯದಲ್ಲಿ ತೆಗೆದವುಗಳಾಗಿರಬೇಕು.

6) ಆಯ್ಕೆಯಾದ ಅಭ್ಯರ್ಥಿಯು ತಾನು ಆಯ್ಕೆಯಾಗಿ ನೇಮಕಾತಿ ಹೊಂದಿರುವ ಜೇಷ್ಟತಾ ಘಟಕ (ಜಿಲ್ಲೆ) (Unit of Seniority)ದಲ್ಲಿ ಕಡ್ಡಾಯವಾಗಿ ಸೇವೆ ಸಲ್ಲಿಸತಕ್ಕದ್ದು.

7) ಭರ್ತಿ ಮಾಡಿದ ಅರ್ಜಿಗಳನ್ನು ಅನ್ವಯಿಸುವ ವಿದ್ಯಾರ್ಹತೆ ಪರೀಕ್ಷೆಗಳ ಅಂಕಪಟ್ಟಿ ಮತ್ತು ಇತರೆ ಎಲ್ಲಾ ಮಾಹಿತಿಗಳನ್ನು ನಮೂದಿಸಿ ನಿಗಧಿತ ದಿನಾಂಕವಾದ 08/07/2009 ರ ಸಂಜೆ 05–30 ರೊಳಗೆ ಅಥವಾ ಅದಕ್ಕೂ ಮುಂಚಿತವಾಗಿ ತಲುಪುವಂತೆ ಆಯ್ಕೆ ಪ್ರಾಧಿಕಾರದ ವ್ಯಾಪ್ತಿಯಲ್ಲಿನ ಜಿಲ್ಲಾ ಉಪನಿರ್ದೇಶಕರ ಕಛೇರಿಗೆ ಖುದ್ದಾಗಿ ಸಲ್ಲಿಸಿ ಸ್ವೀಕೃತಿ ಪಡೆಯತಕ್ಕದ್ದು. ಕೊನೆಯ ದಿನಾಂಕ ಮತ್ತು ವೇಳೆ ನಂತರ ಸಲ್ಲಿಸುವ, ಅಥವಾ ಅಂಚೆಯಲ್ಲಿ ಬರುವ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

8) ಅರ್ಜಿ ಸಲ್ಲಿಸುವ ಕೊನೆಯ ದಿನಾಂಕ ಹಾಗೂ ವೇಳೆಯು ಎಲ್ಲಾ ಅಭ್ಯರ್ಥಿಗಳಿಗೂ ಮತ್ತು ಸೇವೆಯಲ್ಲಿರುವ ಅಭ್ಯರ್ಥಿಗಳಿಗೂ ಸಹ ಅನ್ವಯಿಸುತ್ತದೆ.

9) ಅಭ್ಯರ್ಥಿಯು ಯಾವುದೇ ಸರ್ಕಾರಿ ಇಲಾಖೆಯಲ್ಲಿ ಖಾಯಂ ನೌಕರಿಯಲ್ಲಿದ್ದರೆ ಅವನು/ಳು ತಾನು ಸೇವೆ ಸಲ್ಲಿಸುತ್ತಿರುವ ಹುದ್ದೆಯ ನೇಮಕಾತಿ ಪ್ರಾಧಿಕಾರಿಯವರ ಸಮ್ಮತಿ ಇಲ್ಲದೇ ಅಥವಾ ಇಲಾಖಾ ಮುಖಾಂತರ ಅರ್ಜಿಯನ್ನು ಸಲ್ಲಿಸದೇ ಇದ್ದಲ್ಲಿ ಅಂತಹ ಅಭ್ಯರ್ಥಿ ನೇಮಕಾತಿಗೆ ಅರ್ಹರಾಗುವುದಿಲ್ಲ.

10) ಭರ್ತಿ ಮಾಡಿದ ಅರ್ಜಿಯನ್ನು ಸಂಬಂಧಿಸಿದ ಸ್ವಯಂ ದೃಢೀಕೃತ ಜೆರಾಕ್ಸ್ ಪ್ರತಿಗಳ ಲಗತ್ತುಗಳೊಂದಿಗೆ ದಿನಾಂಕ 08/07/2009 ರಂದು ಸಾಯಂಕಾಲ 5–30 ಗಂಟೆಯೊಳಗೆ ಅಥವಾ ಅದಕ್ಕೂ ಮುಂಚಿತವಾಗಿ ಜಿಲ್ಲಾ ಉಪನಿರ್ದೇಶಕರ (ಆಡಳಿತ) ಕಚೇರಿಗೆ ಖುದ್ದಾಗಿ ಸಲ್ಲಿಸಿ ಸ್ವೀಕೃತಿಯನ್ನು ಪಡೆದಿರಬೇಕು. ನಿಗದಿತ ದಿನಾಂಕ ಮತ್ತು ವೇಳೆಯ ನಂತರ ಬರುವ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

11) ಯಾವುದೇ ವ್ಯಕ್ತಿಯು ಸರ್ಕಾರಿ ನೇಮಕಾತಿಗೆ ಈ ಕೆಳಕಂಡ ಸಂದರ್ಭದಲ್ಲಿ ಅರ್ಹನಾಗುವುದಿಲ್ಲ.

1) ಯಾವುದೇ ನಿಷೇಧಿತ ಸಂಘ ಸಂಸ್ಥೆಯ ಸದಸ್ಯನಾಗಿರುವಲ್ಲಿ ಅಥವಾ ಸದಸ್ಯರಾಗಿದ್ದಲ್ಲಿ ಅಥವಾ ಯಾವುದೇ ನಿಷೇಧಿತ ಸಂಸ್ಥೆಯ ಕಾರ್ಯ ಚಟುವಟಿಕೆಯಲ್ಲಿ ಸಕ್ರಿಯವಾಗಿ ಭಾಗವಹಿಸಿದ್ದಲ್ಲಿ.
2) ಭಾರತ ಸಂವಿಧಾನಕ್ಕೆ ಚ್ಯುತಿ ತರುವ ಕಾರ್ಯದಲ್ಲಿ ಪ್ರವೃತ್ತನಾದಲ್ಲಿ.
3) ಕಾನೂನು ಭಂಗ ಮಾಡಿ ಹಿಂಸಾಕೃತ್ಯದಲ್ಲಿ ತೊಡಗಿದವರಾಗಿದ್ದರೆ.
4) ಭಾರತ ದೇಶದ ಸಾರ್ವಭೌಮ ಹಾಗೂ ಸುಭದ್ರತೆಗೆ ಧಕ್ಕೆ ತರುವ ಕಾರ್ಯದಲ್ಲಿ ಪ್ರವೃತ್ತರಾಗಿದ್ದರೆ.
5) ಭಾರತ ಸರ್ಕಾರದ ಅಥವಾ ಯಾವುದೇ ರಾಜ್ಯ ಸರ್ಕಾರದ ಸೇವೆಯಿಂದ ಉಚ್ಚಾಟನೆಗೊಂಡ ಪ್ರಸಂಗಗಳಲ್ಲಿ.
6) ನ್ಯಾಯಬಾಹಿರ ಕೃತ್ಯಗಳಲ್ಲಿ ತೊಡಗಿ ಅಪರಾಧಕ್ಕೆ ಒಳಗಾದ ಪ್ರಸಂಗಗಳಲ್ಲಿ.
7) ಒಬ್ಬ ಜೀವಂತ ಪತ್ನಿಗಿಂತ ಹೆಚ್ಚು ಮಂದಿ ಪತ್ನಿಯರನ್ನು ಹೊಂದಿರುವ ಪುರುಷ ಅಭ್ಯರ್ಥಿಯು ಮತ್ತು ಈಗಾಗಲೇ ಇನ್ನೊಬ್ಬ ಹೆಂಡತಿಯಿರುವ ವ್ಯಕ್ತಿಯನ್ನು ಮದುವೆಯಾಗಿರುವ ಮಹಿಳಾ ಅಭ್ಯರ್ಥಿಯು ಸರ್ಕಾರದಿಂದ ಪೂರ್ವಾನುಮತಿಯನ್ನು ಪಡೆಯದೆ ನೇಮಕಾತಿಗೆ ಅರ್ಹರಾಗುವುದಿಲ್ಲ.

12) ಅಭ್ಯರ್ಥಿಯು ಮತ್ತೊಬ್ಬ ವ್ಯಕ್ತಿಯಂತೆ ನಟಿಸಿ ವಂಚಿಸಿದ ಅಥವಾ ದಾಖಲೆಗಳನ್ನು ತಿದ್ದಿದ ಅಥವಾ ಸೃಷ್ಟಿಸಿದ ಅಥವಾ ಸರಿಯಿಲ್ಲದ ಅಥವಾ ಸುಳ್ಳು ಅಥವಾ ದೋಷಪೂರ್ಣ ವಿವರಗಳನ್ನು ನೀಡುವ ಅಥವಾ ಅವನ/ಅವಳ ನೇಮಕಾತಿಗಾಗಿ ಸಂಬಂಧಿಸಿದಂತೆ ಯಾವುದೇ ಇತರ ಅಕ್ರಮ ಅನುಚಿತ ವಿಧಾನಗಳನ್ನು ಅನುಸರಿಸಿದ ಕಾರಣದಿಂದಾಗಿ ತಪ್ಪಿತಸ್ಥನೆಂದು ಕಂಡು ಬಂದಲ್ಲಿ ಅವನ/ಅವಳ ಅಭ್ಯರ್ಥಿತನವನ್ನು ಯಾವುದೇ ಸೂಚನೆ ನೀಡದೆ ರದ್ದುಗೊಳಿಸಲಾಗುವುದು ಮತ್ತು ಅಂತಹವರನ್ನು ಕ್ರಿಮಿನಲ್ ಪ್ರಾಸಿಕ್ಯೂಷನ್‌ಗೆ ಮತ್ತು ಶಿಸ್ತು ಕ್ರಮಕ್ಕೆ ಒಳಪಡಿಸಲಾಗುವುದು.
13) ಅರ್ಜಿ ಜೊತೆಗೆ ದೃಢೀಕರಿಸಲ್ಪಟ್ಟ ಎಲ್ಲಾ ಅಂಕಪಟ್ಟಿಗಳು, ಮೀಸಲಾತಿ ಹಾಗೂ ಇತರೆ ಪತ್ರಗಳ ಪ್ರತಿಗಳನ್ನು ಲಗತ್ತಿಸಬೇಕು.
14) ಅರ್ಹತಾ ಪರೀಕ್ಷೆಗಳಲ್ಲಿ ಪಡೆದಿರುವ ಅಂಕಗಳ ಆಧಾರದ ಮೇಲೆ ಆಯ್ಕೆ ಮಾಡಿದ ಆಯ್ಕೆಪಟ್ಟಿಯಲ್ಲಿ ಅವನ/ ಅವಳ ಆಯ್ಕೆಯು ಖಾಯಂ ಆಗದ ಹೊರತು ನೇಮಕಾತಿಗಾಗಿ ಹಕ್ಕನ್ನು ಪಡೆದುಕೊಳ್ಳುವುದಿಲ್ಲ.
15) ಈ ನೇಮಕಾತಿಯು, ಮತ್ತು ಈ ಅಧಿಸೂಚನೆಯಲ್ಲಿ ತಿಳಿಸಿರುವ ಆದೇಶಗಳು, ಜ್ಞಾಪನಗಳು, ಸುತ್ತೋಲೆಗಳು ಕಾಲದಿಂದ ಕಾಲಕ್ಕೆ ಹೊರಡಿಸಿರುವ ಆದೇಶಗಳು ಮತ್ತು ತಿದ್ದುಪಡಿಗೆ ಒಳಪಟ್ಟಿರುತ್ತದೆ.
16) **ಅಭ್ಯರ್ಥಿಗಳು ಅರ್ಜಿ ಸಲ್ಲಿಸುವ ಸಮಯದಲ್ಲಿ ಅರ್ಜಿಯೊಂದಿಗೆ ವಿದ್ಯಾರ್ಹತೆಗಳ ಎಲ್ಲಾ ವರ್ಷಗಳ, ಎಲ್ಲಾ ಪ್ರಯತ್ನಗಳ ಅಂಕಪಟ್ಟಿಗಳು, ಹಾಗೂ ಆ ಪರೀಕ್ಷೆಗಳ ತೇರ್ಗಡೆ ಪ್ರಮಾಣ ಪತ್ರಗಳು, ವಯಸ್ಸಿನ ದೃಢೀಕರಣದ ಬಗ್ಗೆ ಎಸ್.ಎಸ್.ಎಲ್.ಸಿ ಅಂಕಪಟ್ಟಿ, ಮೀಸಲಾತಿ ಪ್ರಮಾಣ ಪತ್ರಗಳು ಅರೆಕಾಲಿಕ, ಗೌರವ ಶಿಕ್ಷಕ, ಜನಗಣತಿ ಸಂಸ್ಥೆಯಲ್ಲಿ ಸೇವೆ ಸಲ್ಲಿಸುತ್ತಿರುವ/ ಸಲ್ಲಿಸಿರುವ ಬಗ್ಗೆ ಸೇವಾ ದೃಢೀಕರಣ ಪ್ರಮಾಣ ಪತ್ರಗಳ ಪ್ರತಿಗಳನ್ನು (ನಮೂನೆಗಳ ಮಾದರಿಯನ್ನು ಅರ್ಜಿ–ಸಹಿತ–ಮಾಹಿತಿ ಪುಸ್ತಕದಲ್ಲಿ ನೀಡಲಾಗಿದೆ) ಅಭ್ಯರ್ಥಿಗಳಿಗೆ ಅನ್ವಯಿಸುವ ಅವಶ್ಯಕತೆಗೆ ಅನುಗುಣವಾಗಿ ತಪ್ಪದೇ ಲಗತ್ತಿಸುವುದು. ಈ ಲಗತ್ತುಗಳನ್ನು ಅರ್ಜಿ ಸ್ವೀಕರಿಸಲು ನಿಗಧಿಪಡಿಸಿರುವ ಕೊನೆಯ ದಿನಾಂಕ ಮತ್ತು ಸಮಯದೊಳಗೆ ಅರ್ಜಿ ಜೊತೆಯಲ್ಲಿ ತಪ್ಪದೇ ಲಗತ್ತಿಸಿರಬೇಕು. ಇವುಗಳನ್ನು ಅರ್ಜಿ ಜೊತೆ ಸಲ್ಲಿಸಲು ಸಾಧ್ಯವಾಗಲಿಲ್ಲವೆಂದು ತಿಳಿಸಿ, ತಾತ್ಕಾಲಿಕ ಪಟ್ಟಿ ಪ್ರಕಟಿಸಿದ ನಂತರ ಆಕ್ಷೇಪಣೆಯೊಂದಿಗೆ ಸಲ್ಲಿಸಲು ಅವಕಾಶವಿಲ್ಲ. ಅಂತಹ ಆಕ್ಷೇಪಣೆಗಳನ್ನು ತಿರಸ್ಕರಿಸಲಾಗುವುದು.**
17) ಹೆಚ್ಚಿನ ಮಾಹಿತಿಗಾಗಿ ಮಾಹಿತಿ ಪುಸ್ತಕವನ್ನು ಅವಲೋಕಿಸಬಹುದು, ಅಥವಾ ಆಯ್ಕೆಪ್ರಾಧಿಕಾರಿಗಳನ್ನು ಅಥವಾ ಸಂಬಂಧಿಸಿದ ಜಿಲ್ಲಾ ಉಪನಿರ್ದೇಶಕರು (ಆಡಳಿತ) ರವರನ್ನು ಸಂಪರ್ಕಿಸಬಹುದು.

**2009–10ನೇ ಸಾಲಿನಲ್ಲಿ ನೇಮಕಾತಿಗಾಗಿ ಪ್ರೌಢ ಶಾಲಾ ಸಂಗೀತ ಶಿಕ್ಷಕ ಗ್ರೇಡ್–2 (ಹಾಡುಗಾರಿಕೆ) ಜಿಲ್ಲಾವಾರು ಹುದ್ದೆಗಳ ಸಂಖ್ಯೆ**

| ಕ್ರ. ಸಂ. | ಜಿಲ್ಲೆ | ಹುದ್ದೆಗಳ ಸಂಖ್ಯೆ |
|---|---|---|
| 1 | ಬಳ್ಳಾರಿ | 14 |
| 2 | ಬೀದರ್ | 08 |
| 3 | ಗುಲ್ಬರ್ಗಾ | 13 |
| 4 | ಕೊಪ್ಪಳ | 01 |
| 5 | ರಾಯಚೂರು | 10 |
| 6 | ಯಾದಗೀರ | 04 |
| | ಒಟ್ಟು | 50 |

**ವೈ.ಟಿ. ಗುರುಮೂರ್ತಿ**
ಆಯ್ಕೆ ಪ್ರಾಧಿಕಾರಿ ಹಾಗೂ ವಿಭಾಗೀಯ ಕಾರ್ಯದರ್ಶಿಗಳು
ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ ಮತ್ತು
ಪದನಿಮಿತ್ತ ಸಹ ನಿರ್ದೇಶಕರು, ಸಾ.ಶಿ.ಇ. ಆಯುಕ್ತಾಲಯ, ಗುಲ್ಬರ್ಗಾ.

**ಅನುಬಂಧ**

**ಪ್ರಕಟಿತ ಹುದ್ದೆಗಳ ವರ್ಗೀಕರಣ**

| ಜಿಲ್ಲೆ | ವಿಷಯ | ಪ್ರಕಟಿತ ಹುದ್ದೆಗಳು | | ಪ.ಜಾ | ಪ.ಪಂ | ಪ್ರ–1 | 2ಎ | 2ಬಿ | 3ಎ | 3ಬಿ | ಸಾ.ಅ | ಒಟ್ಟು |
|---|---|---|---|---|---|---|---|---|---|---|---|---|
| **ಬಳ್ಳಾರಿ** | **ಸಂಗೀತ ಶಿಕ್ಷಕರು** | **14** | **ಇತರೆ** | 01 | 01 | 01 | 01 | 01 | – | – | 02 | **07** |
| | | | ಗ್ರಾಮೀಣ | – | – | – | – | – | – | – | 02 | **02** |
| | | | ಕ.ಮಾ.ಅ. | – | – | – | – | – | – | – | – | – |
| | | | ಯೋ.ಅ. | – | – | – | – | – | – | – | – | – |
| | | | ಮಾ.ಸೈ. | – | – | – | – | – | – | – | – | – |
| | | | ಅಂ.ವಿ. | – | – | – | – | – | – | – | 01 | **01** |
| | | | ಮ.ಅ. | 01 | – | – | 01 | – | – | – | 02 | **04** |
| | | | **ಒಟ್ಟು** | 02 | 01 | 01 | 02 | 01 | – | – | 07 | **14** |

ಸಹಿ/–
ನೇಮಕಾತಿ ಪ್ರಾಧಿಕಾರಿಗಳು/ಉಪನಿರ್ದೇಶಕರು
(ಆಡಳಿತ) ಸಾರ್ವಜನಿಕ ಶಿಕ್ಷಣ ಇಲಾಖೆ, ಬಳ್ಳಾರಿ ಜಿಲ್ಲೆ

| ಜಿಲ್ಲೆ | ವಿಷಯ | ಪ್ರಕಟಿತ ಹುದ್ದೆಗಳು | | ಪ.ಜಾ | ಪ.ಪಂ | ಪ್ರ–1 | 2ಎ | 2ಬಿ | 3ಎ | 3ಬಿ | ಸಾ.ಅ | ಒಟ್ಟು |
|---|---|---|---|---|---|---|---|---|---|---|---|---|
| **ಬೀದರ** | **ಸಂಗೀತ ಶಿಕ್ಷಕರು** | **08** | **ಇತರೆ** | 01 | 01 | 01 | 01 | – | – | – | 01 | **05** |
| | | | ಗ್ರಾಮೀಣ | – | – | – | – | – | – | – | 01 | **01** |
| | | | ಕ.ಮಾ.ಅ. | – | – | – | – | – | – | – | – | – |
| | | | ಯೋ.ಅ. | – | – | – | – | – | – | – | – | – |
| | | | ಮಾ.ಸೈ. | – | – | – | – | – | – | – | – | – |
| | | | ಅಂ.ವಿ. | – | – | – | – | – | – | – | 01 | **01** |
| | | | ಮ.ಅ. | – | – | – | – | – | – | – | 01 | **01** |
| | | | **ಒಟ್ಟು** | 01 | 01 | 01 | 01 | – | – | – | 04 | **08** |

ಸಹಿ/–
ನೇಮಕಾತಿ ಪ್ರಾಧಿಕಾರಿಗಳು/ಉಪನಿರ್ದೇಶಕರು
(ಆಡಳಿತ) ಸಾರ್ವಜನಿಕ ಶಿಕ್ಷಣ ಇಲಾಖೆ, ಬೀದರ ಜಿಲ್ಲೆ

**ಪ್ರಕಟಿತ ಹುದ್ದೆಗಳ ವರ್ಗೀಕರಣ**

| ಜಿಲ್ಲೆ | ವಿಷಯ | ಪ್ರಕಟಿತ ಹುದ್ದೆಗಳು | | ಪ.ಜಾ | ಪ.ಪಂ | ಪ್ರ–1 | 2ಎ | 2ಬಿ | 3ಎ | 3ಬಿ | ಸಾ.ಅ | ಒಟ್ಟು |
|---|---|---|---|---|---|---|---|---|---|---|---|---|
| **ಗುಲಬರ್ಗಾ** | **ಸಂಗೀತ ಶಿಕ್ಷಕರು** | **13** | **ಇತರೆ** | 01 | 01 | 01 | 01 | 01 | – | – | 01 | **06** |
| | | | ಗ್ರಾಮೀಣ | – | – | – | – | – | – | – | 02 | **02** |
| | | | ಕ.ಮಾ.ಅ. | – | – | – | – | – | – | – | – | – |
| | | | ಯೋ.ಅ. | – | – | – | – | – | – | – | – | – |
| | | | ಮಾ.ಸೈ. | – | – | – | – | – | – | – | – | – |
| | | | ಅಂ.ವಿ. | – | – | – | – | – | – | – | 01 | **01** |
| | | | ಮ.ಅ. | 01 | – | – | 01 | – | – | – | 02 | **04** |
| | | | **ಒಟ್ಟು** | 02 | 01 | 01 | 02 | 01 | – | – | 06 | **13** |

ಸಹಿ/–
ನೇಮಕಾತಿ ಪ್ರಾಧಿಕಾರಿಗಳು/ಉಪನಿರ್ದೇಶಕರು
(ಆಡಳಿತ) ಸಾರ್ವಜನಿಕ ಶಿಕ್ಷಣ ಇಲಾಖೆ
ಗುಲಬರ್ಗಾ ಜಿಲ್ಲೆ

| ಜಿಲ್ಲೆ | ವಿಷಯ | ಪ್ರಕಟಿತ ಹುದ್ದೆಗಳು | | ಪ.ಜಾ | ಪ.ಪಂ | ಪ್ರ–1 | 2ಎ | 2ಬಿ | 3ಎ | 3ಬಿ | ಸಾ.ಅ | ಒಟ್ಟು |
|---|---|---|---|---|---|---|---|---|---|---|---|---|
| ಕೊಪ್ಪಳ | ಸಂಗೀತ ಶಿಕ್ಷಕರು | 01 | **ಇತರೆ** | 01 | – | – | – | – | – | – | – | **01** |
| | | | ಗ್ರಾಮೀಣ | – | – | – | – | – | – | – | – | – |
| | | | ಕ.ಮಾ.ಅ. | – | – | – | – | – | – | – | – | – |
| | | | ಯೋ.ಅ. | – | – | – | – | – | – | – | – | – |
| | | | ಮಾ.ಸೈ. | – | – | – | – | – | – | – | – | – |
| | | | ಅಂ.ವಿ. | – | – | – | – | – | – | – | – | – |
| | | | ಮ.ಅ. | – | – | – | – | – | – | – | – | – |
| | | | **ಒಟ್ಟು** | 01 | – | – | – | – | – | – | – | **01** |

ಸಹಿ/–
ನೇಮಕಾತಿ ಪ್ರಾಧಿಕಾರಿಗಳು/ಉಪನಿರ್ದೇಶಕರು
(ಆಡಳಿತ) ಸಾರ್ವಜನಿಕ ಶಿಕ್ಷಣ ಇಲಾಖೆ, ಕೊಪ್ಪಳ ಜಿಲ್ಲೆ

**ಪ್ರಕಟಿತ ಹುದ್ದೆಗಳ ವರ್ಗೀಕರಣ**

| ಜಿಲ್ಲೆ | ವಿಷಯ | ಪ್ರಕಟಿತ ಹುದ್ದೆಗಳು | | ಪ.ಜಾ | ಪ.ಪಂ | ಪ್ರ–1 | 2ಎ | 2ಬಿ | 3ಎ | 3ಬಿ | ಸಾ.ಅ | ಒಟ್ಟು |
|---|---|---|---|---|---|---|---|---|---|---|---|---|
| ರಾಯಚೂರು | ಸಂಗೀತ ಶಿಕ್ಷಕರು | 10 | **ಇತರೆ** | 01 | 01 | 01 | 01 | – | – | – | 01 | **05** |
| | | | ಗ್ರಾಮೀಣ | – | – | – | – | – | – | – | 01 | **01** |
| | | | ಕ.ಮಾ.ಅ. | – | – | – | – | – | – | – | – | – |
| | | | ಯೋ.ಅ. | – | – | – | – | – | – | – | – | – |
| | | | ಮಾ.ಸೈ. | – | – | – | – | – | – | – | – | – |
| | | | ಅಂ.ವಿ. | – | – | – | – | – | – | – | 01 | **01** |
| | | | ಮ.ಅ. | 01 | – | – | – | – | – | – | 02 | **03** |
| | | | **ಒಟ್ಟು** | 02 | 01 | 01 | 01 | – | – | – | 05 | **10** |

ಸಹಿ/–
ನೇಮಕಾತಿ ಪ್ರಾಧಿಕಾರಿಗಳು/ಉಪನಿರ್ದೇಶಕರು
(ಆಡಳಿತ) ಸಾರ್ವಜನಿಕ ಶಿಕ್ಷಣ ಇಲಾಖೆ, ರಾಯಚೂರು ಜಿಲ್ಲೆ

| ಜಿಲ್ಲೆ | ವಿಷಯ | ಪ್ರಕಟಿತ ಹುದ್ದೆಗಳು | | ಪ.ಜಾ | ಪ.ಪಂ | ಪ್ರ–1 | 2ಎ | 2ಬಿ | 3ಎ | 3ಬಿ | ಸಾ.ಅ | ಒಟ್ಟು |
|---|---|---|---|---|---|---|---|---|---|---|---|---|
| ಯಾದಗಿರ | ಸಂಗೀತ ಶಿಕ್ಷಕರು | 04 | **ಇತರೆ** | 01 | 01 | – | – | – | – | – | 01 | **03** |
| | | | ಗ್ರಾಮೀಣ | – | – | – | – | – | – | – | – | – |
| | | | ಕ.ಮಾ.ಅ. | – | – | – | – | – | – | – | – | – |
| | | | ಯೋ.ಅ. | – | – | – | – | – | – | – | – | – |
| | | | ಮಾ.ಸೈ. | – | – | – | – | – | – | – | – | – |
| | | | ಅಂ.ವಿ. | – | – | – | – | – | – | – | – | – |
| | | | ಮ.ಅ. | – | – | – | – | – | – | – | 01 | **01** |
| | | | **ಒಟ್ಟು** | 01 | 01 | – | – | – | – | – | 02 | **04** |

ಸಹಿ/–
ನೇಮಕಾತಿ ಪ್ರಾಧಿಕಾರಿಗಳು/ಉಪನಿರ್ದೇಶಕರು
(ಆಡಳಿತ) ಸಾರ್ವಜನಿಕ ಶಿಕ್ಷಣ ಇಲಾಖೆ
ಯಾದಗೀರ ಶೈಕ್ಷಣಿಕ ಜಿಲ್ಲೆ

# ವಿಶೇಷ ಪತ್ರಿಕೆ

| ಭಾಗ – V | ಬೆಂಗಳೂರು, ಸೋಮವಾರ, ಮೇ ೧೮, ೨೦೦೯ (ವೈಶಾಖ ೨೮, ಶಕ ವರ್ಷ ೧೯೩೧) | ನಂ. ೩೧೩ |
| --- | --- | --- |

**ಸಾರ್ವಜನಿಕ ಶಿಕ್ಷಣ ಇಲಾಖೆ**

**ಆಯ್ಕೆ ಪ್ರಾಧಿಕಾರಿ ಹಾಗೂ ವಿಭಾಗೀಯ ಕಾರ್ಯದರ್ಶಿಗಳು, ಸಹ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ವಿಭಾಗ, ಆಯುಕ್ತರ ಕಛೇರಿ, ನೃಪತುಂಗ ರಸ್ತೆ, ಬೆಂಗಳೂರು-560 001 ಇವರ ಕಾರ್ಯಾಲಯ**

**ನೇಮಕಾತಿ ಅಧಿಸೂಚನೆ**

**ಸಂಖ್ಯೆ: ಆ-1/ಪ್ರೌಶಾಶಿ/ನೇಮಕ-01/2009-10, ದಿನಾಂಕ: 18ನೇ ಮೇ, 2009**

**(ಅರ್ಜಿ ಸ್ವೀಕರಿಸಲು ಕೊನೆಯ ದಿನಾಂಕ: 08-07-2009)**

**ವಿಷಯ :-** 2009-10ನೇ ಸಾಲಿನಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ವಿಭಾಗ, ಮಟ್ಟದಲ್ಲಿ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯ ಮೂಲಕ ಪ್ರೌಢ ಶಾಲಾ ಸಹಾಯಕ ಶಿಕ್ಷಕರು (ಗ್ರೇಡ್-2) ಹಾಗೂ ದೈಹಿಕ ಶಿಕ್ಷಣ ಶಿಕ್ಷಕರು (ಗ್ರೇಡ್-1) ವೃಂದದ ಶಿಕ್ಷಕರನ್ನು ನೇರ ನೇಮಕಾತಿ ಮೂಲಕ ಆಯ್ಕೆ ಮಾಡುವ ಕುರಿತು.

**ಉಲ್ಲೇಖ :-**

1) ದಿನಾಂಕ 22.02.1967, 21.10.1991, ಮತ್ತು 24.06.2003ರ ಇಲಾಖಾ ನೇಮಕಾತಿ ನಿಯಮಗಳು.
2) ಸರ್ಕಾರದ ಆದೇಶ ಸಂಖ್ಯೆ: ಸಿ.ಆ.ಸು.ಇ 08 ಸಹಿಮ 95, ದಿನಾಂಕ: 20.06.1995 (ಅನುಬಂಧ-1 ಮತ್ತು 2).
3) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 28 ಸೇನೇನಿ 95, ದಿ. 19.8.95.
4) ಸರ್ಕಾರದ ಆದೇಶ ಸಂಖ್ಯೆ: ಡಿಪಿಎಆರ್ 34 ಎಸ್‌ಆರ್‌ಆರ್ 95, ದಿ. 06.03.1996.
5) ಸರ್ಕಾರದ ಆದೇಶ ಸಂಖ್ಯೆ: ಇಡಿ 93 ಎಸ್‌ಎಲ್‌ಬಿ 97, ದಿ. 31.01.97.
6) ಸರ್ಕಾರದ ಆದೇಶ ಸಂಖ್ಯೆ: ಇಡಿ 190 ಎಸ್‌ಎಲ್‌ಬಿ 97, ದಿ. 26.08.97.
7) ಸರ್ಕಾರದ ಅಧಿಸೂಚನೆ ಸಂಖ್ಯೆ: ಎಸ್.ಡಬ್ಲ್ಯೂಡಿ 132 ಎಸ್‌ಎಡಿ 97, ದಿ. 08.02.2000.
8) ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 23 ಎಸ್‌ಆರ್‌ಆರ್ 99, ದಿ. 23.11.2000.
9) ಸರ್ಕಾರದ ಸುತ್ತೋಲೆ ಸಂಖ್ಯೆ: ಸಿಆಸುಇ 44 ಸೇನೇನಿ 2001, ದಿ. 27.07.2001.
10) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 97 ಸೇನೇನಿ 2002, ದಿ. 22.11.2002.
11) ಸರ್ಕಾರದ ಪತ್ರ ಸಂಖ್ಯೆ: ಇಡಿ 174 ಎಸ್‌ಎಲ್‌ಬಿ 2002, ದಿ. 26.11.2002.
12) ಸರ್ಕಾರದ ಅಧಿಸೂಚನೆ ಸಂಖ್ಯೆ: ಎಸ್‌ಡಬ್ಲ್ಯೂಡಿ 126 ಬಿಸಿಎ 2002, ದಿ. 13.02.2003.
13) ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 59 ಎಸ್‌ಆರ್‌ಇ 2002, ದಿ. 24.06.2003.
14) ಸರ್ಕಾರದ ಆದೇಶ ಸಂಖ್ಯೆ ಇಡಿ 125 ಪಿಟಿಐ 2003, ದಿ. 16.08.2003.
15) ಸರ್ಕಾರದ ಆದೇಶ ಸಂಖ್ಯೆ: ಡಿಪಿಎಆರ್ 96 ಸೇನೇನಿ 2005 ಬೆಂಗಳೂರು, ದಿ. 10.8.2005.
16) ಸರ್ಕಾರದ ಆದೇಶ ಸಂಖ್ಯೆ: ಇಡಿ 82/ಎಸ್‌ಎಲ್‌ಬಿ/2003/ಪಾರ್ಟ್/ಬೆಂಗಳೂರು, ದಿನಾಂಕ: 17.06.2006.
17) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 33/ಎಸ್‌ಬಿಸಿ 81, ದಿನಾಂಕ: 01.09.1981.
18) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 30/ಸಹಿಮ 94, ದಿನಾಂಕ: 03.05.1994.
19) ಸರ್ಕಾರದ ಆದೇಶ ಸಂಖ್ಯೆ; ಸಿಆಸುಇ 53/ಸೇನೇನಿ 2007 ಬೆಂಗಳೂರು, ದಿ: 04.01.2008.
20) ಸರ್ಕಾರದ ಸುತ್ತೋಲೆ ಸಂಖ್ಯೆ: ಸಿಆಸುಇ/16/ಸೇನೇನಿ 2008 ಬೆಂಗಳೂರು ದಿ: 01.09.2008.
21) ಸರ್ಕಾರದ ಪತ್ರ ಸಂಖ್ಯೆ: ಇಡಿ/04/ಎಸ್‌ಟಿಬಿ/2009, ಬೆಂಗಳೂರು, ದಿ: 13.03.2009.
22) ಸರ್ಕಾರದ ಪತ್ರ ಸಂಖ್ಯೆ: ಇಡಿ/573/ಎಲ್‌ಬಿಪಿ/2008, ಬೆಂಗಳೂರು, ದಿ: 05.05.2009.
23) ಸರ್ಕಾರದ ಪತ್ರ ಸಂಖ್ಯೆ: ಇಡಿ/573/ಎಲ್‌ಬಿಪಿ/2008, ಬೆಂಗಳೂರು, ದಿ: 18.05.2009.

ಸಾರ್ವಜನಿಕ ಶಿಕ್ಷಣ ಇಲಾಖೆ ಬೆಂಗಳೂರು ವಿಭಾಗದ 11 ಶೈಕ್ಷಣಿಕ ಜಿಲ್ಲೆಗಳ (ಬೆಂಗಳೂರ ಉತ್ತರ, ಬೆಂಗಳೂರು ದಕ್ಷಿಣ, ಬೆಂಗಳೂರು ಗ್ರಾಮಾಂತರ, ಚಿತ್ರದುರ್ಗ, ದಾವಣಗೆರೆ, ಕೋಲಾರ, ಶಿವಮೊಗ್ಗ, ತುಮಕೂರು, ಚಿಕ್ಕಬಳ್ಳಾಪುರ, ಮಧುಗಿರಿ ಹಾಗೂ ರಾಮನಗರ) ಸರಕಾರಿ ಪ್ರೌಢ ಶಾಲೆ/ಸರಕಾರಿ ಪದವಿ ಪೂರ್ವ ಕಾಲೇಜುಗಳ ಪ್ರೌಢ ಶಾಲಾ ವಿಭಾಗಗಳಲ್ಲಿ ಖಾಲಿ ಇರುವ ಪ್ರೌಢ ಶಾಲಾ ಸಹಾಯಕ ಶಿಕ್ಷಕರ ಗ್ರೇಡ್-2 ವೃಂದದ ವಿವಿಧ ವಿಷಯ ಮತ್ತು ಬೋಧನಾ ಮಾಧ್ಯಮದ ಹುದ್ದೆಗಳಿಗೆ ಹಾಗೂ ದೈಹಿಕ ಶಿಕ್ಷಣ ಶಿಕ್ಷಕರು (ಗ್ರೇಡ್-1) ವೃಂದದ ಹುದ್ದೆಗಳಿಗೆ ಮತ್ತು 8ನೇ ತರಗತಿ ಹೊಂದಿರುವ ಉನ್ನತೀಕರಿಸಲಾದ ಸರಕಾರಿ ಹಿರಿಯ ಪ್ರಾಥಮಿಕ ಶಾಲೆಗಳಲ್ಲಿ

ಖಾಲಿ ಇರುವ ಪ್ರೌಢ ಶಾಲಾ ಸಹಾಯಕ ಶಿಕ್ಷಕರ (ಗ್ರೇಡ್–2) ವೃಂದದ ಭೌತ ವಿಜ್ಞಾನ ಶಿಕ್ಷಕರನ್ನು ವಿವಿಧ ಮಾಧ್ಯಮದ ಹುದ್ದೆಗಳಿಗೆ, ವಿಭಾಗ ಮಟ್ಟದಲ್ಲಿ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆ ಮೂಲಕ ಅಂದರೆ **"ದಿ ಕರ್ನಾಟಕ ಎಜುಕೇಷನ್ ಡಿಪಾರ್ಟ್‌ಮೆಂಟ್ ಸರ್ವೀಸಸ್ (ಡಿಪಾರ್ಟ್‌ಮೆಂಟ್ ಆಫ್ ಪಬ್ಲಿಕ್ ಇನ್‌ಸ್ಟ್ರಕ್ಷನ್) (ರಿಕ್ರೂಟ್‌ಮೆಂಟ್) (ಅಮೆಂಡ್‌ಮೆಂಟ್) ರೂಲ್ಸ್ 2002"** ನಿಯಮಗಳನ್ವಯ ಆಯ್ಕೆ ಮಾಡಲು ಈ ನೇಮಕಾತಿ ಅಧಿಸೂಚನೆ ಹೊರಡಿಸಿದೆ. **ಅಂದರೆ ನೇಮಕಾತಿ ಅಧಿಸೂಚನೆ ದಿನಾಂಕದಂದು ಅರ್ಹರಾಗಿರುವ** ಅಭ್ಯರ್ಥಿಗಳಿಂದ ನಿಗಧಿಪಡಿಸಿರುವ ಅರ್ಜಿ ನಮೂನೆಯಲ್ಲಿ ಅರ್ಜಿಗಳನ್ನು ಕರೆಯಲಾಗಿದೆ. **ಇತರೆ ಯಾವುದೇ ನಮೂನೆಯಲ್ಲಿ ಸಲ್ಲಿಸುವ ಅರ್ಜಿಗಳನ್ನು ತಿರಸ್ಕರಿಸಲಾಗುವುದು.**

**ಟಿಪ್ಪಣಿ: ಪ್ರಕಟಿಸಲಾಗಿರುವ ಹುದ್ದೆಗಳ ಸಂಖ್ಯೆ ಮತ್ತು ವರ್ಗೀಕರಣವು ಅನಿವಾರ್ಯ ಸಂದರ್ಭಗಳಲ್ಲಿ ಬದಲಾವಣೆಗೆ ಒಳಪಟ್ಟಿರುತ್ತದೆ.**

**1) ಆಯ್ಕೆಗಾಗಿ ಪ್ರಕಟಿಸಿರುವ ಹುದ್ದೆಗಳು:–**

(ಎ) **ಪ್ರೌಢ ಶಾಲಾ ಸಹಾಯಕ ಶಿಕ್ಷಕ ಗ್ರೇಡ್–2 ವೃಂದದ ಕೆಳಕಂಡ ವಿಷಯಗಳ ಹುದ್ದೆಗಳು:–**

**i)** ಕಲಾ ಶಿಕ್ಷಕರು (ಕನ್ನಡ ಮಾಧ್ಯಮ)

**ii)** ಭೌತ ವಿಜ್ಞಾನ (ಕನ್ನಡ ಮಾಧ್ಯಮ)

**iii)** ಜೀವ ವಿಜ್ಞಾನ (ಕನ್ನಡ ಮಾಧ್ಯಮ)

**iv)** ಭಾಷಾ ಶಿಕ್ಷಕರು (ಕನ್ನಡ, ಆಂಗ್ಲ ಹಿಂದಿ, ಉರ್ದು ಮತ್ತು ಸಂಸ್ಕೃತ)

(ಬಿ) **ದೈಹಿಕ ಶಿಕ್ಷಣ ಶಿಕ್ಷಕ ಗ್ರೇಡ್–1 ಹುದ್ದೆಗಳು**

**2) ಆಯ್ಕೆಗೆ ಅರ್ಹತೆ:–**

**ನೇಮಕಾತಿ ಅಧಿಸೂಚನೆ ದಿನಾಂಕದಂದು** ಪ್ರೌಢ ಶಾಲಾ ಸಹಾಯಕ ಶಿಕ್ಷಕ ಗ್ರೇಡ್–2 ವೃಂದದ, ವಿವಿಧ ವಿಷಯಗಳ ಮತ್ತು ಬೋಧನಾ ಮಾಧ್ಯಮದ ಮತ್ತು ದೈಹಿಕ ಶಿಕ್ಷಣ ಶಿಕ್ಷಕ ಗ್ರೇಡ್–1 ಹುದ್ದೆಗಳಿಗೆ ಆಯ್ಕೆಗಾಗಿ ಅರ್ಹತೆ ಪಡೆಯಲು ಅಭ್ಯರ್ಥಿಗಳು ಆಯಾ ವಿಷಯ ಮತ್ತು ಬೋಧನಾ ಮಾಧ್ಯಮದ ಹುದ್ದೆಗಳಿಗೆ **"ದಿ ಕರ್ನಾಟಕ ಎಜುಕೇಷನ್ ಡಿಪಾರ್ಟ್‌ಮೆಂಟ್ ಸರ್ವೀಸಸ್ (ಡಿಪಾರ್ಟ್‌ಮೆಂಟ್ ಆಫ್ ಪಬ್ಲಿಕ್ ಇನ್‌ಸ್ಟ್ರಕ್ಷನ್) (ರಿಕ್ರೂಟ್‌ಮೆಂಟ್) (ಅಮೆಂಡ್‌ಮೆಂಟ್) ರೂಲ್ಸ್ 2002"** ನಿಯಮಗಳಲ್ಲಿ ನಿಗಧಿ ಪಡಿಸಿರುವ ವಿದ್ಯಾರ್ಹತೆಗಳನ್ನು ಹೊಂದಿರಬೇಕು. ಮತ್ತು ನಿಗದಿಪಡಿಸಲಾದ ವಯೋಮಿತಿಯೊಳಗಿದ್ದು, ಆಯ್ಕೆ ಪ್ರಾಧಿಕಾರಿಯು ನಡೆಸುವ ವಿಭಾಗ ಮಟ್ಟದ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಗೆ ಕಡ್ಡಾಯವಾಗಿ ಹಾಜರಾಗಬೇಕು. **ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಗೆ ಹಾಜರಾದ ಮಾತ್ರಕ್ಕೆ ಅಭ್ಯರ್ಥಿಯು ಆಯ್ಕೆಗೆ ಅರ್ಹತೆ ಪಡೆಯುವುದಿಲ್ಲ. ಅಭ್ಯರ್ಥಿಯು ಇದರ ಜೊತೆಗೆ ನೇಮಕಾತಿ ನಿಯಮಗಳಲ್ಲಿ ನಿಗಧಿ ಪಡಿಸಿರುವ ವಿದ್ಯಾರ್ಹತೆಗಳನ್ನು ಹೊಂದಿದ್ದು ಮತ್ತು ನಿಗಧಿತ ವಯೋಮಿತಿಯೊಳಗೆ ಇದ್ದಲ್ಲಿ ಮಾತ್ರ ಆಯ್ಕೆಗೆ ಪರಿಗಣಿಸಲಾಗುವುದು.**

**3) ಆಯ್ಕೆ ಮತ್ತು ನೇಮಕಾತಿ:–**

ಅರ್ಹ ಅಭ್ಯರ್ಥಿಗಳನ್ನು ಆಯ್ಕೆ ಪ್ರಾಧಿಕಾರಿಗಳಾದ ವಿಭಾಗೀಯ ಕಾರ್ಯದರ್ಶಿಗಳು, ಸಹ ನಿರ್ದೇಶಕರು ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ವಿಭಾಗ, ಬೆಂಗಳೂರು ರವರು **"ದಿ ಕರ್ನಾಟಕ ಎಜುಕೇಷನ್ ಡಿಪಾರ್ಟ್‌ಮೆಂಟ್ ಸರ್ವೀಸಸ್ (ಡಿಪಾರ್ಟ್‌ಮೆಂಟ್ ಆಫ್ ಪಬ್ಲಿಕ್ ಇನ್‌ಸ್ಟ್ರಕ್ಷನ್) (ರಿಕ್ರೂಟ್‌ಮೆಂಟ್) (ಅಮೆಂಡ್‌ಮೆಂಟ್) ರೂಲ್ಸ್ 2002"** ಹಾಗೂ ಸಂಬಂಧಿಸಿದ ಕಾಲದಿಂದ ಕಾಲಕ್ಕೆ ತಿದ್ದುಪಡಿಯಾದ ಪ್ರಚಲಿತ ಸೇವಾ ನಿಯಮಗಳನ್ವಯ ವಿಭಾಗೀಯ ಮಟ್ಟದಲ್ಲಿ ಆಯ್ಕೆ ಪ್ರಾಧಿಕಾರಿಯಾಗಿರುತ್ತಾರೆ. ಮತ್ತು ಸಂಬಂಧಿಸಿದ ಜಿಲ್ಲಾ ಉಪನಿರ್ದೇಶಕರು [ಆಡಳಿತ] ರವರು ನೇಮಕಾತಿ ಪ್ರಾಧಿಕಾರಿಯಾಗಿದ್ದು, ಜಿಲ್ಲಾ ಮಟ್ಟದಲ್ಲಿ ನೇಮಕಾತಿ ಆದೇಶ ನೀಡುತ್ತಾರೆ.

**4) ನಿಗಧಿತ ಅರ್ಜಿ ನಮೂನೆ ದೊರೆಯುವ ಸ್ಥಳ:–**

ನಿಗಧಿತ ಅರ್ಜಿ ನಮೂನೆಯನ್ನು ಆಯ್ಕೆಗಾಗಿ ಪ್ರಕಟಿಸಲಾಗಿರುವ ಮಾಹಿತಿ ಪುಸ್ತಕದಲ್ಲಿ ಲಗತ್ತಿಸಲಾಗಿದೆ. ಈ ಅರ್ಜಿ ನಮೂನೆ ಹಾಗೂ ಮಾಹಿತಿ ಪುಸ್ತಕವು ಎಲ್ಲಾ ವಿಷಯ ಹಾಗೂ ಮಾಧ್ಯಮದ ಹುದ್ದೆಗಳಿಗೆ ಒಂದೇ ಆಗಿರುತ್ತದೆ. ಹಾಗೂ ಈ ಪುಸ್ತಕವು ಜಿಲ್ಲೆಯ ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರ (ಆಡಳಿತ)ರವರ ಕಚೇರಿಗಳಲ್ಲಿ ದಿನಾಂಕ 08–06–2009 ರಿಂದ ಅರ್ಜಿ ಸಲ್ಲಿಸಲು ನಿಗದಿ ಪಡಿಸಿರುವ ಕೊನೆಯ ದಿನಾಂಕದವರೆಗೆ ಕಾರ್ಯಾಲಯದ ಎಲ್ಲಾ ಕೆಲಸದ ದಿನಗಳಲ್ಲಿ ಬೆಳಿಗ್ಗೆ 10–00 ರಿಂದ ಸಂಜೆ 5–30 ರವರೆಗೆ ದೊರೆಯುತ್ತದೆ. ಅರ್ಹ ಅಭ್ಯರ್ಥಿಗಳು ನಿಗದಿತ ಶುಲ್ಕವನ್ನು ಉಪನಿರ್ದೇಶಕರ ಕಚೇರಿಯಲ್ಲಿ ದೊರೆಯುವ ವಿಶೇಷ ಚಲನ್ ಮೂಲಕ **ವಿಶೇಷಾಧಿಕಾರಿ, ಕೇಂದ್ರೀಕೃತ ದಾಖಲಾತಿ ಘಟಕ, ಬೆಂಗಳೂರು ಇವರ ಹೆಸರಿನಲ್ಲಿ ಸ್ಟೇಟ್ ಬ್ಯಾಂಕ್ ಆಫ್ ಮೈಸೂರಿನ** ನಿಗದಿತ ಶಾಖೆಯಲ್ಲಿ ಹಣವನ್ನು ಪಾವತಿಸಿ, ಪಡೆದುಕೊಂಡ ಚಲನ್ ಪ್ರತಿಯನ್ನು ಉಪನಿರ್ದೇಶಕರ ಕಚೇರಿಯಲ್ಲಿ ಸಲ್ಲಿಸಿ ಮಾಹಿತಿ ಪುಸ್ತಕ ಸಹಿತ ಅರ್ಜಿ ನಮೂನೆಗಳನ್ನು ಪಡೆಯಬಹುದು.

**5) ಅರ್ಜಿ ನಮೂನೆ–ಸಹಿತ–ಮಾಹಿತಿ ಪುಸ್ತಕದ ಶುಲ್ಕ:–**

**1)** ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ ಮತ್ತು ಪ್ರವರ್ಗ–1ಕ್ಕೆ ಸೇರಿದ ಅಭ್ಯರ್ಥಿಗಳಿಗೆ **ರೂ. 150/–**

**2)** ಇತರೆ ಎಲ್ಲಾ ಅಭ್ಯರ್ಥಿಗಳಿಗೆ **ರೂ. 300/–**

**3)** ಸರ್ಕಾರದ ಆದೇಶ ಸಂಖ್ಯೆ: ಇಡಿ 04 ಎಸ್‌ಟಿಬಿ 2009, ದಿ. 13.3.2009ರ ಪ್ರಕಾರ ಅಂಗವಿಕಲ ಅಭ್ಯರ್ಥಿಗಳಿಗೆ ಅರ್ಜಿ ನಮೂನೆ ಸಹಿತ ಮಾಹಿತಿ ಪುಸ್ತಕದಿಂದ ಶುಲ್ಕ ವಿನಾಯಿತಿ ನೀಡಲಾಗಿದ್ದು, ವಿನಾಯಿತಿ ಪಡೆಯುವ ಅಂಗವಿಕಲ ಅಭ್ಯರ್ಥಿಗಳು ಅರ್ಜಿ ಪಡೆಯುವ ಸಂದರ್ಭದಲ್ಲಿ ನಿಗದಿತ ನಮೂನೆಯ ಅಂಗವಿಕಲ ಪ್ರಮಾಣ ಪತ್ರವನ್ನು ಹಾಜರುಪಡಿಸಬೇಕು.

**6) ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ, ವಿಧಾನ ಮತ್ತು ವಿಳಾಸ:–**

**i)** ಅರ್ಹ ಅಭ್ಯರ್ಥಿಗಳು ನಿಗಧಿತ ಅರ್ಜಿ ನಮೂನೆಯಲ್ಲಿ ಮಾಹಿತಿಯನ್ನು ಭರ್ತಿಮಾಡಿ, ಸಹಿ ಮಾಡಿದ ನಂತರ ಅರ್ಜಿ ಸಲ್ಲಿಸಲು ನಿಗಧಿಪಡಿಸಿರುವ ಕೊನೆಯ ದಿನಾಂಕವಾದ 08–07–2009 ರಂದು ಸಾಯಂಕಾಲ 05–30 ಗಂಟೆಯೊಳಗೆ, ಅಥವಾ ಅದಕ್ಕೂ ಮುಂಚಿತವಾಗಿ ಆಯ್ಕೆ ಪ್ರಾಧಿಕಾರಿಯ ವಿಭಾಗದ ವ್ಯಾಪ್ತಿಯಲ್ಲಿ ಬರುವ ಸಾರ್ವಜನಿಕ ಶಿಕ್ಷಣ ಇಲಾಖೆಯ ಜಿಲ್ಲಾ ಉಪನಿರ್ದೇಶಕರು (ಆಡಳಿತ) ರವರ ಕಚೇರಿಗೆ ಮೂರು ಪ್ರತಿಗಳನ್ನು (ಕೇಂದ್ರಿಕೃತ ದಾಖಲಾತಿ ಘಟಕದ ಮೂಲ ಒ.ಎಂ.ಆರ್., ಸಹ ನಿರ್ದೇಶಕರ ಪ್ರತಿ ಮತ್ತು ಉಪ ನಿರ್ದೇಶಕರ ಪ್ರತಿ) (ಅರ್ಜಿ ಖರೀದಿಸಿದ ಜಿಲ್ಲೆಯಲ್ಲಿ) ಖುದ್ದಾಗಿ ಸಲ್ಲಿಸಿ ಸ್ವೀಕೃತಿ ಮತ್ತು ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯ ಪ್ರವೇಶ ಪತ್ರವನ್ನು ಅಭ್ಯರ್ಥಿಯು ಖುದ್ದಾಗಿ ಪಡೆಯತಕ್ಕದ್ದು. **ನಿಗಧಿಪಡಿಸಿದ ಕೊನೆಯ ದಿನಾಂಕದ ನಂತರ, ಯಾವುದೇ ಅರ್ಜಿಗಳನ್ನು ಯಾವುದೇ ಕಾರಣಕ್ಕೂ ಸ್ವೀಕರಿಸಲಾಗುವುದಿಲ್ಲ ಹಾಗೂ ಅಂಚೆಯ ಮುಖಾಂತರ ಕಳುಹಿಸಿದ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.**

ii) ಅಭ್ಯರ್ಥಿಯು ಅರ್ಜಿಯಲ್ಲಿ ನಮೂದಿಸಿರುವ ವಿವರಗಳಿಗೆ ಸಂಬಂಧಪಟ್ಟ ಜನ್ಮ ದಿನಾಂಕ, ಪದವಿ ಪರೀಕ್ಷೆಯ ಮತ್ತು ಬಿ.ಎಡ್ ಪದವಿ ಪರೀಕ್ಷೆಯ ಎಲ್ಲಾ ವರ್ಷಗಳ ಹಾಗೂ ಎಲ್ಲಾ ಪ್ರಯತ್ನಗಳ ಅಂಕಪಟ್ಟಿಗಳು ಮತ್ತು ತೇರ್ಗಡೆಹೊಂದಿದ ಪ್ರಮಾಣ ಪತ್ರಗಳು ಹಾಗೂ ಕ್ಲೇಮು ಮಾಡುತ್ತಿರುವ ಮೀಸಲಾತಿ ಗುಂಪು (ನೇರ ಹಾಗೂ ಸಮತಳ) ಪ್ರಮಾಣ ಪತ್ರಗಳನ್ನು ಅಭ್ಯರ್ಥಿಯು ಸ್ವಯಂ ದೃಢೀಕರಿಸಿ ಪ್ರತಿಗಳನ್ನು ಅರ್ಜಿಯೊಂದಿಗೆ ಲಗತ್ತಿಸಿ, ಲಗತ್ತಿಸಲಾದ ದಾಖಲೆಗಳ ವಿವರವನ್ನು ಸ್ವೀಕೃತಿ ಪತ್ರದಲ್ಲಿ ಸ್ಪಷ್ಟವಾಗಿ ನಮೂದಿಸಬೇಕು.

iii) ಅರ್ಜಿ ನಮೂನೆಯ ಮೂಲ ಒ.ಎಂ.ಆರ್. ಪ್ರತಿಯನ್ನು ಕೇಂದ್ರಿಕೃತ ದಾಖಲಾತಿ ಘಟಕ, ಬೆಂಗಳೂರಿಗೆ ರವಾನಿಸಲಾಗುತಿದ್ದು, ಸದರಿ ಮೂಲ ಒ.ಎಂ.ಆರ್. ಪ್ರತಿಯಲ್ಲಿ ಅಭ್ಯರ್ಥಿಗಳು ಎಲ್ಲಾ ಅಂಕಣಗಳನ್ನು ಭರ್ತಿ ಮಾಡಿದ ನಂತರ ಇದರ ಎರಡು ಜೆರಾಕ್ಸ್ ಪ್ರತಿಗಳನ್ನು ಪಡೆದು ಸಹ ನಿರ್ದೇಶಕರು ಹಾಗೂ ಉಪ ನಿರ್ದೇಶಕರುಗಳಿಗೆ ಅಗತ್ಯ ದಾಖಲೆಗಳ ಸ್ವಯಂ ದೃಢೀಕೃತ ಪ್ರತಿಗಳೊಂದಿಗೆ ಸಲ್ಲಿಸತಕ್ಕದ್ದು. ಮೂಲ ಒ.ಎಂ.ಆರ್. ಅರ್ಜಿ ನಮೂನೆಯಲ್ಲಿ ಮೀಸಲಾತಿ (ನೇರ ಹಾಗೂ ಸಮತಳ) ಅಂಕಣಗಳನ್ನು ಹಾಗೆಯೇ ಬಿಟ್ಟು ಸಹ ನಿರ್ದೇಶಕರು ಹಾಗೂ ಉಪನಿರ್ದೇಶಕರ ಪ್ರತಿಗಳೊಂದಿಗೆ ಮೀಸಲಾತಿ ಪ್ರಮಾಣ ಪತ್ರಗಳನ್ನು ಸಲ್ಲಿಸದ್ದರೂ ಅಂತಹ ಅಭ್ಯರ್ಥಿಗಳ ಮೀಸಲಾತಿ ಕೋರಿಕೆಯನ್ನು ಪರಿಗಣಿಸದೆ ತಿರಸ್ಕರಿಸಲಾಗುವುದು.

**ಅರ್ಜಿಯೊಂದಿಗೆ ಸಲ್ಲಿಸಬೇಕಾದ ತತ್ಸಬಂಧ ಸ್ವಯಂ ದೃಢೀಕೃತ ಹಾಗೂ ಸ್ಪಷ್ಟವಾಗಿರುವ ಜೆರಾಕ್ಸ್ ಪ್ರಮಾಣ ಪತ್ರಗಳ ವಿವರಗಳು ಈ ಕೆಳಕಂಡಂತೆ ಇರುತ್ತವೆ.**

1) ಎಸ್.ಎಸ್.ಎಲ್.ಸಿ. ಕ್ರೊಢೀಕೃತ ಅಂಕಪಟ್ಟಿ (ಜನ್ಮ ದಿನಾಂಕ ಹಾಗೂ ಅಧ್ಯಯನ ಮಾಡಿದ ಭಾಷೆಗಳ ವಿವರದೊಂದಿಗೆ)

2) ಪಿ.ಯು.ಸಿ. ಅಂಕಪಟ್ಟಿ (ಅಧ್ಯಯನ ಮಾಡಿದ ಭಾಷೆಗಳ ವಿವರದೊಂದಿಗೆ) **(ಹಿಂದಿ ಭಾಷಾ ಶಿಕ್ಷಕರಿಗೆ ಮಾತ್ರ)**

3) ಪಿ.ಯು.ಸಿ.ಯಲ್ಲಿ ಅಧ್ಯಯನ ಮಾಡಿದ ಮಾಧ್ಯಮದ ಪ್ರಮಾಣ ಪತ್ರ **(ಹಿಂದಿ ಭಾಷಾ ಶಿಕ್ಷಕರ ಹುದ್ದೆಗೆ ಮಾತ್ರ)**

4) ಬಿ.ಎ / ಬಿ.ಎಸ್ಸಿ ಪದವಿಯ ಮೂರು ವರ್ಷದ ಎಲ್ಲಾ ಪ್ರಯತ್ನಗಳ ಅಂಕಪಟ್ಟಿಗಳು.

5) ಬಿ.ಎ. / ಬಿ.ಎಸ್ಸಿ ಪದವಿಯ ತೇರ್ಗಡೆ ಪ್ರಮಾಣ ಪತ್ರ.

6) ಪದವಿ ತತ್ಸಮಾನ ಪರೀಕ್ಷೆಯ ಎಲ್ಲಾ ವರ್ಷದ ಹಾಗೂ ಎಲ್ಲಾ ಪ್ರಯತ್ನಗಳ ಅಂಕಪಟ್ಟಿಗಳು. **(ಹಿಂದಿ ಭಾಷಾ ವಿಷಯದ ಅಭ್ಯರ್ಥಿಗಳಿಗೆ ಮಾತ್ರ)**

7) ಪದವಿ ತತ್ಸಮಾನ ಪರೀಕ್ಷೆಯ ತೇರ್ಗಡೆ ಪ್ರಮಾಣ ಪತ್ರ **(ಹಿಂದಿ ಭಾಷಾ ವಿಷಯದ ಅಭ್ಯರ್ಥಿಗಳಿಗೆ ಮಾತ್ರ)**

8) ಬಿ.ಎಡ್/ಬಿ.ಪಿ.ಎಡ್. ಪರೀಕ್ಷೆಯ ಅಂಕಪಟ್ಟಿ ಹಾಗೂ ತೇರ್ಗಡೆ ಪ್ರಮಾಣ ಪತ್ರಗಳು.

9) ಬಿ.ಎಡ್. ತತ್ಸಮಾನ ಪರೀಕ್ಷೆಯ ಅಂಕಪಟ್ಟಿ ಹಾಗೂ ತೇರ್ಗಡೆ ಪ್ರಮಾಣ ಪತ್ರಗಳು.

10) ಬಿ.ಎ. ಪದವಿಯಲ್ಲಿ ಸಂಬಂಧಿಸಿದ ಭಾಷೆ ಅಧ್ಯಯನ ಮಾಡದೆ, ಸದರಿ ಭಾಷೆಯಲ್ಲಿ ಸ್ನಾತಕೋತ್ತರ ಪದವಿ ಪಡೆದು, ಭಾಷಾ ಶಿಕ್ಷಕರ ಹುದ್ದೆಗೆ ಅರ್ಜಿ ಸಲ್ಲಿಸಿದಲ್ಲಿ ಸಂಬಂಧಿಸಿದ ಸ್ನಾತಕೋತ್ತರ ಪದವಿಯ ಅಂಕಪಟ್ಟಿಗಳು ಹಾಗೂ ತೇರ್ಗಡೆ ಪ್ರಮಾಣ ಪತ್ರಗಳು.

11) ಆಂಗ್ಲ ಭಾಷಾ ಶಿಕ್ಷಕರ ಹುದ್ದೆಗೆ ಸಂಬಂಧಿಸಿದಂತೆ ನಿಗದಿಪಡಿಸಲಾದ ರೀಜನಲ್ ಇನ್ಸಟ್ಯೂಟ್ ಆಫ್ ಇಂಗ್ಲೀಷ್ ಸೌತ್ ಇಂಡಿಯಾರವರಿಂದ ಪಡೆದುಕೊಂಡಿರುವ ಸ್ನಾತಕೋತ್ತರ ಡಿಪ್ಲೋಮಾದ ಅಂಕಪಟ್ಟಿಗಳು ಹಾಗೂ ತೇರ್ಗಡೆ ಪ್ರಮಾಣ ಪತ್ರಗಳು.

12) ಕನ್ನಡ ಪಂಡಿತ/ಸಂಸ್ಕೃತ ವಿದ್ವಾನ/ಉರ್ದು ಮುನಷಿ ಪರೀಕ್ಷೆಯ ಎಲ್ಲಾ ವರ್ಷದ ಹಾಗೂ ಎಲ್ಲಾ ಪ್ರಯತ್ನಗಳ ಅಂಕಪಟ್ಟಿಗಳು ಹಾಗೂ ತೇರ್ಗಡೆ ಪ್ರಮಾಣ ಪತ್ರಗಳು.

13) ಕನ್ನಡ ಸರ್ಟಿಫಿಕೇಟ್ ಕೋರ್ಸಿನ ಅಂಕಪಟ್ಟಿ ಹಾಗೂ ತೇರ್ಗಡೆ ಪ್ರಮಾಣ ಪತ್ರಗಳು. (ಕನ್ನಡ ಸಾಹಿತ್ಯ ಪರಿಷತ್/ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ ಬೆಂಗಳೂರು) **(ಸಂಬಂಧಿಸಿದವರಿಗೆ ಮಾತ್ರ )**

14) ಅಂಗೀಕೃತ ವಿಶ್ವವಿದ್ಯಾನಿಲಯದಿಂದ ಸಂಬಂಧಿಸಿದ ಬೋಧನಾ ಮಾಧ್ಯಮದ ಭಾಷೆಯಲ್ಲಿ ಪಡೆದುಕೊಂಡಿರುವ ಡಿಪ್ಲೋಮಾ ಕೋರ್ಸಿನ ಅಂಕಪಟ್ಟಿ ಹಾಗೂ ತೇರ್ಗಡೆ ಪ್ರಮಾಣ ಪತ್ರ. **(ಸಂಬಂಧಿಸಿದವರಿಗೆ ಮಾತ್ರ )**

15) ಕೋರಿರುವ ಮೀಸಲಾತಿ (ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ / ಪ್ರವರ್ಗ-1 / 2ಎ / 2ಬಿ / 3ಎ / 3ಬಿ) ಪ್ರಮಾಣ ಪತ್ರ. **(ಸಂಬಂಧಿಸಿದವರಿಗೆ ಮಾತ್ರ )**

16) ಗ್ರಾಮೀಣ ಅಭ್ಯರ್ಥಿ ವ್ಯಾಸಂಗ ಪ್ರಮಾಣ ಪತ್ರ (ಸರಕಾರಿ ಆದೇಶ ದಿನಾಂಕ 10-08-2005 ರಲ್ಲಿ ನಿಗದಿಪಡಿಸಲಾದ ನಮೂನೆ-2ರಲ್ಲಿ ಮಾತ್ರ) (ಸಾಮಾನ್ಯ ಗುಂಪಿಗೆ ಸೇರಿದ ಅಭ್ಯರ್ಥಿ ನಮೂನೆ-2 ರ ಜೊತೆಗೆ ನಮೂನೆ-1ರಲ್ಲಿ ಸಂಬಂಧಿಸಿದ ತಹಸೀಲ್ದಾರರವರಿಂದ ಪಡೆದುಕೊಂಡಿರುವ ಪ್ರಮಾಣ ಪತ್ರವನ್ನು ಸಹ ಲಗತ್ತಿಸುವುದು) **(ಸಂಬಂಧಿಸಿದವರಿಗೆ ಮಾತ್ರ)**

17) ಕನ್ನಡ ಮಾಧ್ಯಮ ಅಭ್ಯರ್ಥಿ ವ್ಯಾಸಂಗ ಪ್ರಮಾಣ ಪತ್ರ. **( ಸಂಬಂಧಿಸಿದವರಿಗೆ ಮಾತ್ರ )**

18) ಯೋಜನೆಗಳಿಂದ ನಿರಾಶ್ರಿತರಾದ ಕುಟುಂಬದ ಅಭ್ಯರ್ಥಿ ಪ್ರಮಾಣ ಪತ್ರ. **( ಸಂಬಂಧಿಸಿದವರಿಗೆ ಮಾತ್ರ )**

19) ಅಂಗವಿಕಲ ಅಭ್ಯರ್ಥಿಯ ಪ್ರಮಾಣ ಪತ್ರ. **( ಸಂಬಂಧಿಸಿದವರಿಗೆ ಮಾತ್ರ )**

20) ಮಾಜಿ ಸೈನಿಕ / ಅವಲಂಬಿತರ ಪ್ರಮಾಣ ಪತ್ರ. (ಸೈನಿಕ ಸೇವೆಯಿಂದ ಬಿಡುಗಡೆ / ಮುಕ್ತಿ ಹೊಂದಿದ ಪುಸ್ತಿಕೆಯೊಂದಿಗೆ) **( ಸಂಬಂಧಿಸಿದವರಿಗೆ ಮಾತ್ರ )**

21) ಸರಕಾರಿ ಪ್ರೌಢ ಶಾಲೆಯಲ್ಲಿ ಸಂಬಂಧಿಸಿದ ವಿಷಯದಲ್ಲಿ ಸಕ್ಷಮ ಪ್ರಾಧಿಕಾರದಿಂದ ನೇಮಕಗೊಂಡು ಗೌರವ ಶಿಕ್ಷಕರಾಗಿ ಸೇವೆ ಸಲ್ಲಿಸಿದ ಬಗ್ಗೆ ಪ್ರಮಾಣ ಪತ್ರ. **(ಸಂಬಂಧಿಸಿದವರಿಗೆ ಮಾತ್ರ )**

22) ಸರಕಾರಿ ಪ್ರೌಢ ಶಾಲೆಯಲ್ಲಿ ಸಂಬಂಧಿಸಿದ ವಿಷಯದಲ್ಲಿ ಸಕ್ಷಮ ಪ್ರಾಧಿಕಾರದಿಂದ ನೇಮಕಗೊಂಡು ಅರೆ ಕಾಲಿಕ ಶಿಕ್ಷಕರಾಗಿ ಸೇವೆ ಸಲ್ಲಿಸಿದ ಬಗ್ಗೆ ಪ್ರಮಾಣ ಪತ್ರ. **( ಸಂಬಂಧಿಸಿದವರಿಗೆ ಮಾತ್ರ )**

23) ಭಾರತಿಯ ಜನಗಣತಿ ಸಂಸ್ಥೆಯಲ್ಲಿ ಗುತ್ತಿಗೆ ಆಧಾರದ ಮೇಲೆ ಸೇವೆ ಸಲ್ಲಿಸಿರುವ ಬಗ್ಗೆ ಪ್ರಮಾಣ ಪತ್ರ. **(ಸಂಬಂಧಿಸಿದವರಿಗೆ ಮಾತ್ರ )**

24) **ಸರಕಾರದ ಸೇವೆಯಲ್ಲಿರುವ ಅಭ್ಯರ್ಥಿಗಳು** ಹಾಲಿ ಕಾರ್ಯ ನಿರ್ವಹಿಸುತ್ತಿರುವ ಉದ್ಯೋಗಕ್ಕೆ ಸಂಬಂಧಿಸಿದ ಸೇವಾ ಪ್ರಮಾಣ ಪತ್ರ ಹಾಗೂ ಈ ಹುದ್ದೆಗೆ ಅರ್ಜಿ ಸಲ್ಲಿಸಲು ನೇಮಕಾತಿ ಪ್ರಾಧಿಕಾರಿಯಿಂದ ಪಡೆದುಕೊಂಡಿರುವ **ಅನುಮತಿ ಪತ್ರ** **[ಸಂಬಂಧಿಸಿದವರಿಗೆ ಮಾತ್ರ ]**

25) ಇನ್ನಿತರ ಅವಶ್ಯವೆಂದು ಭಾವಿಸಿದ ದಾಖಲೆಗಳ ಪ್ರತಿಗಳು.

**ಸೂಚನೆ:-** **ಮೇಲ್ಕಂಡ ಎಲ್ಲಾ ದಾಖಲೆಗಳನ್ನು ಅರ್ಜಿ ಸಲ್ಲಿಸುವಾಗಲೇ ಪಡೆದು ಲಗತ್ತಿಸಬೇಕು. ಯಾವುದೇ ಹೊಸ ದಾಖಲೆಗಳನ್ನು ಆಕ್ಷೇಪಣೆ ಸಲ್ಲಿಸುವ ಹಂತದಲ್ಲಿ ಸಲ್ಲಿಸಲು ಅವಕಾಶವಿರುವುದಿಲ್ಲ, ಅಂತಹ ದಾಖಲೆಗಳನ್ನು ಪರಿಗಣಿಸದೆ ತಿರಸ್ಕರಿಸಲಾಗುವುದು**

**iii)** **ಹಾಲಿ ರಾಜ್ಯ ಸರಕಾರದ ಸೇವೆಯಲ್ಲಿರುವ ಅಭ್ಯರ್ಥಿಗಳು ತಮ್ಮ ಹುದ್ದೆಯ ನೇಮಕಾತಿ ಪ್ರಾಧಿಕಾರಿಯ ಮುಖಾಂತರವೇ ತಮ್ಮ ಅರ್ಜಿಗಳನ್ನು ಸಲ್ಲಿಸತಕ್ಕದ್ದು ಮತ್ತು ಅರ್ಜಿ ಸ್ವೀಕರಿಸಲು ನಿಗಧಿಪಡಿಸಿರುವ ಕೊನೆಯ ದಿನಾಂಕವಾದ 08.07.2009ರ ಸಾಯಂಕಾಲ 05-30 ರೊಳಗೆ ಅಥವಾ ಅದಕ್ಕೂ ಮುಂಚಿತವಾಗಿ ಆಯ್ಕೆ ಪ್ರಾಧಿಕಾರಿಯ ವಿಭಾಗದ ವ್ಯಾಪ್ತಿಯಲ್ಲಿ ಬರುವ ಜಿಲ್ಲಾ ಉಪನಿರ್ದೇಶಕರ ಕಛೇರಿಗೆ ಖುದ್ದಾಗಿ ಸಲ್ಲಿಸುವುದು. ಕೊನೆಯ ದಿನಾಂಕದ ನಂತರ ಬರುವ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.**

**iv)** ಅರ್ಜಿಗಳನ್ನು ಸ್ವೀಕರಿಸಲು ನಿಗಧಿಪಡಿಸಿದ ಕೊನೆಯ ದಿನಾಂಕವು ಸಾರ್ವಜನಿಕ ರಜಾ ದಿನವಾಗಿದ್ದಲ್ಲಿ ನಂತರದ ಕೆಲಸದ ದಿನವು ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕವಾಗಿರುತ್ತದೆ.

**v)** ಅರ್ಜಿಯನ್ನು ಒಳಗೊಂಡ ಲಕೋಟೆಯ ಮೇಲೆ **"ಪ್ರೌಢ ಶಾಲಾ ಸಹಾಯಕ ಶಿಕ್ಷಕರ ಗ್ರೇಡ್-2 ವೃಂದದ ____________ ವಿಷಯದ____________ಬೋಧನಾ ಮಾಧ್ಯಮದ / ದೈಹಿಕ ಶಿಕ್ಷಣ ಶಿಕ್ಷಕ (ಗ್ರೇಡ್-1) ಹುದ್ದೆಗಾಗಿ ಅರ್ಜಿ"** ಎಂದು ದಪ್ಪ ಅಕ್ಷರದಲ್ಲಿ ಬರೆದಿರಬೇಕು.

**7) ಪ್ರೌಢ ಶಾಲಾ ಸಹ ಶಿಕ್ಷಕ (ಗ್ರೇಡ್-2) ವೃಂದದ ವಿವಿಧ ವಿಷಯ ಹಾಗೂ ಮಾಧ್ಯಮದ ಮತ್ತು ದೈಹಿಕ ಶಿಕ್ಷಣ ಶಿಕ್ಷಕ (ಗ್ರೇಡ್-1) ಹುದ್ದೆಗಳಿಗೆ ಅರ್ಜಿ ಸಲ್ಲಿಸುವ ಬಗ್ಗೆ.**

ಪ್ರೌಢ ಶಾಲಾ ಸಹಾಯಕ ಶಿಕ್ಷಕರ ಗ್ರೇಡ್-2 ವೃಂದದ, ವಿವಿಧ ವಿಷಯ ಹಾಗೂ ಮಾಧ್ಯಮದ ಮತ್ತು ದೈಹಿಕ ಶಿಕ್ಷಣ ಶಿಕ್ಷಕ (ಗ್ರೇಡ್-1) ಹುದ್ದೆಗಳಿಗೆ ಒಂದೇ ಅರ್ಜಿ ನಮೂನೆಯನ್ನು ನಿಗಧಿಪಡಿಸಿದೆ. ಅಭ್ಯರ್ಥಿಗಳು ಒಂದೇ ಅರ್ಜಿಯಲ್ಲಿ ಒಂದಕ್ಕಿಂತ ಹೆಚ್ಚು ವಿಷಯದ ಅಥವಾ ಮಾಧ್ಯಮದ ಹುದ್ದೆಗಳಿಗೆ ಅರ್ಜಿ ಸಲ್ಲಿಸಬಹುದಾಗಿದೆ. ಪ್ರತ್ಯೇಕ ಅರ್ಜಿಗಳ ಅವಶ್ಯಕತೆ ಇರುವದಿಲ್ಲ.ಆದರೆ ಅಭ್ಯರ್ಥಿಗಳು ವಿವಿಧ ವಿಷಯ ಹಾಗೂ ಮಾಧ್ಯಮದ ಹುದ್ದೆಗಳಿಗೆ ಆದ್ಯತೆಯನ್ನು ನಮೂದಿಸಬೇಕು. **ಆದ್ಯತೆ ಪ್ರಕಾರ ಆಯ್ಕೆ ಮಾಡಲಾಗುವುದು. ಒಂದು ಆದ್ಯತೆಯ ಪ್ರಕಾರ ಆಯ್ಕೆ ಹೊಂದಿದ್ದಲ್ಲಿ ಉಳಿದ ಆದ್ಯತೆಗಳನ್ನು ಕೈಬಿಡಲಾಗುವುದು.**

**ಉದಾಹರಣೆಗೆ:-(1)** ಅಧಿಸೂಚನೆಯಲ್ಲಿ ನೀಡಿರುವಂತೆ ಒಬ್ಬ ಅಭ್ಯರ್ಥಿಯು ಕಲಾ [ಕನ್ನಡ ಮಾಧ್ಯಮ] ಮತ್ತು ಕನ್ನಡ ಭಾಷಾ ಶಿಕ್ಷಕರ ಹುದ್ದೆಗೆ ಅರ್ಹನಾಗಿದ್ದಲ್ಲಿ, ಅಂತಹ ಅಭ್ಯರ್ಥಿಯು ಎರಡು ಹುದ್ದೆಗಳಿಗೆ ಆದ್ಯತೆಯನ್ನು ಸೂಚಿಸಬಹುದು. ಉದಾಹರಣೆಗೆ, ಕನ್ನಡ ಭಾಷಾ ಶಿಕ್ಷಕರ ಹುದ್ದೆಗೆ ಪ್ರಥಮ ಆದ್ಯತೆಯಾಗಿದ್ದು, ಕಲಾ [ಕನ್ನಡ ಮಾಧ್ಯಮ] ಹುದ್ದೆಗೆ ಎರಡನೆಯ ಆದ್ಯತೆಯಾಗಿದ್ದಲ್ಲಿ **ಕನ್ನಡ ಭಾಷಾ** ಕಾಲಂನಲ್ಲಿ **(1)** ಎಂದು ಹಾಗೂ ಕಲಾ [ಕನ್ನಡ ಮಾಧ್ಯಮ] ಕಾಲಂನಲ್ಲಿ **(2)** ಎಂದು ನಮೂದಿಸಬೇಕು. ಒಂದು ವೇಳೆ ಆದ್ಯತೆಗಳನ್ನು ನಮೂದಿಸದಿದ್ದಲ್ಲಿ ಅಭ್ಯರ್ಥಿಯು ಹೊಂದಿರುವ ವಿದ್ಯಾರ್ಹತೆಗಳನ್ನು ಆಧರಿಸಿ ಆಯ್ಕೆಗೆ ಪರಿಗಣಿಸಲಾಗುವುದು.

**8) ವಿದ್ಯಾರ್ಹತೆಗಳು:–**

**ಅಭ್ಯರ್ಥಿಗಳು ನೇಮಕಾತಿ ಅಧಿಸೂಚನೆ ದಿನಾಂಕದಂದು "ದಿ ಕರ್ನಾಟಕ ಎಜುಕೇಷನ್ ಡಿಪಾರ್ಟ್‌ಮೆಂಟ್ ಸರ್ವೀಸಸ್ (ಡಿಪಾರ್ಟ್‌ಮೆಂಟ್ ಆಫ್ ಪಬ್ಲಿಕ್ ಇನ್ಸ್‌ಸ್ಟ್ರಕ್ಷನ್) (ರಿಕ್ರೂಟ್‌ಮೆಂಟ್) (ಅಮೆಂಡ್‌ಮೆಂಟ್) ರೂಲ್ಸ್ 2002"** ನಿಯಮಗಳಲ್ಲಿ ನಿಗದಿಪಡಿಸಿರುವಂತೆ, ಪ್ರೌಢ ಶಾಲಾ ಸಹಾಯಕ ಗ್ರೇಡ್–2 ವೃಂದದ, ವಿವಿಧ ವಿಷಯಗಳ ಹಾಗೂ ಮಾಧ್ಯಮದ ಮತ್ತು ದೈಹಿಕ ಶಿಕ್ಷಣ ಶಿಕ್ಷಕ (ಗ್ರೇಡ್–1) ಶಿಕ್ಷಕರ ಹುದ್ದೆಗಳಿಗೆ ಹೊಂದಿರಬೇಕಾದ ವಿದ್ಯಾರ್ಹತೆಗಳ ವಿವರಗಳು ಈ ಮುಂದೆ ತಿಳಿಸಿದಂತಿರುತ್ತದೆ.

**(ಅ) ಕಲಾ ಶಿಕ್ಷಕರ ಹುದ್ದೆಗಳಿಗೆ (Arts Teacher):–**

i) ಅಭ್ಯರ್ಥಿಯು, ಭಾರತ ದೇಶದ ಕಾನೂನಿನಂತೆ ಸ್ಥಾಪಿಸಲ್ಪಟ್ಟ ಮತ್ತು ವಿಶ್ವವಿದ್ಯಾಲಯ ಧನ ಸಹಾಯ ಆಯೋಗದಿಂದ ಅಂಗೀಕೃತವಾದ ಒಂದು ವಿಶ್ವವಿದ್ಯಾಲಯದ **"ಬ್ಯಾಚಲರ್ ಆಫ್ ಆರ್ಟ್ಸ್"** (ಬಿ.ಎ) ಪದವೀಧರರಾಗಿದ್ದು, ಈ ಪದವಿ ಪರೀಕ್ಷೆಯಲ್ಲಿ **"ಇತಿಹಾಸ, ಅರ್ಥಶಾಸ್ತ್ರ, ಭೂಗೋಳ ಶಾಸ್ತ್ರ, ರಾಜ್ಯಶಾಸ್ತ್ರ, ಸಮಾಜ ಶಾಸ್ತ್ರ** ಇವುಗಳಲ್ಲಿ ಯಾವುದಾದರೂ **ಎರಡು ಐಚ್ಛಿಕ ವಿಷಯಗಳನ್ನು** ಅಧ್ಯಯನ ಮಾಡಿರಬೇಕು.

**ಮತ್ತು**

ii] ಭಾರತ ದೇಶದ ಕಾನೂನಿನಂತೆ ಸ್ಥಾಪಿಸಲ್ಪಟ್ಟ ಮತ್ತು ವಿಶ್ವವಿದ್ಯಾಲಯ ಧನ ಸಹಾಯ ಆಯೋಗದಿಂದ ಅಂಗೀಕೃತವಾದ ಒಂದು ವಿಶ್ವವಿದ್ಯಾನಿಲಯದಿಂದ **ಬ್ಯಾಚುಲರ್ ಆಫ್ ಎಜ್ಯುಕೇಶನ್** (ಬಿ.ಇಡಿ) ಪದವಿಯನ್ನು ಪಡೆದಿರಬೇಕು.

**ಹಾಗೂ**

iii) ಬೋಧನಾ ಮಾಧ್ಯಮದ ಭಾಷೆಯನ್ನು ಅಭ್ಯರ್ಥಿಯು **ಬ್ಯಾಚುಲರ್ ಆಫ್ ಆರ್ಟ್ಸ್ (ಬಿ.ಎ)** ಪದವಿಯಲ್ಲಿ ಒಂದು ಭಾಷೆಯನ್ನಾಗಿ ಅಧ್ಯಯನ ಮಾಡಿರಬೇಕು.

**ಅಥವಾ**

ಬೋಧನಾ ಮಾಧ್ಯಮದ ಭಾಷೆಯನ್ನು ಬಿ.ಎ. ಪದವಿಯಲ್ಲಿ ಅಧ್ಯಯನ ಮಾಡದೆ ಇದ್ದಲ್ಲಿ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಆ ಭಾಷೆಯನ್ನು ಪ್ರಥಮ ಅಥವಾ ದ್ವಿತೀಯ ಭಾಷೆಯನ್ನಾಗಿ ಅಧ್ಯಯನ ಮಾಡಿರಬೇಕು.

**ಅಥವಾ**

ಎಸ್.ಎಸ್.ಎಲ್.ಸಿ. ಅಥವಾ ಬಿಎ ಪದವಿ ಪರೀಕ್ಷೆಯನ್ನು **ಬೋಧನಾ ಮಾಧ್ಯಮದ** ಭಾಷೆಯ ಮಾಧ್ಯಮದಲ್ಲಿ ಅಧ್ಯಯನ ಮಾಡಿರಬೇಕು.

**ಅಥವಾ**

ಭಾರತ ದೇಶದ ಕಾನೂನಿನಂತೆ ಸ್ಥಾಪಿಸಲ್ಪಟ್ಟ ಮತ್ತು ವಿಶ್ವವಿದ್ಯಾಲಯ ಧನ ಸಹಾಯ ಆಯೋಗದಿಂದ ಅಂಗೀಕೃತವಾದ ಒಂದು ವಿಶ್ವವಿದ್ಯಾನಿಲಯದಿಂದ, ಸಂಬಂಧಿಸಿದ ಬೋಧನಾ ಮಾಧ್ಯಮದ ಭಾಷೆಯಲ್ಲಿ **ಡಿಪ್ಲೋಮಾ** ಹೊಂದಿರಬೇಕು.

**ಕನ್ನಡ ಮಾಧ್ಯಮದಲ್ಲಿ ಬೋಧಿಸುವ ವಿಷಯಗಳಿಗೆ ಸಂಬಂಧಿಸಿದಂತೆ ಮೇಲೆ ತಿಳಿಸಿದ ನಿಬಂಧನೆಗಳ ಪ್ರಕಾರ ಇಲ್ಲದಿದ್ದಲ್ಲಿ, ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ, ಬೆಂಗಳೂರು ಅಥವಾ ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು ಇವರುಗಳ ವತಿಯಿಂದ ನಡೆಸಲ್ಪಡುವ "ಕನ್ನಡ ಸರ್ಟಿಫಿಕೇಟ್"**[ಕಾವ/ಜಾಣ/ರತ್ನ] **ಕೋರ್ಸ್‌ನ್ನು ಪಾಸು ಮಾಡಿರಬೇಕು.**

**(ಆ) ಭೌತ ವಿಜ್ಞಾನ ಶಿಕ್ಷಕರ ಹುದ್ದೆಗಳಿಗೆ (Physical Science Teacher):–**

i) ಅಭ್ಯರ್ಥಿಯು, ಭಾರತ ದೇಶದ ಕಾನೂನಿನಂತೆ ಸ್ಥಾಪಿಸಲ್ಪಟ್ಟ ಮತ್ತು ವಿಶ್ವವಿದ್ಯಾಲಯ ಧನ ಸಹಾಯ ಆಯೋಗದಿಂದ ಅಂಗೀಕೃತವಾದ ಒಂದು ವಿಶ್ವವಿದ್ಯಾಲಯದ **"ಬ್ಯಾಚಲರ್ ಆಫ್ ಸೈನ್ಸ್"** (ಬಿ.ಎಸ್ಸಿ) ಪದವೀಧರರಾಗಿದ್ದು, ಈ ಪದವಿ ಪರೀಕ್ಷೆಯಲ್ಲಿ ಈ ಕೆಳಕಂಡ ಐಚ್ಛಿಕ ವಿಷಯಗಳಲ್ಲಿ ಎರಡು ಐಚ್ಛಿಕ ವಿಷಯಗಳನ್ನು ಅಧ್ಯಯನ ಮಾಡಿರಬೇಕು. ಇದರಲ್ಲಿ **"ಗಣಿತ ಶಾಸ್ತ್ರ"** ಐಚ್ಛಿಕ ವಿಷಯವನ್ನು ಕಡ್ಡಾಯವಾಗಿ ಅಧ್ಯಯನ ಮಾಡಿರಬೇಕು.

**" ಭೌತಶಾಸ್ತ್ರ, ಗಣಿತಶಾಸ್ತ್ರ, ರಸಾಯನ ಶಾಸ್ತ್ರ "**

**ಅಥವಾ**

**" ಭೌತಶಾಸ್ತ್ರ, ಗಣಿತಶಾಸ್ತ್ರ, ಕಂಪ್ಯೂಟರ್ ಸೈನ್ಸ್ "**

**ಅಥವಾ**

**" ಭೌತಶಾಸ್ತ್ರ, ಗಣಿತಶಾಸ್ತ್ರ, ಎಲೆಕ್ಟ್ರಾನಿಕ್ಸ್ "**

**ಮತ್ತು**

ii) ಭಾರತ ದೇಶದ ಕಾನೂನಿನಂತೆ ಸ್ಥಾಪಿಸಲ್ಪಟ್ಟ ಮತ್ತು ವಿಶ್ವವಿದ್ಯಾಲಯ ಧನ ಸಹಾಯ ಆಯೋಗದಿಂದ ಅಂಗೀಕೃತವಾದ ಒಂದು ವಿಶ್ವವಿದ್ಯಾಲಯದಿಂದ **"ಬ್ಯಾಚಲರ್ ಆಫ್ ಎಜುಕೇಷನ್"** (ಬಿ.ಎಡ್) ಪದವಿ ಪಡೆದಿರಬೇಕು.

**ಹಾಗೂ**

iii) ಬೋಧನಾ ಮಾಧ್ಯಮದ ಭಾಷೆಯನ್ನು ಅಭ್ಯರ್ಥಿಯು **"ಬ್ಯಾಚಲರ್ ಆಫ್ ಸೈನ್ಸ್"** (ಬಿ.ಎಸ್ಸಿ) ಪದವಿಯಲ್ಲಿ ಒಂದು ಭಾಷೆಯನ್ನಾಗಿ ಅಧ್ಯಯನ ಮಾಡಿರಬೇಕು.

**ಅಥವಾ**

ಬೋಧನಾ ಮಾಧ್ಯಮದ ಭಾಷೆಯನ್ನು ಬಿ.ಎಸ್ಸಿ. ಪದವಿಯಲ್ಲಿ ಅಧ್ಯಯನ ಮಾಡದೆ ಇದ್ದಲ್ಲಿ **ಎಸ್.ಎಸ್.ಎಲ್**.ಸಿ. ಪರೀಕ್ಷೆಯಲ್ಲಿ ಆ ಭಾಷೆಯನ್ನು **ಪ್ರಥಮ ಅಥವಾ ದ್ವಿತೀಯ** ಭಾಷೆಯನ್ನಾಗಿ ಅಧ್ಯಯನ ಮಾಡಿರಬೇಕು.

**ಅಥವಾ**

ಎಸ್.ಎಸ್.ಎಲ್.ಸಿ. ಅಥವಾ ಬಿ.ಎಸ್ಸಿ. ಪದವಿ ಪರೀಕ್ಷೆಯನ್ನು **ಬೋಧನಾ ಮಾಧ್ಯಮದ** ಭಾಷೆಯ ಮಾಧ್ಯಮದಲ್ಲಿ ಅಧ್ಯಯನ ಮಾಡಿರಬೇಕು.

**ಅಥವಾ**

ಭಾರತ ದೇಶದ ಕಾನೂನಿನಂತೆ ಸ್ಥಾಪಿಸಲ್ಪಟ್ಟ ಮತ್ತು ವಿಶ್ವವಿದ್ಯಾಲಯ ಧನ ಸಹಾಯ ಆಯೋಗದಿಂದ ಅಂಗೀಕೃತವಾದ ಒಂದು ವಿಶ್ವವಿದ್ಯಾಲಯದಿಂದ, ಸಂಬಂಧಿಸಿದ ಬೋಧನಾ ಮಾಧ್ಯಮದ ಭಾಷೆಯಲ್ಲಿ **ಡಿಪ್ಲೋಮಾವನ್ನು** ಹೊಂದಿರಬೇಕು.

**ಕನ್ನಡ ಮಾಧ್ಯಮದಲ್ಲಿ ಬೋಧಿಸುವ ವಿಷಯಗಳಿಗೆ ಸಂಬಂಧಿಸಿದಂತೆ ಮೇಲೆ ತಿಳಿಸಿದ ನಿಬಂಧನೆಗಳ ಪ್ರಕಾರ ಇಲ್ಲದಿದ್ದಲ್ಲಿ, ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ, ಬೆಂಗಳೂರು ಅಥವಾ ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು ಇವರುಗಳ ವತಿಯಿಂದ ನಡೆಸಲ್ಪಡುವ "ಕನ್ನಡ ಸರ್ಟಿಫಿಕೇಟ್" ಕೋರ್ಸ್‌ನ್ನು [ಕಾವ/ಜಾಣ/ರತ್ನ] ಪಾಸು ಮಾಡಿರಬೇಕು.**

**(ಇ) ಜೀವ ವಿಜ್ಞಾನ ಶಿಕ್ಷಕರ ಹುದ್ದೆಗಳಿಗೆ (Biological Science Teacher):–**

i) ಅಭ್ಯರ್ಥಿಯು, ಭಾರತ ದೇಶದ ಕಾನೂನಿನಂತೆ ಸ್ಥಾಪಿಸಲ್ಪಟ್ಟ ಮತ್ತು ವಿಶ್ವವಿದ್ಯಾಲಯ ಧನ ಸಹಾಯ ಆಯೋಗದಿಂದ ಅಂಗೀಕೃತವಾದ ಒಂದು ವಿಶ್ವವಿದ್ಯಾಲಯದ **"ಬ್ಯಾಚಲರ್ ಆಫ್ ಸೈನ್ಸ್"** (ಬಿ.ಎಸ್ಸಿ) ಪದವೀಧರರಾಗಿದ್ದು, ಈ ಪದವಿ ಪರೀಕ್ಷೆಯಲ್ಲಿ **ರಸಾಯನ ಶಾಸ್ತ್ರ, ಸಸ್ಯಶಾಸ್ತ್ರ ಮತ್ತು ಪ್ರಾಣಿಶಾಸ್ತ್ರ** ಈ ಐಚ್ಛಿಕ ವಿಷಯಗಳಲ್ಲಿ ಎರಡು ಐಚ್ಛಿಕ ವಿಷಯಗಳನ್ನು ಅಧ್ಯಯನ ಮಾಡಿರಬೇಕು. ಹಾಗೂ ಇದರಲ್ಲಿ **" ರಸಾಯನಶಾಸ್ತ್ರ "** ಐಚ್ಛಿಕ ವಿಷಯವನ್ನು ಕಡ್ಡಾಯವಾಗಿ ಅಧ್ಯಯನ ಮಾಡಿರಬೇಕು.

**ಮತ್ತು**

ii) ಭಾರತ ದೇಶದ ಕಾನೂನಿನಂತೆ ಸ್ಥಾಪಿಸಲ್ಪಟ್ಟ ಮತ್ತು ವಿಶ್ವವಿದ್ಯಾಲಯ ಧನ ಸಹಾಯ ಆಯೋಗದಿಂದ ಅಂಗೀಕೃತವಾದ ಒಂದು ವಿಶ್ವವಿದ್ಯಾಲಯದಿಂದ **"ಬ್ಯಾಚಲರ್ ಆಫ್ ಎಜುಕೇಷನ್"** (ಬಿ.ಎಡ್) ಪದವಿ ಪಡೆದಿರಬೇಕು.

**ಹಾಗೂ**

iii) ಬೋಧನಾ ಮಾಧ್ಯಮದ ಭಾಷೆಯನ್ನು ಅಭ್ಯರ್ಥಿಯು **"ಬ್ಯಾಚಲರ್ ಆಫ್ ಸೈನ್ಸ್"** (ಬಿ.ಎಸ್ಸಿ) ಪದವಿಯಲ್ಲಿ ಒಂದು ಭಾಷೆಯನ್ನಾಗಿ ಅಧ್ಯಯನ ಮಾಡಿರಬೇಕು.

**ಅಥವಾ**

ಬೋಧನಾ ಮಾಧ್ಯಮದ ಭಾಷೆಯನ್ನು ಬಿ.ಎಸ್ಸಿ. ಪದವಿಯಲ್ಲಿ ಅಧ್ಯಯನ ಮಾಡದೆ ಇದ್ದಲ್ಲಿ **ಎಸ್.ಎಸ್.ಎಲ್**.ಸಿ. ಪರೀಕ್ಷೆಯಲ್ಲಿ ಆ ಭಾಷೆಯನ್ನು **ಪ್ರಥಮ ಅಥವಾ ದ್ವಿತೀಯ** ಭಾಷೆಯನ್ನಾಗಿ ಅಧ್ಯಯನ ಮಾಡಿರಬೇಕು.

**ಅಥವಾ**

ಎಸ್.ಎಸ್.ಎಲ್.ಸಿ. ಅಥವಾ ಬಿ.ಎಸ್ಸಿ. ಪದವಿ ಪರೀಕ್ಷೆಯನ್ನು **ಬೋಧನಾ ಮಾಧ್ಯಮದ** ಭಾಷೆಯ ಮಾಧ್ಯಮದಲ್ಲಿ ಅಧ್ಯಯನ ಮಾಡಿರಬೇಕು.

**ಅಥವಾ**

ಭಾರತ ದೇಶದ ಕಾನೂನಿನಂತೆ ಸ್ಥಾಪಿಸಲ್ಪಟ್ಟ ಮತ್ತು ವಿಶ್ವವಿದ್ಯಾಲಯ ಧನ ಸಹಾಯ ಆಯೋಗದಿಂದ ಅಂಗೀಕೃತವಾದ ಒಂದು ವಿಶ್ವವಿದ್ಯಾಲಯದಿಂದ, ಸಂಬಂಧಿಸಿದ ಬೋಧನಾ ಮಾಧ್ಯಮದ ಭಾಷೆಯಲ್ಲಿ **'ಡಿಪ್ಲೋಮಾ' ವನ್ನು** ಹೊಂದಿರಬೇಕು.

ಕನ್ನಡ ಮಾಧ್ಯಮದಲ್ಲಿ ಬೋಧಿಸುವ ವಿಷಯಗಳಿಗೆ ಸಂಬಂಧಿಸಿದಂತೆ ಮೇಲೆ ತಿಳಿಸಿದ ನಿಬಂಧನೆಗಳ ಪ್ರಕಾರ ಇಲ್ಲದಿದ್ದಲ್ಲಿ, ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ, ಬೆಂಗಳೂರು ಅಥವಾ ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು ಇವರುಗಳ ವತಿಯಿಂದ ನಡೆಸಲ್ಪಡುವ "ಕನ್ನಡ ಸರ್ಟಿಫಿಕೇಟ್" ಕೋರ್ಸ್‌ನ್ನು[ಕಾವ/ಜಾಣ/ರತ್ನ] ಪಾಸು ಮಾಡಿರಬೇಕು.

**(ಈ) ಭಾಷಾ ಶಿಕ್ಷಕರುಗಳ ಹುದ್ದೆಗಳಿಗೆ (Language Assistants ):–**

i) ಅಭ್ಯರ್ಥಿಯು, ಭಾರತ ದೇಶದ ಕಾನೂನಿನಂತೆ ಸ್ಥಾಪಿಸಲ್ಪಟ್ಟ ಮತ್ತು ವಿಶ್ವವಿದ್ಯಾಲಯ ಧನ ಸಹಾಯ ಆಯೋಗದಿಂದ ಅಂಗೀಕೃತವಾದ ಒಂದು ವಿಶ್ವವಿದ್ಯಾಲಯದ **"ಬ್ಯಾಚಲರ್ ಆಫ್ ಆರ್ಟ್ಸ್"** (ಬಿ.ಎ) ಪದವೀಧರರಾಗಿದ್ದು, ಈ ಪದವಿ ಪರೀಕ್ಷೆಯಲ್ಲಿ ಸಂಬಂಧಿಸಿದ ಭಾಷಾ ಶಿಕ್ಷಕರ ಹುದ್ದೆಗೆ ಅನುಗುಣವಾದ ಭಾಷೆಯನ್ನು ಒಂದು ಐಚ್ಛಿಕ ವಿಷಯವನ್ನಾಗಿ (Optionals) ಅಧ್ಯಯನ ಮಾಡಿರಬೇಕು. ಭಾಷೆಗಳು ಅಂದರೆ **ಕನ್ನಡ, ಇಂಗ್ಲೀಷ್, ಉರ್ದು, ಹಿಂದಿ, ಮರಾಠಿ, ತೆಲುಗು, ತಮಿಳು ಮತ್ತು ಸಂಸ್ಕೃತ.**

**ಅಥವಾ**

ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ ಬೆಂಗಳೂರು ಇವರು ನಡೆಸುವ (04) ನಾಲ್ಕು ವರ್ಷಗಳ ಅವಧಿಯ **ಕನ್ನಡ ಪಂಡಿತ, ಸಂಸ್ಕೃತ ವಿದ್ವಾನ್[ವಿದ್ಯುನ್ಮಧ್ಯಮ ಮತ್ತು ವಿದ್ವತ್ ಉತ್ತಮ] "ಉರ್ದು ಮುನ್ಶಿ"** ಪರೀಕ್ಷೆಯನ್ನು ಪಾಸು ಮಾಡಿರಬೇಕು.

**ಮತ್ತು**

ii) ಭಾರತ ದೇಶದ ಕಾನೂನಿನಂತೆ ಸ್ಥಾಪಿಸಲ್ಪಟ್ಟ ಮತ್ತು ವಿಶ್ವವಿದ್ಯಾಲಯ ಧನ ಸಹಾಯ ಆಯೋಗದಿಂದ ಅಂಗೀಕೃತವಾದ ಒಂದು ವಿಶ್ವವಿದ್ಯಾಲಯದಿಂದ **"ಬ್ಯಾಚಲರ್ ಆಫ್ ಎಜುಕೇಷನ್"** (ಬಿ.ಎಡ್) ಪದವಿ ಪಡೆದಿರಬೇಕು.

**ಬ್ಯಾಚುಲರ್ ಪದವಿಯಲ್ಲಿ ಸಂಬಂಧಿಸಿದ ಭಾಷಾ ಶಿಕ್ಷಕರ ಹುದ್ದೆಗೆ ಅನುಗುಣವಾದ ಭಾಷಾ ಐಚ್ಛಿಕ ವಿಷಯವನ್ನು ಅಧ್ಯಯನ ಮಾಡದೆ ಇದ್ದಲ್ಲಿ ಅಂಥಹ ಅಭ್ಯರ್ಥಿಗಳು;**

**a)** ಸಂಬಂದಿಸಿದ ಭಾಷಾ ವಿಷಯದಲ್ಲಿ ಸ್ನಾತಕೋತ್ತರ ಪದವಿಯನ್ನು (Post Graduate Degree) ಹೊಂದಿದ್ದಲ್ಲಿ ಸಂಬಂಧಿಸಿದ ಭಾಷಾ ಶಿಕ್ಷಕರ ಹುದ್ದೆಗೆ ಪರಿಗಣಿಸಲು ಅರ್ಹತೆ ಪಡೆಯುತ್ತಾರೆ.

**b)** **ರೀಜನಲ್ ಇನ್‌ಸ್ಟ್ಯೂಟ್ ಆಫ್ ಇಂಗ್ಲೀಷ್ ಸೌತ್ ಇಂಡಿಯಾ** ಇವರು ನೀಡುವ **ಪೋಸ್ಟ್ ಗ್ರಾಜುಯೇಟ್ ಡಿಪ್ಲೋಮಾ ಸರ್ಟಿಫಿಕೇಟ್ ಇನ್ ಇಂಗ್ಲೀಷ್** ಹೊಂದಿದ್ದಲ್ಲಿ ಅಂತಹ ಅಭ್ಯರ್ಥಿಗಳು ಇಂಗ್ಲೀಷ್ ಭಾಷಾ ಶಿಕ್ಷಕರ ಹುದ್ದೆಗೆ ಪರಿಗಣಿಸಲು ಅರ್ಹತೆ ಪಡೆಯುತ್ತಾರೆ.

**c)** ಹಿಂದಿ ಭಾಷಾ ಶಿಕ್ಷಕರ ಹುದ್ದೆಗೆ ಅಭ್ಯರ್ಥಿಯು, ಭಾರತ ದೇಶದ ಕಾನೂನಿನಂತೆ ಸ್ಥಾಪಿಸಲ್ಪಟ್ಟ ಮತ್ತು ವಿಶ್ವವಿದ್ಯಾಲಯ ಧನ ಸಹಾಯ ಆಯೋಗದಿಂದ ಅಂಗೀಕೃತವಾದ ಒಂದು ವಿಶ್ವವಿದ್ಯಾನಿಲಯದ **ಬ್ಯಾಚುಲರ್ ಪದವೀಧರರಾಗಿದ್ದು,** ಈ ಪದವಿಯಲ್ಲಿ **ಹಿಂದಿ**ಯನ್ನು ಒಂದು ಮೇಜರ್ ಐಚ್ಛಿಕ ವಿಷಯವನ್ನಾಗಿ ಅಧ್ಯಯನ ಮಾಡಿರಬೇಕು.

**ಮತ್ತು**

ಭಾರತ ದೇಶದ ಕಾನೂನಿನಂತೆ ಸ್ಥಾಪಿಸಲ್ಪಟ್ಟ ಮತ್ತು ವಿಶ್ವವಿದ್ಯಾಲಯ ಧನ ಸಹಾಯ ಆಯೋಗದಿಂದ ಅಂಗೀಕೃತವಾದ ಒಂದು ವಿಶ್ವವಿದ್ಯಾನಿಲಯದಿಂದ **ಬ್ಯಾಚುಲರ್ ಆಫ್ ಎಜುಕೇಷನ್ (ಬಿ.ಎಡ್)** ಪದವೀಧರರಾಗಿದ್ದು, ಈ ಪದವಿ ಪರೀಕ್ಷೆಯಲ್ಲಿ **ಹಿಂದಿ**ಯನ್ನು ಬೋಧನಾ ವಿಷಯವನ್ನಾಗಿ ಅಧ್ಯಯನ ಮಾಡಿರಬೇಕು.

**d)** ಇಂಗ್ಲೀಷ್ ಭಾಷಾ ಶಿಕ್ಷಕರ ಹುದ್ದೆಗೆ ಸಂಬಂಧಿಸಿದಂತೆ ಅಭ್ಯರ್ಥಿಗಳು ಬಿ.ಎಡ್. ಪದವಿಯಲ್ಲಿ ಇಂಗ್ಲೀಷ್‌ನ್ನು ಬೋಧನಾ ವಿಷಯವನ್ನಾಗಿ ಅಧ್ಯಯನ ಮಾಡದೆ ಇದ್ದಲ್ಲಿ ಅಂತಹ ಅಭ್ಯರ್ಥಿಗಳು **ರೀಜನಲ್ ಇನ್‌ಸ್ಟ್ಯೂಟ್ ಆಫ್ ಇಂಗ್ಲೀಷ್, ಸೌತ್ ಇಂಡಿಯಾ** ಇವರು ನೀಡುವ **ಪೋಸ್ಟ್ ಗ್ರಾಜುಯೇಟ್ ಡಿಪ್ಲೋಮಾ ಸರ್ಟಿಫಿಕೇಟ್ ಇನ್ ಇಂಗ್ಲೀಷ್** ಹೊಂದಿದ್ದಲ್ಲಿ ನೇಮಕಾತಿಗೆ ಪರಿಗಣಿಸಲು ಅರ್ಹತೆ ಪಡೆಯುತ್ತಾರೆ.

**ವಿಶೇಷ ಸೂಚನೆ:–** ಮೇಲ್ಕಂಡ ಎ, ಬಿ ಮತ್ತು ಡಿ (ಪ್ರಕರಣಗಳಲ್ಲಿ) ಅಭ್ಯರ್ಥಿಯು ಬ್ಯಾಚುಲರ್ ಪದವಿ ಮತ್ತು ಬ್ಯಾಚುಲರ್ ಆಫ್ ಎಜುಕೇಷನ್ ಪದವಿ ಪರೀಕ್ಷೆಗಳಲ್ಲಿ ಪಡೆದಿರುವ ಅಂಕಗಳನ್ನು ಮಾತ್ರ ಮೆರಿಟ್ ಕಂಡುಕೊಳ್ಳಲು ಪರಿಗಣಿಸಲಾಗುತ್ತದೆ. ಆದರೆ ಸ್ನಾತಕೋತ್ತರ ಮತ್ತು ಡಿಪ್ಲೋಮಾ ಪರೀಕ್ಷೆಗಳಲ್ಲಿ ಪಡೆದಿರುವ ಅಂಕಗಳನ್ನು ಮೆರಿಟ್ ಕಂಡು ಹಿಡಿಯಲು ಗಣನೆಗೆ ತೆಗೆದುಕೊಳ್ಳವುದಿಲ್ಲ.

**ಹಿಂದಿ ಭಾಷಾ ಸಹ ಶಿಕ್ಷಕರ ಹುದ್ದೆಗೆ ಸಂಬಂಧಿಸಿದಂತೆ ಅಭ್ಯರ್ಥಿಯು:–**

1. **ದಕ್ಷಿಣ ಭಾರತ ಹಿಂದಿ ಪ್ರಚಾರ ಸಭಾ, ಮದ್ರಾಸ್ ಇವರು ನಡೆಸುವ** ರಾಷ್ಟ್ರಭಾಷಾ ಪ್ರವೀಣ್ ಮತ್ತು ಶಿಕ್ಷ ಸ್ನಾತಕ್ **(ಹಿಂದಿ ಮತ್ತು ಮತ್ತೊಂದು ಭಾಷೆಯನ್ನು ಬೋಧನಾ ವಿಷಯವನ್ನಾಗಿ** ಶಿಕ್ಷಾ ಸ್ನಾತಕ್ **ಪರೀಕ್ಷೆಯಲ್ಲಿ ಅಧ್ಯಯನ ಮಾಡಿರಬೇಕು) ಮತ್ತು** ಪದವಿ ಪೂರ್ವ ಶಿಕ್ಷಣ (ಪಿ.ಯು.ಸಿ) ಕೋರ್ಸ್ **ಅನ್ನು ಪಾಸು ಮಾಡಿದ್ದು, ಈ ಕೋರ್ಸಿನಲ್ಲಿ ಕನ್ನಡ ಅಥವಾ ಯಾವುದೇ ಒಂದು ಪ್ರಾದೇಶಿಕ ಭಾಷೆಯನ್ನು ಒಂದು ವಿಷಯವನ್ನಾಗಿ ಅಥವಾ ಮಾಧ್ಯಮದಲ್ಲಿ ಪಾಸು ಮಾಡಿರಬೇಕು.**

ಅಥವಾ

2. **ರಾಜ್ಯ ಸರ್ಕಾರವು ತತ್ಸಮಾನ ವಿದ್ಯಾರ್ಹತೆ ಎಂದು ಘೋಷಿರುವ ಇತರೆ ಯಾವುದೇ ವಿದ್ಯಾರ್ಹತೆಯನ್ನು ಹೊಂದಿದ್ದಲ್ಲಿ ನೇಮಕಾತಿಗೆ ಪರಿಗಣಿಸಲು ಅರ್ಹತೆ ಪಡೆಯುತ್ತಾರೆ.**

ಸರ್ಕಾರದ ಆದೇಶ ಸಂಖ್ಯೆ ಇಡಿ 160 ಪಿಟಿಐ 2003 ದಿನಾಂಕ 24–02–2004ರನ್ವಯ ಈಕೆಳಕಂಡಂತೆ ಪದವಿ ಮತ್ತು ಬಿಇಡಿ ತತ್ಸಮಾನ ವಿದ್ಯಾರ್ಹತೆಯನ್ನು ಹೊಂದಿರಬೇಕು

| **ಪದವಿ ತತ್ಸಮಾನ ಪರೀಕ್ಷೆ ಹೆಸರು** | **ಸಂಸ್ಥೆಯ ಹೆಸರು** |
|---|---|
| 1. ಹಿಂದಿ ರತ್ನ | ಮೈಸೂರು ಹಿಂದಿ ಪ್ರಚಾರ ಪರಿಷತ್,ಬೆಂಗಳೂರು |
| 2. ರಾಜ ಭಾಷಾ ವಿದ್ವಾನ್ | ಕರ್ನಾಟಕ ಹಿಂದಿ ಪ್ರಚಾರ ಸಮಿತಿ,ಬೆಂಗಳೂರು |
| 3. ಹಿಂದಿ ಭಾಷಾ ಪ್ರವೀಣ್ | ಕರ್ನಾಟಕ ಮಹಿಳಾ ಹಿಂದಿ ಸೇವಾ ಸಮಿತಿ,ಬೆಂಗಳೂರು |
| 4. ರಾಷ್ಟ್ರಭಾಷಾ ಪ್ರವೀಣ್ | ದಕ್ಷಿಣ ಭಾರತ ಹಿಂದಿ ಪ್ರಚಾರ ಸಭಾ,ಮದ್ರಾಸ್ |

ಸರ್ಕಾರದ ಆದೇಶ ಸಂಖ್ಯೆ ಇಡಿ 125 ಪಿಟಿಐ 2003 ದಿನಾಂಕ 16-08-2003 ರನ್ವಯ ಕೆಳಕಂಡ ವಿದ್ಯಾರ್ಹತೆಗಳನ್ನು ಬಿಎಡ್ ಪರೀಕ್ಷೆಗೆ ತತ್ಸಮಾನವೆಂದು ಈ ಕೆಳಕಂಡ ಷರತ್ತಿಗೆ ಒಳಪಟ್ಟು ಘೋಷಿಸಲಾಗಿದೆ.

| **ಬಿಎಡ್ ತತ್ಸಮಾನ ಪರೀಕ್ಷೆ ಹೆಸರು** | **ಸಂಸ್ಥೆಯ ಹೆಸರು** |
|---|---|
| 1. ಹಿಂದಿ ಶಿಕ್ಷಕ್ ಪರೀಕ್ಷೆ | ಅ. ಕರ್ನಾಟಕ ಮಹಿಳಾ ಹಿಂದಿ ಸೇವಾ ಸಮಿತಿ,ಬೆಂಗಳೂರು |
| | ಆ. ಕರ್ನಾಟಕ ಹಿಂದಿ ಪ್ರಚಾರ ಸಮಿತಿ,ಬೆಂಗಳೂರು |
| | ಇ. ಮೈಸೂರು ಹಿಂದಿ ಪ್ರಚಾರ ಪರಿಷತ್,ಬೆಂಗಳೂರು |
| | ಈ. ಮಾನಸ ಎಜುಕೇಷನ್ ಸೊಸೈಟಿ, ತುಮಕೂರು |
| | ಉ. ಕರ್ನಾಟಕ ಲೇಬರ್ ಎಜುಕೇಷನ್ ಸೊಸೈಟಿ,ಬೀದರ್ |
| 2. ಹಿಂದಿ ಶಿಕ್ಷಣ ಪಾರಂಗತ್ ಪರೀಕ್ಷೆ | ಅ. ಸರ್ಕಾರಿ ಹಿಂದಿ ಶಿಕ್ಷಕರ ತರಬೇತಿ ಕಾಲೇಜು, ಮೈಸೂರು. |

I) ಹಿಂದಿ ಶಿಕ್ಷಕ ಮತ್ತು ಹಿಂದಿ ಶಿಕ್ಷಣ ಪರಾಂಗತ ವಿದ್ಯಾರ್ಹತೆ ಹೊಂದಿರುವ ಅಭ್ಯರ್ಥಿಗಳು ಸದರಿ ಕೋರ್ಸನ್ನು ಸೇರುವ ಮುಂಚೆ ಪಿ.ಯು.ಸಿ.ಯನ್ನು ಪಾಸು ಮಾಡಿದ್ದು, ಸದರಿ ಪಿ.ಯು ಕೋರ್ಸಿನಲ್ಲಿ ಕನ್ನಡ ಅಥವಾ ಯಾವುದಾದರೂ ಒಂದು ಪ್ರಾಂತೀಯ ಭಾಷೆಯನ್ನು ಒಂದು ವಿಷಯವನ್ನಾಗಿ ಅಥವಾ ಮಾಧ್ಯಮವನ್ನಾಗಿ ವ್ಯಾಸಂಗ ಮಾಡಿರಬೇಕು.

II) ಹಿಂದಿ ಮತ್ತು ಮತ್ತೊಂದು ಭಾಷೆಯನ್ನು ಬೋಧನಾ ವಿಧಾನವನ್ನಾಗಿ ಅಧ್ಯಯನ ಮಾಡಿರಬೇಕು.

(ಉ) **ದೈಹಿಕ ಶಿಕ್ಷಣ ಶಿಕ್ಷಕ (ಗ್ರೇಡ್-1) ಹುದ್ದೆಗಳಿಗೆ (Physical Education Teacher Grade-I):-**

i) ಭಾರತ ದೇಶದ ಕಾನೂನಿನಂತೆ ಸ್ಥಾಪಿಸಲ್ಪಟ್ಟ ಮತ್ತು ವಿಶ್ವವಿದ್ಯಾಲಯ ಧನ ಸಹಾಯ ಆಯೋಗದಿಂದ ಅಂಗೀಕೃತವಾದ ಒಂದು ವಿಶ್ವವಿದ್ಯಾಲಯದ **"ಬ್ಯಾಚಲರ್ ಪದವಿ"** ಯನ್ನು ಪಡೆದಿರಬೇಕು.

**ಮತ್ತು**

ii) ಭಾರತ ದೇಶದ ಕಾನೂನಿನಂತೆ ಸ್ಥಾಪಿಸಲ್ಪಟ್ಟ ಮತ್ತು ವಿಶ್ವವಿದ್ಯಾಲಯ ಧನ ಸಹಾಯ ಆಯೋಗದಿಂದ ಅಂಗೀಕೃತವಾದ ಒಂದು ವಿಶ್ವವಿದ್ಯಾಲಯದ **"ಬ್ಯಾಚಲರ್ ಆಫ್ ಫಿಸಿಕಲ್ ಎಜುಕೇಶನ್"** ಪದವಿಯನ್ನು ಪಡೆದಿರಬೇಕು. ಅಥವಾ **ಗೌರ್ನಮೆಂಟ್ ಕಾಲೇಜ್ ಆಫ್ ಫಿಸಿಕಲ್ ಎಜುಕೇಷನ್** ಇಲ್ಲಿಂದ **ಡಿಪ್ಲೋಮಾ ಇನ್ ಫಿಸಿಕಲ್ ಎಜುಕೇಷನ್** ಹೊಂದಿರಬೇಕು. ಅಥವಾ ರಾಜ್ಯ ಸರಕಾರವು ತತ್ಸಮಾನ ಪರೀಕ್ಷೆ ಎಂದು ಪರಿಗಣಿಸಿರುವ ವಿದ್ಯಾರ್ಹತೆಯನ್ನು ಹೊಂದಿರಬೇಕು.

**9) ವೇತನ ಶ್ರೇಣಿ:- ಪ್ರೌಢ ಶಾಲಾ ಸಹಾಯಕ ಶಿಕ್ಷಕರು ಗ್ರೇಡ್-2 ಹಾಗೂ ದೈಹಿಕ ಶಿಕ್ಷಣ ಶಿಕ್ಷಕ (ಗ್ರೇಡ್-1) ವೃಂದದ ಹುದ್ದೆಗಳಿಗೆ :**
ರೂ.8825 -225-9500-250-10500-300-12300-350-14400-400-16000.

**10) ವಯೋಮಿತಿ**

**ಅಭ್ಯರ್ಥಿಗಳು ಈ** ನೇಮಕಾತಿ ಅಧಿಸೂಚನೆ **ದಿನಾಂಕದಂದು ಮುಂದೆ ತಿಳಿಸಿರುವ ಕನಿಷ್ಠ ಮತ್ತು ಗರಿಷ್ಠ ವಯೋಮಿತಿಯೊಳಗಿರಬೇಕು.**

**ಕನಿಷ್ಠ :** 20 ವರ್ಷಗಳು ತುಂಬಿರಬೇಕು.

**ಗರಿಷ್ಠ :**

| | |
|---|---|
| ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡ ಅಥವಾ ಹಿಂದುಳಿದ ಪ್ರವರ್ಗ-1ಕ್ಕೆ **ಸೇರಿದ ಅಭ್ಯರ್ಥಿಗಳು** | 45 ವರ್ಷಗಳನ್ನು ತಲುಪಿರಬಾರದು. |
| ಪ್ರವರ್ಗ 2(ಎ), 2(ಬಿ), 3(ಎ) ಮತ್ತು 3(ಬಿ) **ಗಳಿಗೆ ಸೇರಿದ ಅಭ್ಯರ್ಥಿಗಳು** | 43 ವರ್ಷಗಳನ್ನು ತಲುಪಿರಬಾರದು. |
| ಇತರೆ ಅಭ್ಯರ್ಥಿಗಳು [ಸಾಮಾನ್ಯ ಅಭ್ಯರ್ಥಿಗಳು] | 40 ವರ್ಷಗಳನ್ನು ತಲುಪಿರಬಾರದು. |

**ಗರಿಷ್ಠ ವಯೋಮಿತಿಯ ಸಡಿಲಿಕೆ:**

**i)** ಸರ್ಕಾರಿ ಪ್ರೌಢಶಾಲೆಗಳಲ್ಲಿ ಕಾರ್ಯನಿರ್ವಹಿಸಿದ /ನಿರ್ವಹಿಸುತ್ತಿರುವ "ಅರೆಕಾಲಿಕ" ಮತ್ತು ಗೌರವ ಶಿಕ್ಷಕರುಗಳಿಗೆ ಗರಿಷ್ಠ ವಯೋಮಿತಿಯನ್ನು ಅವರುಗಳು "ಅರೆಕಾಲಿಕ/ಗೌರವ ಶಿಕ್ಷಕರ ಸೇವೆ ಸಲ್ಲಿಸಿದ ವರ್ಷಗಳಷ್ಟು (ಗರಿಷ್ಠ 10 ವರ್ಷಗಳ ಮಿತಿಗೆ ಒಳಪಟ್ಟು) ಸಡಿಲಿಕೆ ಇರುತ್ತದೆ.

**ii)** ಮಾಜಿ ಸೈನಿಕ ಅಭ್ಯರ್ಥಿಗಳು 1977ರ ಕರ್ನಾಟಕ ರಾಜ್ಯ ಸರ್ಕಾರಿ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳ ಪ್ರಕಾರ ವಯೋಮಿತಿ ಸಡಿಲಿಕೆಗೆ ಅರ್ಹರಿರುತ್ತಾರೆ.

**11) ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆ:–** ಆಯ್ಕೆ ಬಯಸುವ ಪ್ರತಿ ಅಭ್ಯರ್ಥಿಯು ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಗೆ ಕಡ್ಡಾಯವಾಗಿ ಹಾಜರಾಗಬೇಕು.

**12) ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆ ಬಗ್ಗೆ ವಿವರಗಳು:–**

**i) ಪರೀಕ್ಷೆ ಹೆಸರು:** ಸರಕಾರಿ ಪ್ರೌಢ ಶಾಲಾ ಸಹಾಯಕ ಶಿಕ್ಷಕ (ಗ್ರೇಡ್–2) ವೃಂದದ ಮತ್ತು ದೈಹಿಕ ಶಿಕ್ಷಣ ಶಿಕ್ಷಕ (ಗ್ರೇಡ್–1) ವೃಂದದ ಶಿಕ್ಷಕರ ಹುದ್ದೆಗಳಿಗೆ ನೇರ ನೇಮಕಾತಿಗಾಗಿ ನಡೆಸುವ ವಿಭಾಗೀಯ ಮಟ್ಟದ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆ.

**ii) ಪರೀಕ್ಷೆ ನಡೆಸುವ ಪ್ರಾಧಿಕಾರಿ:** ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯನ್ನು ಬೆಂಗಳೂರು ವಿಭಾಗೀಯ ಕಾರ್ಯದರ್ಶಿಗಳು, ಸಹ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ವಿಭಾಗ, ಬೆಂಗಳೂರು ಇವರು ವಿಭಾಗ ಮಟ್ಟದಲ್ಲಿ ನಡೆಸುವರು. ವಿಭಾಗದ ವ್ಯಾಪ್ತಿಯಲ್ಲಿ ಬರುವ ಶೈಕ್ಷಣಿಕ ಜಿಲ್ಲೆಗಳು (ಬೆಂಗಳೂರು ಉತ್ತರ, ಬೆಂಗಳೂರು ದಕ್ಷಿಣ, ಬೆಂಗಳೂರು ಗ್ರಾಮಾಂತರ, ಚಿತ್ರದುರ್ಗ, ದಾವಣಗೆರೆ, ಕೋಲಾರ, ಶಿವಮೊಗ್ಗ, ತುಮಕೂರು, ಚಿಕ್ಕಬಳ್ಳಾಪುರ, ಮಧುಗಿರಿ ಹಾಗೂ ರಾಮನಗರ) ಪರೀಕ್ಷಾ ಕೇಂದ್ರಗಳಾಗಿರುತ್ತವೆ.

**iii) ಪರೀಕ್ಷೆಯ ದಿನಾಂಕ: ಶನಿವಾರ 08–08–2009 ಮತ್ತು ಭಾನುವಾರ 09–08–2009**

**iv) ಪರೀಕ್ಷೆಯ ಅವಧಿ ಮತ್ತು ಸಮಯ :**

ಶನಿವಾರ ದಿನಾಂಕ: 08–08–2009 : ಪ್ರಥಮ ಪತ್ರಿಕೆ ಪೂರ್ವಾಹ್ನ 10–30 ರಿಂದ 12–30 ರವರೆಗೆ.
ದ್ವಿತೀಯ ಪತ್ರಿಕೆ ಅಪರಾಹ್ನ 2–30 ರಿಂದ 4–30 ರವರೆಗೆ.

ಭಾನುವಾರ ದಿನಾಂಕ; :09–08–2009 : ಪೂರ್ವಾಹ್ನ 9–00 ರಿಂದ 11–00 ರವರೆಗೆ
ಅಪರಾಹ್ನ 12–00 ರಿಂದ 2–00 ರವರೆಗೆ
ಅಪರಾಹ್ನ 3–00 ರಿಂದ 5–00 ರವರೆಗೆ.

**v) ಪರೀಕ್ಷಾ ಮಾಧ್ಯಮ :** ಕನ್ನಡ ಮತ್ತು ಇಂಗ್ಲೀಷ್.

**vi) ಪ್ರಶ್ನೆ ಪತ್ರಿಕೆ, ಅಂಕಗಳು ಮತ್ತು ವಿಷಯ :** ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆ ಕೆಳಕಂಡ ವಿಷಯಗಳಲ್ಲಿ ಪ್ರಶ್ನೆ ಪತ್ರಿಕೆಗಳನ್ನು ಹೊಂದಿರುತ್ತದೆ. ಪ್ರತಿ ಪ್ರಶ್ನೆ ಪತ್ರಿಕೆಯು 100 ಅಂಕಗಳನ್ನು ಒಳಗೊಂಡಿದು, ಭಾಷಾ ವಿಷಯಗಳನ್ನು ಹೊರತುಪಡಿಸಿ ಉಳಿದ ಎಲ್ಲಾ ಪ್ರಶ್ನೆ ಪತ್ರಿಕೆಗಳು ಕನ್ನಡ ಮತ್ತು ಆಂಗ್ಲ ಮಾಧ್ಯಮದಲ್ಲಿ ಇರುತ್ತದೆ. ಎಲ್ಲಾ ಅಭ್ಯರ್ಥಿಗಳು ಸಾಮಾನ್ಯ ಪತ್ರಿಕೆಯು ಸೇರಿದಂತೆ ಅವರು ಆಯ್ಕೆ ಮಾಡಿಕೊಂಡಿರುವ ವಿಷಯಗಳಿಗೆ ಅನುಗುಣವಾಗಿ ಕಡ್ಡಾಯವಾಗಿ ಪರೀಕ್ಷೆಗಳಲ್ಲಿ ಹಾಜರಾಗಿರಬೇಕಾಗಿರುತ್ತದೆ.

| ಕ್ರ. ಸಂ. | ಹುದ್ದೆಯ ಹೆಸರು | ವಿಷಯ | ಅಂಕಗಳು |
|---|---|---|---|
| 1 | ಪ್ರೌಢ ಶಾಲಾ ಸಹಾಯಕ ಶಿಕ್ಷಕ ಗ್ರೇಡ್–2 (ಫಿಸಿಕಲ್ ಸೈನ್ಸ್, ಬಯಾಲಜಿಕಲ್ ಸೈನ್ಸ್, ಕಲಾ ಹಾಗೂ ಎಲ್ಲಾ ಭಾಷಾ ಶಿಕ್ಷಕರ ಹುದ್ದೆಗಳು)/ ದೈಹಿಕ ಶಿಕ್ಷಣ ಶಿಕ್ಷಕ ಗ್ರೇಡ್–1 | **ಸಾಮಾನ್ಯ ಪ್ರಶ್ನೆ ಪತ್ರಿಕೆ**<br>ಸಾಮಾನ್ಯ ಜ್ಞಾನ<br>ಶೈಕ್ಷಣಿಕ ಮನೋವಿಜ್ಞಾನ<br>ಮೆಂಟಲ್ ಎಬಿಲಿಟಿ | 100 |

**ದ್ವಿತೀಯ / ಐಚ್ಛಿಕ ಪತ್ರಿಕೆ :**

| | | | |
|---|---|---|---|
| 2 | ಕಲಾ ಶಿಕ್ಷಕರು | ಇತಿಹಾಸ, ಭೂಗೋಳ ಶಾಸ್ತ್ರ, ಅರ್ಥಶಾಸ್ತ್ರ ಪೌರನೀತಿ | 100 |
| 3 | ಭಾಷಾ ಶಿಕ್ಷಕರ ಹುದ್ದೆಗಳಿಗೆ | ಕನ್ನಡ / ಇಂಗ್ಲೀಷ್ / ಉರ್ದು / ಹಿಂದಿ / ಮರಾಠಿ / ತೆಲುಗು / ತಮಿಳು ಮತ್ತು ಸಂಸ್ಕೃತ | 100 |
| 4 | ಫಿಸಿಕಲ್ ಸೈನ್ಸ್ ( ಭೌತ ವಿಜ್ಞಾನ ) | ಭೌತ ಶಾಸ್ತ್ರ ಮತ್ತು ಗಣಿತ ಶಾಸ್ತ್ರ | 100 |
| 5 | ಬಯಾಲಾಜಿಕಲ್ ಸೈನ್ಸ್ (ಜೀವ ವಿಜ್ಞಾನ ) | ರಸಾಯನ ಶಾಸ್ತ್ರ, ಪ್ರಾಣಿ ಶಾಸ್ತ್ರ, ಸಸ್ಯಶಾಸ್ತ್ರ | 100 |
| 6 | ದೈಹಿಕ ಶಿಕ್ಷಣ ಗ್ರೇಡ್–1 ಶಿಕ್ಷಕರು | ದೈಹಿಕ ಶಿಕ್ಷಣದ ಇತಿಹಾಸ, ತತ್ವಗಳು ಮತ್ತು ತತ್ವಜ್ಞಾನ, ದೈಹಿಕ ಶಿಕ್ಷಣದ ಆಡಳಿತ ಮತ್ತು ಸಂಘಟನೆ, ದೈಹಿಕ ಶಿಕ್ಷಣದ ಮನೋಜ್ಞಾನ ಸಾಮಾಗ್ರಿ ಮತ್ತು ಬೋಧನಾ ವಿಧಾನ, ಅಂಗರಚನಾಶಾಸ್ತ್ರ, ಅಂಗಕಾರ್ಯಶಾಸ್ತ್ರ ಮತ್ತು ಜೀವಶಾಸ್ತ್ರ, ಆರೋಗ್ಯ ಶಿಕ್ಷಣ, ಸುರಕ್ಷಣಾ ಶಿಕ್ಷಣ ಮತ್ತು ಅಂಗೆಲಸ ವ್ಯಾಯಮ, ಕ್ರೀಶಾಧಿಕಾರತ್ವ ಮತ್ತು ಕ್ರೀಡಾ ತರಬೇತಿ ತತ್ವಗಳು | 100 |

**ಪ್ರಶ್ನೆಗಳ ವ್ಯಾಪ್ತಿ ಹಾಗೂ ಸ್ವರೂಪ:** 1) ಪ್ರಶ್ನೆಗಳು ನಿಗದಿಪಡಿಸಲಾಗಿರುವ ಪಠ್ಯವಸ್ತುವಿನ ವ್ಯಾಪ್ತಿಯಲ್ಲಿರುತ್ತದೆ.

2) ಪ್ರಶ್ನೆಗಳು ವಸ್ತುನಿಷ್ಠವಾಗಿದ್ದು ಪ್ರತಿ ಪ್ರಶ್ನೆಗೆ ಒಂದು ಅಂಕ ನಿಗದಿಪಡಿಸಿದೆ.

3) ಪ್ರತಿ ಪ್ರಶ್ನೆ 4 ಉತ್ತರಗಳನ್ನು ಹೊಂದಿದ್ದು ಇವುಗಳಲ್ಲಿ ಒಂದು ಸರಿ ಉತ್ತರವಾಗಿರುತ್ತದೆ.

4) ಉತ್ತರಗಳನ್ನು " ಓ.ಎಂ.ಆರ್." ಶೀಟಿನಲ್ಲಿ ಗುರ್ತಿಸುವುದು.

ಪ್ರಶ್ನೆ ಪತ್ರಿಕೆಗಳು ಕನ್ನಡ ಮತ್ತು ಆಂಗ್ಲ ಭಾಷೆಯಲ್ಲಿರುತ್ತದೆ. ಭಾಷಾ ವಿಷಯಕ್ಕೆ ಸಂಬಂಧಿಸಿದಂತೆ ಆಯಾ ಭಾಷೆಯಲ್ಲಿರುತ್ತದೆ.

**13) ಆಯ್ಕೆ ವಿಧಾನ:**

ಅಭ್ಯರ್ಥಿಗಳನ್ನು **"ದಿ ಕರ್ನಾಟಕ ಎಜುಕೇಷನ್ ಡಿಪಾರ್ಟ್‌ಮೆಂಟ್ ಸರ್ವೀಸಸ್ (ಡಿಪಾರ್ಟ್‌ಮೆಂಟ್ ಆಫ್ ಪಬ್ಲಿಕ್ ಇನ್‌ಸ್ಟ್ರಕ್ಷನ್) (ರಿಕ್ರೂಟ್‌ಮೆಂಟ್) (ಅಮೆಂಡ್‌ಮೆಂಟ್) ರೂಲ್ಸ್ 2002"** ನಿಯಮಗಳ ಅನ್ವಯ ಮೆರಿಟ್ ಮತ್ತು ಕರ್ನಾಟಕ ಸರ್ಕಾರದ ಪ್ರಚಲಿತ ಮೀಸಲಾತಿ ನಿಯಮಗಳ ಆಧಾರದ ಮೇಲೆ ಆಯ್ಕೆ ಮಾಡಲಾಗುವುದು.

**ಅರ್ಹತೆ ನಿರ್ಧರಿಸುವುದು:–**

**ಅ) ಪ್ರೌಢ ಶಾಲಾ ಸಹ ಶಿಕ್ಷಕ ಗ್ರೇಡ್–2 ವೃಂದದ (ಕಲಾ, ಭೌತ ವಿಜ್ಞಾನ, ಜೀವ ವಿಜ್ಞಾನ ಮತ್ತು ಭಾಷೆಗಳು) ಶಿಕ್ಷಕರ ವಿವಿಧ ಮಾಧ್ಯಮದ ಹುದ್ದೆಗಳಿಗೆ:–**

ಅಭ್ಯರ್ಥಿಯು ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಪಡೆದ ಒಟ್ಟು ಅಂಕಗಳ ಶೇಕಡ 70%, ಮತ್ತು ಬಿ.ಎ/ಬಿ.ಎಸ್ಸಿ. ಪದವಿ ಪರೀಕ್ಷೆಯ ಒಟ್ಟು ಅಂಕಗಳ ಶೇಕಡ 20%, ಹಾಗೂ ಬಿ.ಎಡ್. ಪದವಿ ಪರೀಕ್ಷೆಯಲ್ಲಿ ಪಡೆದಿರುವ ಒಟ್ಟು ಅಂಕಗಳ ಶೇಕಡ 10%, ಈ ಮೂರು ಒಟ್ಟು ಅಂಕಗಳ ಮೇಲೆ ಮೆರಿಟ್ ಪಟ್ಟಿ ತಯಾರಿಸಿ, ಪ್ರಚಲಿತ ಮೀಸಲಾತಿ ನಿಯಮಗಳ ಅನ್ವಯ ಆಯ್ಕೆ ಮಾಡಲಾಗುವುದು.

ಮೇಲ್ಕಂಡ ಮೆರಿಟ್ ಲಿಸ್ಟ್ ತಯಾರಿಸುವಾಗ ಅಭ್ಯರ್ಥಿಯು ಸರ್ಕಾರಿ ಪ್ರೌಢ ಶಾಲೆಗಳಲ್ಲಿ ಸಂಬಂಧಿಸಿದ ವಿಷಯದಲ್ಲಿ "ಅರೆಕಾಲಿಕ ಅಥವಾ ಗೌರವ" ಶಿಕ್ಷಕರಾಗಿ, ಅಥವಾ ಭಾರತೀಯ ಜನಗಣತಿ ಸಂಸ್ಥೆಯಲ್ಲಿ ಗುತ್ತಿಗೆ ಆಧಾರದ ಮೇಲೆ ಸಕ್ಷಮ ಪ್ರಾಧಿಕಾರದಿಂದ ನೇಮಕಗೊಂಡು ಹಾಲಿ ಸೇವೆ ಸಲ್ಲಿಸುತ್ತಿದ್ದಲ್ಲಿ / ಸೇವೆ ಸಲ್ಲಿಸಿದ್ದಲ್ಲಿ ಹಾಗೆ ಸೇವೆ ಸಲ್ಲಿಸಿದ ಪೂರ್ಣಗೊಂಡ ಪ್ರತಿ ಒಂದು ವರ್ಷದ ಸೇವೆಗೆ ಶೇಕಡ 2% ರಷ್ಟು ಕೃಪಾಂಕಗಳನ್ನು ನೇಮಕಾತಿ ನಿಯಮಗಳ ಪ್ರಕಾರ ಅರ್ಹತೆ ಇದ್ದಲ್ಲಿ ಮಾತ್ರ ಮೇಲಿನ ಕಂಡಿಕೆಯಲ್ಲಿ ವಿವರಿಸಿರುವ ಒಟ್ಟು ಅಂಕಗಳಿಗೆ ಸೇರಿಸಲಾಗುವುದು.

**ವಿವರಣೆ:–** ಅ) ಮೊದಲಿಗೆ, ಬಿ.ಎ/ಬಿ.ಎಸ್ಸಿ. ಪದವಿ ಪರೀಕ್ಷೆಯ ಎಲ್ಲಾ ವರ್ಷಗಳಲ್ಲಿ, ಎಲ್ಲಾ ವಿಷಯಗಳಲ್ಲಿ ಪಡೆದಿರುವ ಒಟ್ಟು ಅಂಕಗಳನ್ನು ಶೇಕಡ 20%ಕ್ಕೆ ಲೆಕ್ಕ ಹಾಕಲಾಗುವುದು.

ಆ) ಬಿ.ಎಡ್. ಪದವಿ ಪರೀಕ್ಷೆಯಲ್ಲಿ ಪಡೆದ ಒಟ್ಟು ಅಂಕಗಳನ್ನು ಶೇಕಡ 10%ಕ್ಕೆ ಲೆಕ್ಕ ಹಾಕಲಾಗುವುದು.

ಇ) ನಂತರ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಪಡೆದ ಒಟ್ಟು ಅಂಕಗಳನ್ನು ಶೇಕಡ 70%ಕ್ಕೆ ಲೆಕ್ಕ ಹಾಕಲಾಗುವುದು.

ಈ) ಬಿ.ಎ/ಬಿ.ಎಸ್ಸಿ/ಬ್ಯಾಚುಲರ್ ಪದವಿ/ತತ್ಸಮಾನ ಪರೀಕ್ಷೆಯ ಶೇಕಡ 20%, ಬಿ.ಎಡ್ ಪದವಿಯ/ಬಿ.ಪಿ.ಎಡ್/ ತತ್ಸಮಾನ ಪರೀಕ್ಷೆಯ ಶೇಕಡ 10%, ಮತ್ತು ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯ ಶೇಕಡ 70% ಅಂಕಗಳನ್ನು ಸೇರಿಸಿ ಒಟ್ಟು ಶೇಕಡ 100 ಅಂಕಕ್ಕೆ ಪಡೆದ ಅಂಕಗಳನ್ನು ಕಂಡುಕೊಳ್ಳಲಾಗುವುದು. ಮತ್ತು ಮೆರಿಟಿಗೆ ಪರಿಗಣಿಸಲಾಗುವುದು.

ಉ) ಮೇಲಿನ ಒಟ್ಟು ಶೇಕಡ ಅಂಕಗಳಿಗೆ (ಪ್ಯಾರ "ಈ"), ಅರೆಕಾಲಿಕ ಅಥವಾ ಗೌರವ ಶಿಕ್ಷಕ/ಭಾರತೀಯ ಜನಗಣತಿಯಲ್ಲಿ ಗುತ್ತಿಗೆ ಆಧಾರದ ಮೇಲೆ ಕಾರ್ಯನಿರ್ವಹಿಸಿದಂತಹ ಅಭ್ಯರ್ಥಿಗಳಿಗೆ ಪ್ರಸ್ತುತ ನೇಮಕಾತಿ ನಿಯಮಗಳ ಪ್ರಕಾರ ಅರ್ಹತೆ ಇದ್ದಲ್ಲಿ ಮಾತ್ರ ಪ್ರತಿ ಪೂರ್ಣಗೊಂಡ ಒಂದು ವರ್ಷದ ಸೇವೆಗೆ ಶೇಕಡ 2% ರಂತೆ ಕೃಪಾಂಕಗಳನ್ನು ಸೇರಿಸಲಾಗುವುದು.

(ಈ+ಉ) ಒಟ್ಟು ಅಂಕಗಳನ್ನು ಪ್ರತಿ ಅಭ್ಯರ್ಥಿಯ ಮೆರಿಟ್ (ಅರ್ಹತಾ) ಅಂಕಗಳೆಂದು ನಿರ್ಧರಿಸಲಾಗುವುದು.

**ಉದಾಹರಣೆ:–**

"X" ಎಂಬ ಅಭ್ಯರ್ಥಿಯು ಅರ್ಹತಾ ಪದವಿ (ಬಿ.ಎ/ಬಿ.ಎಸ್ಸಿ ಮತ್ತು ಬಿ.ಎಡ್/ಬಿ.ಪಿ.ಎಡ್ ಪರೀಕ್ಷೆಗಳಲ್ಲಿ ಹಾಗೂ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ಪಡೆದಿರುವ ಅಂಕಗಳು ಹಾಗೂ ಅರೆಕಾಲಿಕ, ಗೌರವ ಶಿಕ್ಷಕರಾಗಿ, ಜನಗಣತಿ ಸಂಸ್ಥೆಯಲ್ಲಿ ಸೇವೆ ಸಲ್ಲಿಸಿದ್ದ ಬಾಬ್ತು ಪಡೆದು ಕೊಂಡಿರುವ ಕೃಪಾಂಕಗಳ ವಿವರಗಳು ಈ ರೀತಿ ಇದೆ.

| ಕ್ರ. ಸಂ. | ಪರೀಕ್ಷೆಯ ಹೆಸರು | ಗರಿಷ್ಠ ಅಂಕಗಳು | ಗಳಿಸಿದ ಅಂಕ |
|---|---|---|---|
| 1 | ಬಿ.ಎಸ್ಸಿ. ಪದವಿ | | |
| | ಅ) ಪ್ರಥಮ ವರ್ಷ | 500 | 300 |
| | ಆ) ದ್ವಿತೀಯ ವರ್ಷ | 500 | 360 |
| | ಇ) ತೃತೀಯ ವರ್ಷ | 900 | 540 |
| | **ಒಟ್ಟು** | **1900** | **1200** |
| 2 | ಬಿ.ಎಡ್. ಪದವಿ | 1000 | 600 |
| 3 | ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಗಳಿಸಿದ ಅಂಕಗಳು | 200 | 140 |
| 4 | "X"ಅಭ್ಯರ್ಥಿಯು ಮೂರು ವರ್ಷಗಳ ಕಾಲ ಅರೆಕಾಲಿಕ ಶಿಕ್ಷಕರಾಗಿ ಸರ್ಕಾರಿ ಪ್ರೌಢ ಶಾಲೆಯಲ್ಲಿ ಸೇವೆ ಸಲ್ಲಿಸಿರುತ್ತಾರೆ | 3 X 2 | = ಶೇಕಡಾ 6 ಕೃಪಾಂಕಗಳು |

| | |
|---|---|
| ಅ) ಬಿ.ಎಸ್ಸಿ.ಪದವಿಯಲ್ಲಿ X ಅಭ್ಯರ್ಥಿ ಪಡೆದ ಶೇಕಡ 20 ಅಂಕಗಳು | = ಗಳಿಸಿದ ಒಟ್ಟು ಅಂಕಗಳು X 20 / ಒಟ್ಟು ಗರಿಷ್ಠ ಅಂಕಗಳು<br>= 1200 X 20 / 1900<br>= 12.63157 |
| ಆ) ಬಿ.ಎಡ್. ಪದವಿ ಪರೀಕ್ಷೆಯಲ್ಲಿ ಶೇಕಡ 10 ಅಂಕಗಳು | = ಗಳಿಸಿದ ಒಟ್ಟು ಅಂಕಗಳು X 10 / ಒಟ್ಟು ಗರಿಷ್ಠ ಅಂಕಗಳು<br>= 600 X 10 / 1000<br>= 6.00000 |
| ಇ) ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಶೇಕಡ 70 ಅಂಕಗಳು | = ಗಳಿಸಿದ ಒಟ್ಟು ಅಂಕಗಳು X 70 / ಒಟ್ಟು ಗರಿಷ್ಠ ಅಂಕಗಳು<br>= 140 X 70 / 200<br>= 9800 / 200<br>= 49.00000 |
| ಈ) X ಅಭ್ಯರ್ಥಿಯು ಬಿ.ಎಸ್ಸಿ., ಬಿ.ಎಡ್. ಹಾಗೂ ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ಪಡೆದ ಒಟ್ಟು ಅಂಕಗಳು (ಅ+ಆ+ಇ) | : ಬಿ.ಎಸ್ಸಿ. : 12.63157<br>: ಬಿ.ಎಡ್ : 06.0000<br>ಸಂ.ಸ್ಪ.ಪ. : 49.0000<br>ಒಟ್ಟು : 67.63157 |
| ಉ) X ಅಭ್ಯರ್ಥಿಯು ಸಲ್ಲಿಸಿರುವ ಮೂರು ವರ್ಷ ಅರೆಕಾಲಿಕ ಶಿಕ್ಷಕರ ಸೇವೆಗೆ ಪ್ರತಿ ಪೂರ್ಣಗೊಳಿಸಿದ ವರ್ಷಕ್ಕೆ ಶೇಕಡ 2ರಂತೆ ಕೃಪಾಂಕಗಳು | = 3 X 2 = ಶೇಕಡಾ 6 ಕೃಪಾಂಕಗಳು |
| ಊ) X ಎಂಬ ಅಭ್ಯರ್ಥಿಯ ಅಂತಿಮ ಮೆರಿಟ್ ಅಂಕಗಳು (ಈ+ಉ) | = 67.63157<br>+<br>ಕೃಪಾಂಕಗಳು = 06.0000<br>ಒಟ್ಟು (ಮೆರಿಟ್) = 73.63157 |

**14) ಮೀಸಲಾತಿ ಅವಕಾಶಗಳು:–**

ಅ) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 08 ಸಹಿಮ 95 ದಿನಾಂಕ 20–06–1995 ಮತ್ತು ನಂತರ ಹಾಲಿ ಜಾರಿಯಲ್ಲಿರುವ ಮೀಸಲಾತಿ ನಿಯಮಗಳ ಪ್ರಕಾರ ಲಭ್ಯವಿರುವ ರಿಕ್ತ ಸ್ಥಾನಗಳನ್ನು ಈ ಕೆಳಕಂಡ ಪ್ರಮಾಣದಲ್ಲಿ ನಿಯಮಾನುಸಾರ ಮೀಸಲಿರಿಸಲಾಗಿದೆ.

| | |
|---|---|
| ಸಾಮಾನ್ಯ ಅರ್ಹತೆ | ಶೇ. 50 |
| ಪರಿಶಿಷ್ಟ ಪಂಗಡ | ಶೇ. 03 |
| ಪರಿಶಿಷ್ಟ ಜಾತಿ | ಶೇ. 15 |
| ಪ್ರವರ್ಗ–1 | ಶೇ. 04 |
| ಪ್ರವರ್ಗ–2ಎ | ಶೇ. 15 |
| ಪ್ರವರ್ಗ–2ಬಿ | ಶೇ. 04 |
| ಪ್ರವರ್ಗ–3ಎ | ಶೇ. 04 |
| ಪ್ರವರ್ಗ–3ಬಿ | ಶೇ. 05 |
| ಒಟ್ಟು | 100 |

ಪ್ರವರ್ಗ–1, 2ಎ, 2ಬಿ, 3ಎ, ಹಾಗೂ 3ಬಿ ಈ ಪ್ರವರ್ಗಗಳಿಗೆ ಮೀಸಲಿರಿಸಿದ ರಿಕ್ತ ಸ್ಥಾನಗಳಿಗೆ ಅದೇ ವರ್ಗಕ್ಕೆ ಸೇರಿದ ಅಭ್ಯರ್ಥಿಗಳು ದೊರೆಯದಿದ್ದಲ್ಲಿ ಈ ಸ್ಥಾನಗಳನ್ನು ಸಾಮಾನ್ಯ ಅಭ್ಯರ್ಥಿಗಳಿಂದ ತುಂಬಲಾಗುವುದು. ಆದರೆ ಪರಿಶಿಷ್ಟ ಜಾತಿ ಹಾಗೂ

ಪರಿಶಿಷ್ಟ ಪಂಗಡದ ಅಭ್ಯರ್ಥಿಗಳು ದೊರೆಯದಿದ್ದಲ್ಲಿ ಅಂತಹ ರಿಕ್ತ ಸ್ಥಾನಗಳನ್ನು ಭರ್ತಿ ಮಾಡದೆ ಬ್ಯಾಕಲಾಗ್ ಹುದ್ದೆಗಳೆಂದು ಪರಿಗಣಿಸಲಾಗುವುದು.

ಆ) ಮೇಲೆ ವಿವರಿಸಿದ ಸಾಮಾನ್ಯ ಅರ್ಹತೆ ಸೇರಿದಂತೆ ಪ್ರತಿ ಮೀಸಲಾತಿ ಪ್ರವರ್ಗಗಳಿಗೆ ಈ ಕೆಳಕಂಡ ಆದೇಶಗಳ ಪ್ರಕಾರ "ಸಮತಳ ಮೀಸಲಾತಿ" (Horizontal reservation) ಅನ್ವಯ ಹುದ್ದೆಗಳನ್ನು ವರ್ಗೀಕರಿಸಲಾಗಿದೆ.

| | | | |
|---|---|---|---|
| 1 | ಮಾಜಿ ಸೈನಿಕರಿಗೆ | ಶೇಕಡ 10 | ಕರ್ನಾಟಕ ಸಿವಿಲ್ ಸರ್ವೀಸಸ್ (ಜನರಲ್ ರೆಕ್ರೂಟ್‌ಮೆಂಟ್) ರೂಲ್ಸ್ 1977ರ ನಿಯಮ 9(1)ರ ಅನ್ವಯ ಹಾಗೂ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 97 ಸೇನೆನಿ 2002 ದಿನಾಂಕ 22–11–2002.ಮತ್ತು ಸರ್ಕಾರದ ಆದೇಶ ಸಂಖ್ಯೆ ಸಿಆಸುಇ53/ಸೇನೆನಿ/2007 ದಿನಾಂಕ:–04–01–2008 |
| 2 | ಅಂಗವಿಕಲರಿಗೆ | ಶೇಕಡ 5 | ಕರ್ನಾಟಕ ಸಿವಿಲ್ ಸರ್ವೀಸಸ್ (ಜನರಲ್ ರೆಕ್ರೂಟ್‌ಮೆಂಟ್) ರೂಲ್ಸ್ 1977 ನಿಯಮ 9(1)(ಎ)ರ ಅನ್ವಯ ಹಾಗೂ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 97 ಸೇನೆನಿ 2002 ದಿನಾಂಕ 22–11–2002. ಮತ್ತು ಸರ್ಕಾರದ ಆದೇಶ ಸಂಖ್ಯೆ ಸಿಆಸುಇ53/ಸೇನೆನಿ/2007 ದಿನಾಂಕ:–04–01–2008 |
| 3 | ಮಹಿಳಾ ಅಭ್ಯರ್ಥಿಗಳಿಗೆ | ಶೇಕಡ 30 | ಕರ್ನಾಟಕ ಸಿವಿಲ್ ಸರ್ವೀಸಸ್ (ಜನರಲ್ ರೆಕ್ರೂಟ್‌ಮೆಂಟ್) ರೂಲ್ಸ್ 1977ರ ನಿಯಮ 9(1)(ಬಿ) ಮತ್ತು ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 97 ಸೇನೆನಿ 2002 ದಿನಾಂಕ 22–11–2002. ಹಾಗೂ ಸರ್ಕಾರದ ಸುತ್ತೋಲೆ ಸಂಖ್ಯೆ ಸಿಆಸುಇ 16/ಸೇನೇನಿ 2008 ದಿನಾಂಕ 01–09–2008 ಮತ್ತು ಸರ್ಕಾರದ ಆದೇಶ ಸಂಖ್ಯೆ ಸಿಆಸುಇ53/ಸೇನೆನಿ/2007ದಿನಾಂಕ:–04–01–2008 |
| 4 | ಯೋಜನೆಗಳಿಂದ ನಿರಾಶ್ರಿತರಾದವರ ಕುಟುಂಬದವರ ಅಭ್ಯರ್ಥಿಗಳಿಗಾಗಿ | ಶೇಕಡ 5 | ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 23 ಎಸ್‌ಆರ್‌ಆರ್ 99 ದಿನಾಂಕ 23–11–2000 ಮತ್ತು ಸರ್ಕಾರದ ಆದೇಶದ ಸಂಖ್ಯೆ: ಸಿಆಸುಇ 97 ಸೇನೆನಿ 2002 ದಿನಾಂಕ 22–11–2002 ಮತ್ತು ಸರ್ಕಾರದ ಆದೇಶ ಸಂಖ್ಯೆ ಸಿಆಸುಇ53/ಸೇನೆನಿ/2007 ದಿನಾಂಕ:–04–01–2008 |
| 5 | ಗ್ರಾಮೀಣ ಅಭ್ಯರ್ಥಿಗಳಿಗೆ | ಶೇಕಡ 25 | 2000ದ ಕರ್ನಾಟಕ ಗ್ರಾಮೀಣ ಅಭ್ಯರ್ಥಿಗಳಿಗಾಗಿ (ರಾಜ್ಯ ಸಿವಿಲ್ ಸೇವೆಗಳಲ್ಲಿ ನೇಮಕಾತಿ ಅಥವಾ ಹುದ್ದೆಗಳ ಮೀಸಲಾತಿ ವಿಧೇಯಕ) ಹಾಗೂ ಸರಕಾರದ ಆದೇಶ ಸಂಖ್ಯೆ: ಸಿಆಸುಇ 97 ಸೇನೆನಿ 2002 ದಿನಾಂಕ 22–11–2002 ಮತ್ತು ಸರ್ಕಾರದ ಆದೇಶ ಸಂಖ್ಯೆ ಸಿಆಸುಇ53/ಸೇನೆನಿ/2007 ದಿನಾಂಕ:–04–01–2008 |
| 6 | ಕನ್ನಡ ಮಾಧ್ಯಮದ ಅಭ್ಯರ್ಥಿಗಳಿಗಾಗಿ | ಶೇಕಡ 5 | ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 71 ಎಸ್‌ಆರ್‌ಆರ್ 2001 ದಿನಾಂಕ 24–10–2002 ಮತ್ತು ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 97 ಸೇನೆನಿ 2002 ದಿನಾಂಕ 22–11–2002 ಮತ್ತು ಸರ್ಕಾರದ ಆದೇಶ ಸಂಖ್ಯೆ ಸಿಆಸುಇ53/ಸೇನೆನಿ/2007 ದಿನಾಂಕ:–04–01–2008 |

**15) ವಿವರಣೆ:**

i) "ಮಾಜಿ ಸೈನಿಕ"ರಿಗಾಗಿ ಮೀಸಲಿಟ್ಟ ಖಾಲಿ ಹುದ್ದೆಗಳನ್ನು ಮಿಲಿಟರಿ ಸೇವೆಯಿಂದ ಬಿಡುಗಡೆ ಹೊಂದಿದ ವ್ಯಕ್ತಿಗಳಿಂದ ಮತ್ತು ಭಾರತ ದೇಶದ ಒಕ್ಕೂಟದ ಸಶಸ್ತ್ರ ದಳದಲ್ಲಿ ಸೇವೆ ಸಲ್ಲಿಸುವಾಗ ಕೊಲ್ಲಲ್ಪಟ್ಟ ಅಥವಾ ಶಾಶ್ವತವಾಗಿ ಅಂಗಹೀನರಾದ ವ್ಯಕ್ತಿಗಳ ಕುಟುಂಬದ ಸದಸ್ಯರಿಂದ ನೇಮಕಾತಿ ಮೂಲಕ ತುಂಬಲಾಗುತ್ತದೆ.

ii) "ಮಾಜಿ ಸೈನಿಕ" "ಸಶಸ್ತ್ರ ದಳದ ಸದಸ್ಯ" ಮತ್ತು "ಕುಟುಂಬದ ಸದಸ್ಯ" ಎಂಬ ಪದಗಳ ಅರ್ಥವು ಕಾಲದಿಂದ ಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ರಾಜ್ಯ ಸರ್ಕಾರಿ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977 ರಲ್ಲಿ ವಿವರಿಸಿರುವಂತೆ ಇರುತ್ತದೆ.

iii) ಕರ್ನಾಟಕ ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ: ಎಂಎಂಡಬ್ಲ್ಯೂ. 107. ಪಿಹೆಚ್‌ಪಿ 2003 ದಿನಾಂಕ: 11–07–2003 ಮತ್ತು ಡಿಪಿಎಆರ್ 50 ಎಸ್‌ಆರ್‌ಆರ್ 2000 ದಿನಾಂಕ: 03–09–2005ರ ಅನ್ವಯ ತಾನು "ಅಂಗವಿಕಲರ ಗುಂಪಿಗೆ ಸೇರಿದವರೆಂದು ಹೇಳಿಕೊಳ್ಳುವ ಅಭ್ಯರ್ಥಿಯು" ವೈದ್ಯಕೀಯ ಪ್ರಮಾಣ ಪತ್ರವನ್ನು ಹೊಂದಿರಬೇಕು.

iv) ನೇರ ನೇಮಕಾತಿಯಲ್ಲಿ ಲಭ್ಯವಿರುವ ಸ್ಥಾನಗಳನ್ನು ದಿನಾಂಕ 20–06–1995ರಂದು ಹೊರಡಿಸಿರುವ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 8 ಸೆಹಿಮ 95ರ ಅನ್ವಯ ಸಾಮಾನ್ಯ ಅರ್ಹತೆ, ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಹಿಂದುಳಿದ ಪ್ರವರ್ಗ 1, 2ಎ, 2ಬಿ, 3ಎ, 3ಬಿ ವರ್ಗಗಳಿಗೆ ವಿಂಗಡಿಸಿ ಮೀಸಲಿರಿಸಲಾಗುವುದು. ಹಾಗೂ ಆಯಾ ವರ್ಗಕ್ಕೆ ಲಭ್ಯವಾಗುವ ರಿಕ್ತ ಸ್ಥಾನಗಳಲ್ಲಿ

ಶೇ. 30 ರಷ್ಟು ಹುದ್ದೆಗಳನ್ನು ಮಹಿಳಾ ಅಭ್ಯರ್ಥಿಗಳಿಗೆ, ಶೇಕಡಾ 10 ರಷ್ಟು ಹುದ್ದೆಗಳನ್ನು ಮಾಜಿ ಸೈನಿಕ ಅಭ್ಯರ್ಥಿಗಳಿಗೆ, ಶೇಕಡ 5 ರಷ್ಟು ರಿಕ್ತ ಸ್ಥಾನಗಳನ್ನು ಅಂಗವಿಕಲ ಅಭ್ಯರ್ಥಿಗಳಿಗೆ, ಶೇ. 5 ರಷ್ಟು ರಿಕ್ತ ಸ್ಥಾನಗಳನ್ನು ಯೋಜನೆಗಳಿಂದ ನಿರಾಶ್ರಿತರಾದವರ ಕುಟುಂಬದ ಅಭ್ಯರ್ಥಿಗಳಿಗೆ, ಶೇ. 25 ರಷ್ಟು ಸ್ಥಾನಗಳನ್ನು ಗ್ರಾಮೀಣ ಅಭ್ಯರ್ಥಿಗಳಿಗೆ, ಮತ್ತು ಶೇ 5 ರಷ್ಟು ರಿಕ್ತ ಸ್ಥಾನಗಳನ್ನು ಕನ್ನಡ ಮಾಧ್ಯಮ ವ್ಯಾಸಂಗ ಮಾಡಿದ ಅಭ್ಯರ್ಥಿಗಳಿಂದ, ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 97 ಸೇನೇನಿ. 2002 ದಿನಾಂಕ: 22-11-2002ರಲ್ಲಿ ವಿವರಿಸಿರುವಂತೆ ಭರ್ತಿ ಮಾಡಲು ಮೀಸಲಿರಿಸಲಾಗುವುದು.

**ಅಂತಿಮ ಆಯ್ಕೆಪಟ್ಟಿ ತಯಾರಿಸುವಾಗ :**

ಮಹಿಳೆಯರಿಗೆ ಮೀಸಲಿರಿಸಿದ ರಿಕ್ತ ಸ್ಥಾನಗಳಿಗೆ ಅರ್ಹ ಮಹಿಳಾ ಅಭ್ಯರ್ಥಿಗಳು ಲಭ್ಯವಾಗದಿದ್ದಲ್ಲಿ ಅಂತಹ ರಿಕ್ತ ಸ್ಥಾನಗಳನ್ನು ಆಯಾ ವರ್ಗಕ್ಕೆ ಸೇರಿದ ಪುರುಷ ಅಭ್ಯರ್ಥಿಗಳಿಂದ ಭರ್ತಿ ಮಾಡಲಾಗುವುದು.

ಮಾಜಿ ಸೈನಿಕರಿಗಾಗಿ ಮೀಸಲಿರಿಸಿದ ರಿಕ್ತ ಸ್ಥಾನಗಳಿಗೆ ಅರ್ಹ ಮಾಜಿ ಸೈನಿಕ ಅಭ್ಯರ್ಥಿಗಳು ಲಭ್ಯವಾಗದಿದ್ದಲ್ಲಿ ಅಂತಹ ರಿಕ್ತ ಸ್ಥಾನಗಳನ್ನು ಅಯಾ ವರ್ಗಕ್ಕೆ ಸೇರಿದ ಇತರೆ ಅರ್ಹ ಅಭ್ಯರ್ಥಿಗಳಿಂದ ಭರ್ತಿ ಮಾಡಲಾಗುವುದು.

ಇದೇ ರೀತಿ ಯೋಜನಾ ನಿರಾಶ್ರಿತ / ಗ್ರಾಮೀಣ ಅರ್ಹ ಅಭ್ಯರ್ಥಿಗಳು ದೊರಯದಿದ್ದಲ್ಲಿ ಅಂತಹ ರಿಕ್ತ ಸ್ಥಾನಗಳನ್ನು ಆಯಾ ಪ್ರವರ್ಗಕ್ಕೆ ಸೇರಿದ ಇತರೆ ಅರ್ಹ ಅಭ್ಯರ್ಥಿಗಳಿಂದ ಭರ್ತಿ ಮಾಡಲಾಗುವುದು.

ಅರ್ಹ ಅಂಗವಿಕಲ ಅಭ್ಯರ್ಥಿಗಳು ದೊರೆಯದಿದ್ದಲ್ಲಿ ಅಂತಹ ರಿಕ್ತ ಸ್ಥಾನಗಳನ್ನು ಭರ್ತಿ ಮಾಡದೆ ಬ್ಯಾಕ್‌ಲಾಗ್ ಹುದ್ದೆಗಳೆಂದು ಪರಿಗಣಿಸಲಾಗುವುದು.

**16) ಹುದ್ದೆಗಳ ವರ್ಗೀಕರಣ:-**

ಸರಕಾರದ ಆದೇಶ ಸಂಖ್ಯೆ: ಸಿಆಸುಇ 08 ಸಹಿಮ 95 ದಿನಾಂಕ 20-06-1995 ಮತ್ತು ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 97 ಸೆನೆನಿ 2002 ದಿನಾಂಕ 22-11-2002 ಹಾಗೂ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 53/ಸೇನಿನಿ/2007, ದಿ. 4.1.2008ರು ಪ್ರಕಾರ ಜಿಲ್ಲಾ ಮಟ್ಟದಲ್ಲಿ ವಿಷಯವಾರು ಮತ್ತು ಮಾಧ್ಯಮವಾರು ಹುದ್ದೆಗಳನ್ನು ಈ ಮುಂದಿನ ಅನುಬಂಧ ದಂತೆ ವರ್ಗೀಕರಿಸಿದೆ.

ಮುಂದುವರಿದು ಆಯ್ಕೆ ಪಟ್ಟಿಯನ್ನು ತಯಾರಿಸುವಾಗ ಸಮತಳ ಮೀಸಲಾತಿಗೆ ಸಂಬಂದಿಸಿದಂತೆ ಗೌರವಾನ್ವಿತ ಸರ್ವೋಚ್ಚ ನ್ಯಾಯಾಲಯವು ವಿವರಿಸಿರುವ ಕಾರ್ಯವಿಧಾನವನ್ನು ಸರ್ಕಾರದ ಸುತ್ತೋಲೆ ಸಂಖ್ಯೆ ಸಿಅಸುಇ16/ಸೆನೆನಿ/2008 ದಿನಾಂಕ:-01-09-2008ರಲ್ಲಿ ಆದೇಶಿಸಿರುವಂತೆ ಅಳವಡಿಸಿಕೊಳ್ಳಲಾಗುವುದು

**ಟಿಪ್ಪಣಿ :** **ಪ್ರೌಢ ಶಾಲಾ ಸಹ ಶಿಕ್ಷಕ ಗ್ರೇಡ್-2 ವೃಂದದ ವಿವಿಧ ವಿಷಯ ಮತ್ತು ಬೋಧನಾ ಮಾಧ್ಯಮದ ಮತ್ತು ದೈಹಿಕ ಶಿಕ್ಷಣ ಶಿಕ್ಷಕ (ಗ್ರೇಡ್-1) ವೃಂದದ ಖಾಲಿ ಹುದ್ದೆಗಳ ಸಂಖ್ಯೆ ಹಾಗೂ ಮೀಸಲಾತಿ ವರ್ಗೀಕರಣದ ವಿವರಗಳನ್ನು ಈ ಅಧಿಸೂಚನೆಗೆ ಲಗತ್ತಿಸಿರುವ "ಹುದ್ದೆಗಳ ವರ್ಗೀಕರಣದ ಅನುಬಂಧದಲ್ಲಿ" ಪ್ರತ್ಯೇಕವಾಗಿ ವಿವರಿಸಿದೆ.**

**ಸೂಚನೆ :** **ಪ್ರಕಟಿಸಿರುವ ಹುದ್ದೆಗಳ ಸಂಖ್ಯೆ ಮತ್ತು ವರ್ಗೀಕರಣವು ಅನಿವಾರ್ಯ ಸಂದರ್ಭಗಳಲ್ಲಿ ಬದಲಾವಣೆಗೆ ಒಳಪಟ್ಟಿರುತ್ತದೆ.**

(1) ಮೀಸಲಾತಿ ಸೌಲಭ್ಯ ಪಡೆಯಲು ಅಭ್ಯರ್ಥಿಗಳು ಸಲ್ಲಿಸಬೇಕಾದ ಪ್ರಮಾಣ ಪತ್ರಗಳು:

ಅ) ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ ಮತ್ತು ಹಿಂದುಳಿದ ಪ್ರವರ್ಗ-1 ಕ್ಕೆ ಸೇರಿದ ಅಭ್ಯರ್ಥಿಗಳು ಸರ್ಕಾರದ ಅಧಿಸೂಚನೆ ಸಂಖ್ಯೆ: ಎಸ್‌ಡಬ್ಲೂಡಿ 132 ಎಸ್‌ಎಡಿ 97 ದಿನಾಂಕ 08-02-2000 ಮತ್ತು ಹಿಂದುಳಿದ ಪ್ರವರ್ಗಗಳಾದ ಪ್ರವರ್ಗ-2ಎ, 2ಬಿ, 3ಎ, ಮತ್ತು 3ಬಿ ಗೆ ಸೇರಿದ ಅಭ್ಯರ್ಥಿಗಳು ಸರ್ಕಾರದ ಆದೇಶ ಸಂಖ್ಯೆ: ಎಸ್‌ಡಬ್ಲೂಡಿ 126 ಬಿಡಿಎ ದಿನಾಂಕ 13-02-2003 ರಂದು ಹೊರಡಿಸಿದ **"ಕರ್ನಾಟಕ ಅನುಸೂಚಿತ ಜಾತಿಗಳು, ಅನುಸೂಚಿತ ಬುಡಕಟ್ಟುಗಳು, ಮತ್ತು ಇತರೆ ಹಿಂದುಳಿದ ವರ್ಗಗಳ (ನೇಮಕಾತಿ ಮುಂತಾದ ಮೀಸಲಾತಿ) (ತಿದ್ದುಪಡಿ) ನಿಯಮಗಳು 2000"** ರನ್ವಯ ನಿಗದಿಪಡಿಸಿರುವ ಅಭ್ಯರ್ಥಿಗಳಿಗೆ ಅನ್ವಯಿಸುವ ಕೆಳಕಂಡ ನಮೂನೆಗಳಲ್ಲಿಯೇ ಸಂಬಂಧಿಸಿದ ವ್ಯಾಪ್ತಿಯ ತಹಸೀಲ್ದಾರರ ದರ್ಜೆಗಿಂತ ಕಡಿಮೆ ಇಲ್ಲದ ರೆವಿನ್ಯೂ ಪ್ರಾಧಿಕಾರಿಯಿಂದ ಪ್ರಮಾಣ ಪತ್ರವನ್ನು ಪಡೆದಿರಬೇಕು.

| | | |
|---|---|---|
| 1 | ಅನುಸೂಚಿತ ಜಾತಿ ಅಥವಾ ಅನುಸೂಚಿತ ಪಂಗಡಕ್ಕೆ ಸೇರಿದ ಅಭ್ಯರ್ಥಿಗಳು | **ನಮೂನೆ - ಡಿ** (ನಿಯಮ 3ಎ(2)(3), ಸರಕಾರದ ಆದೇಶ ಸಂಖ್ಯೆ: ಎಸ್‌ಡಬ್ಲೂಡಿ 132 ಎಸ್‌ಎಡಿ 97 ದಿನಾಂಕ 08-02-2000 |
| 2 | ಹಿಂದುಳಿದ ಪ್ರವರ್ಗ-1 ಕ್ಕೆ ಸೇರಿದ ಅಭ್ಯರ್ಥಿಗಳು | **ನಮೂನೆ - ಇ** (ನಿಯಮ 3ಎ(2)(3), ಸರಕಾರದ ಆದೇಶ ಸಂಖ್ಯೆ: ಎಸ್‌ಡಬ್ಲೂಡಿ 132 ಎಸ್‌ಎಡಿ 97 ದಿನಾಂಕ 08-02-2000 |
| 3 | ಹಿಂದುಳಿದ ಪ್ರವರ್ಗ 2ಎ, 2ಬಿ, 3ಎ, ಮತ್ತು 3ಬಿ ಗೆ ಸೇರಿದ ಅಭ್ಯರ್ಥಿಗಳು | **ನಮೂನೆ - ಎಫ್** (ನಿಯಮ 3ಎ(2)(3), ಸರಕಾರದ ಆದೇಶ ಸಂಖ್ಯೆ: ಎಸ್‌ಡಬ್ಲೂಡಿ 126 ಎಸ್‌ಎಡಿ 97 ದಿನಾಂಕ 13-02-2003 |

**ಮೇಲ್ಕಂಡ ಮೀಸಲಾತಿ ಪ್ರಮಾಣ ಪತ್ರಗಳು ಉಲ್ಲೇಖಿಸಿರುವ ನಿಯಮಗಳ ಪ್ರಕಾರವಿರಬೇಕು ಮತ್ತು ನೇಮಕಾತಿ ಅಧಿಸೂಚನೆ ದಿನಾಂಕಕ್ಕೆ ಐದು ವರ್ಷಗಳನ್ನು ಮೀರಿರಬಾರದು. ಅವಧಿ ಮೀರಿದ ಮೀಸಲಾತಿ ಪ್ರಮಾಣ ಪತ್ರಗಳನ್ನು ತಿರಿಸ್ಕರಿಸಲಾಗುವುದು.**

**ಅಂಗವಿಕಲ ಅಭ್ಯರ್ಥಿಗಳಿಗೆ ಸೂಚನೆ:–**

ಸರ್ಕಾರಿ ಆದೇಶ ಸಂಖ್ಯೆ: ಡಿಪಿಎಆರ್ 52 ಎಸ್.ಎಸ್.ಆರ್. 99 ದಿನಾಂಕ 29–11–2002ರಲ್ಲಿ ನಿಗದಿಪಡಿಸಿರುವ ಅಂಗವಿಕಲ ಅಭ್ಯರ್ಥಿಗಳನ್ನು ಮಾತ್ರ ಪರಿಗಣಿಸಲಾಗುವುದು. ಸರ್ಕಾರಿ ಆದೇಶ ಸಂಖ್ಯೆ ಎಂ.ಎ.ಇ107/ಪಿ.ಹೆಚ್.ಪಿ/2003 ದಿನಾಂಕ: 11/7/2003 ರಲ್ಲಿ ನಿಗಧಿಪಡಿಸಿರುವ ನಮೂನೆಯಲ್ಲಿ ವೈದ್ಯಕೀಯ ಪ್ರಮಾಣ ಪತ್ರಗಳನ್ನು ಸಕ್ಷಮ ವೈದ್ಯಾಧಿಕಾರಿಗಳಿಂದ ಪಡೆದಿರಬೇಕು. ಈ ಪ್ರಮಾಣ ಪತ್ರವನ್ನು ಅರ್ಜಿ ಸಲ್ಲಿಸುವ ದಿನಾಂಕಕ್ಕೆ ಅಭ್ಯರ್ಥಿಯು ಪಡೆದುಕೊಂಡಿರಬೇಕು.

ಸರ್ಕಾರಿ ಅಧಿಸೂಚನೆ ಸೆಕ್ಷನ್ ಸಂಖ್ಯೆ: ಡಿಪಿಎಆರ್ 52 ಎಸ್.ಎಸ್.ಆರ್. 99 29–11–2002ರ ಅಧಿನಿಯಮದ ಸೆಕ್ಷನ್ 32ರ ಪ್ರಕಾರ Persons with disabilities(equal opportunities. Protection of rights & full participation) Act1995 ರಾಜ್ಯ ಸರ್ಕಾರವು ವಿವಿಧ ಇಲಾಖೆಗಳಲ್ಲಿ ಅಂಗವಿಕಲರು ನಿರ್ವಹಿಸಬಹುದಾದ ಹುದ್ದೆಗಳನ್ನು ಗುರುತಿಸಿದೆ.ಸದರಿ ಅಧಿಸೂಚನೆ ಪುಟ–21 ರಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆಗೆ ಸಂಬಂಧಿಸಿದಂತೆ ಅಂಗವಿಕಲ ಅಭ್ಯರ್ಥಿಗಳಿಗೆ ಗುರುತಿಸಿರುವ ಹುದ್ದೆಗಳ ಉದ್ಧೃತವನ್ನು ಈ ಕೆಳಗೆ ನೀಡಲಾಗಿದೆ.

| | **Name of the Dept-Public Instruction** |
|---|---|
| Blind | Music teachers Gr.1& 11(HS) |
| Low Vision | MusicTr.Gr.1&11(HS) Packer,counter,,,,,,Grp.D-Sweeper,Cleanrer peon |
| Leprosry Cured | Pri school HM,Sr.Librarian,Gr 1& 11 Pry-School Teacher.Drawing music Art Master (SSLC with Asst.Master Certi)Sec.Sch Asst.11,Tr.1,Asst Agri Teacher pri.Sch.Tr,Trained & Untrained, FDA,SDA,Drama,Craft, Hindi Trs.Group-D post: Lift Attender,Peon/Packer/Carrier Counter Cleaner Pacher, Attender. |
| Hearing Impaired | Pri School HM, Sr.Librarian,Pry.Schools Nursery School Tr Drawing Art Master(SSLC with Art Master certificate) Sec School Asst -2 Tr.Gr-1Asst Agriculture teacher Pry.ASchol Tr,Trained, & Untrainaed Drama teacher, FDA,SDA Craft ,Hindi Tr, Group D Post Attender /Lift Attender / Packer / carrian /counter/ packer /peon/Cleaner/Sweeper. |
| Locomotor Disability | Pry School HM, Nursery School teacher/Mother, Librarian state education library FDA,Drawing Art Master (SSLC with Art Master certificate) Secondary school Asst teachers grade-1 Asst Craft & Hindi Teachers ,group the Post Attender /Lift Attender / Packer / carrian /counter/ packer /peon/Cleaner/Sweeper. |
| Mentally ill | Pri School HM, Sr.Librarian,Pry.Schools Nursery School Tr Drawing Art Master(SSLC with Art Master certificate) Sec School Asst -2 Tr.Gr-1Asst Agriculture teacher Pry.ASchol Tr,Trained, & Untrainaed Drama teacher, FDA,SDA Craft ,Hindi Tr, Group D Post Attender /Lift Attender / Packer / carrian /counter/ packer /peon/Cleaner/Sweeper. |
| Menatally Retarted | ---------- |

1. ಮೇಲಿನಂತೆ Blind, Low vision ಹಾಗೂ Menatally Retarted ಅಂಗವಿಕಲ ಅಭ್ಯರ್ಥಿಗಳು ಪ್ರೌಢ ಶಾಲಾ ಸಹ ಶಿಕ್ಷಕರು ಗ್ರೇಡ್–2 ವೃಂದದ ಹುದ್ದೆಗಳಿಗೆ ಅರ್ಹರಿರುವುದಲ್ಲ ಹಾಗೂ ದೈಹಿಕ ಶಿಕ್ಷಣ ಶಿಕ್ಷಕರು ಗ್ರೇಡ್–1 ಹುದ್ದೆಗಳಿಗೆ ಯಾವುದೇ ರೀತಿಯ ಅಂಗವಿಕಲ ಅಭ್ಯರ್ಥಿಗಳು ಅರ್ಹರಿರುವುದಿಲ್ಲ.
2. ದೈಹಿಕ ಅಂಗವಿಕಲ ಅಭ್ಯರ್ಥಿಗಳು ಸರ್ಕಾರಿ ಜಿಲ್ಲಾ ಆಸ್ಪತ್ರೆಗಳಲ್ಲಿರುವ ಮೂಳೆ ತಜ್ಞ (Orthopaedic Surgeon) ರಿಂದ ದೈಹಿಕ ಅಂಗವಿಕಲತೆಯ ಮೌಲೀಕರಣವನ್ನು ALimco Kanpur (W.H.O Standard) ಇದರ ಆಧಾರದ ಮೇಲೆ ಮಾಡಿಸುವುದು ಕಡ್ಡಾಯವಾಗಿರುತ್ತದೆ.ಹಾಗೂ ಶ್ರವಣ ಧೋಷ ಹೊಂದಿರುವ ಅಂಗವಿಕಲ ಅಬ್ಯರ್ಥಿಗಳ ಪ್ರಮಾಣ ಪತ್ರದಲ್ಲಿ ಶ್ರವಣ ದೋಷದ ನಷ್ಟವನ್ನು ಡೆಸಿಬಲ್ಸ್ (Decibels) ಗಳಲ್ಲಿ ಕಡ್ಡಾಯವಾಗಿ ನಮೂದಿಸತಕ್ಕದ್ದು.

**ಉ) ಮಾಜಿ ಸೈನಿಕರ ಗುಂಪಿನಲ್ಲಿ ಆಯ್ಕೆ ಬಯಸುವ ಅಭ್ಯರ್ಥಿಗಳಿಗೆ ಸೂಚನೆಗಳು:**

ಮಾಜಿ ಸೈನಿಕರ ಗುಂಪಿನಲ್ಲಿ ಆಯ್ಕೆಗೆ ಕೆಳಗಿನವರು ಅರ್ಹರು:–

1) ಮಾಜಿ ಸೈನಿಕ ಎಂದರೆ ಸಶಸ್ತ್ರ ದಳಗಳಾದ ನಿಯಮಿತ ಭೂದಳ, ನೌಕಾದಳ ಮತ್ತು ವಾಯುದಳದಲ್ಲಿ ಯಾವುದೇ ಶ್ರೇಣಿಯಲ್ಲಿ (ಯೋಧ ಅಥವಾ ಅಯೋಧನಾಗಿ) ಸೇವೆ ಸಲ್ಲಿಸಿದ ವ್ಯಕ್ತಿ. ಅಂದರೆ:–

(ಅ) ಅಂತಹ ಸೇವೆಯಿಂದ ನಿವೃತ್ತಿ ಹೊಂದಿದ ನಂತರ ನಿವೃತ್ತಿ ವೇತನ ಪಡೆಯುತ್ತಿರುವ ವ್ಯಕ್ತಿ.

**ಅಥವಾ**

(ಆ) ವೈದ್ಯಕೀಯ ಕಾರಣಗಳಿಂದ ಮಿಲಿಟರಿ ಸೇವೆಗೆ ಅನರ್ಹನಾದವನೆಂದೋ ಅಥವಾ ವ್ಯಕ್ತಿಯ ಹಿಡಿತಕ್ಕೂ ಮೀರಿದ ಪರಿಸ್ಥಿತಿಗಳಿಂದ ಮತ್ತು ವೈದ್ಯಕೀಯ ಅಥವಾ ಅಸಾಮರ್ಥ್ಯದ ಪಿಂಚಣಿ ಪಡೆದು ಸೇವೆಯಿಂದ ಬಿಡುಗಡೆಯಾದ ವ್ಯಕ್ತಿ.

**ಅಥವಾ**

(ಇ) ಸ್ವಂತ ಕೋರಿಕೆ ಹೊರತುಪಡಿಸಿ ಸಿಬ್ಬಂದಿ ಕಡಿತದ ಪರಿಣಾಮದಿಂದ ಅಂತಹ ಸೇವೆಯಿಂದ ಬಿಡುಗಡೆ ಹೊಂದಿದ ವ್ಯಕ್ತಿ.

**ಅಥವಾ**

(ಈ) ತನ್ನ ಸ್ವಂತ ಕೋರಿಕೆಯ ಮೇರೆಗೆ ಅಥವಾ ದುರ್ನಡತೆ ಅಥವಾ ಅಸಾಮರ್ಥ್ಯದ ಕಾರಣದಿಂದಾಗಿ ತೆಗೆದು ಹಾಕಿರುವ ಅಥವಾ ಕರ್ತವ್ಯದಿಂದ ವಜಾ ಮಾಡಿದ ವ್ಯಕ್ತಿಗಳನ್ನು ಹೊರತುಪಡಿಸಿ, ನಿರ್ಧಿಷ್ಟ ಅವಧಿಯನ್ನು ಪೂರೈಸಿದ ತರುವಾಯ ಬಿಡುಗಡೆ ಹೊಂದಿದ ವ್ಯಕ್ತಿ ಮತ್ತು ಗ್ರಾಚ್ಯುಟಿ ಪಡೆಯುತ್ತಿರುವ ವ್ಯಕ್ತಿ.

**ಅಥವಾ**

(ಉ) ಪ್ರಾಂತೀಯ ಸೇವೆಯ ಈ ಕೆಳಗೆ ಹೆಸರಿಸಿದ ವರ್ಗದ ಸಿಬ್ಬಂದಿ.

1) ನಿರಂತರ ಸೇವೆ ಸಲ್ಲಿಸಿ ನಿವೃತ್ತಿ ಹೊಂದಿದ ಪಿಂಚಣಿದಾರರು.
2) ಮಿಲಿಟರಿ ಸೇವೆಯಿಂದ ಉಂಟಾದ ದೈಹಿಕ ಅಸಾಮರ್ಥ್ಯತೆ ಹೊಂದಿ ಬಿಡುಗಡೆಯಾದ ವ್ಯಕ್ತಿ.
3) ಗ್ಯಾಲಂಟ್ರಿ ಪ್ರಶಸ್ತಿ ವಿಜೇತರು.

**2. ಮಾಜಿ ಸೈನಿಕ ಅವಲಂಬಿತರ ಗುಂಪಿನಲ್ಲಿ ಆಯ್ಕೆ ಬಯಸುವ ಅಭ್ಯರ್ಥಿಗಳು ಅಂದರೆ:–**

ಕೇಂದ್ರ ಸಶಸ್ತ್ರ ದಳದಲ್ಲಿ ಸೇವೆ ಸಲ್ಲಿಸುವಾಗ ಕೊಲ್ಲಲ್ಪಟ್ಟ ಅಥವಾ ಶಾಶ್ವತವಾಗಿ ದೈಹಿಕ ವಿಕಲತೆ ಹೊಂದಿದ ವ್ಯಕ್ತಿಗಳ ಕುಟುಂಬದವರು.

**(ಸಂಬಂಧಾನುಸಾರ ಹೆಂಡತಿ ಅಥವಾ ಗಂಡ ಮತ್ತು ಮಕ್ಕಳು ಮತ್ತು ಮಲ ಮಕ್ಕಳು ಮಾಜಿ ಸೈನಿಕರ ಅವಲಂಬಿತರಡಿಯಲ್ಲಿ ಮೀಸಲಾತಿಗೆ ಅರ್ಹರಾಗಿರುತ್ತಾರೆ. ಆದರೆ ಅಂತಹವರಿಗೆ ವಯೋಮಿತಿ ಸಡಿಲಿಕೆ ಇಲ್ಲ)**

**ವಿವರಣೆ:**

1. ಈ ಸೌಲಭ್ಯಕ್ಕೆ ಡಿಫೆನ್ಸ್ ಸೆಕ್ಯುರಿಟಿ ಕಾರ್ಪ್ಸ್, ಜನರಲ್ ರಿಸರ್ವ್ ಇಂಜಿನಿಯರಿಂಗ್ ಕಾರ್ಪ್ಸ್ ಲೋಕ ಸಹಾಯಕ ಸೇವೆ ಮತ್ತು ಪ್ಯಾರಾ ಮಿಲಿಟರಿ ದಳದಲ್ಲಿ ಸೇವೆ ಸಲ್ಲಿಸಿದ ವ್ಯಕ್ತಿ ಅರ್ಹರಲ್ಲ.
2. ಕೇಂದ್ರ ಸಶಸ್ತ್ರದಳದ ಸೇವೆಯಿಂದ ನಿವೃತ್ತಿ ಹೊಂದಿದ ನಂತರ ಮಾಜಿ ಸೈನಿಕರ ವರ್ಗದಡಿ ಬರುವ ವ್ಯಕ್ತಿಗೆ ಒಪ್ಪಂದವು ಪೂರ್ಣವಾಗಲು ಒಂದು ವರ್ಷಕ್ಕೆ ಮುನ್ನ ಪುನರ್ ಉದ್ಯೋಗಕ್ಕೆ ಅರ್ಜಿ ಹಾಕಿಕೊಳ್ಳಲು ಹಾಗೂ ಅವರಿಗೆ ಮಾಜಿ ಸೈನಿಕರಿಗೆ ದೊರೆಯುವ ಎಲ್ಲಾ ಸೌಲಭ್ಯಗಳನ್ನು ಹೊಂದಲು ಅನುಮತಿ ನೀಡಲಾಗಿದೆ. ಆದರೆ, ಸಮವಸ್ತ್ರವನ್ನು ತ್ಯಜಿಸಲು ಅನುಮತಿ ನೀಡುವವರೆಗೆ ರಾಜ್ಯ ನಾಗರೀಕ ಸೇವೆ ಅಥವಾ ಹುದ್ದೆಗೆ ನೇಮಕ ಹೊಂದುವಂತಿಲ್ಲ.

**ಗ್ರಾಮೀಣ ಗುಂಪಿನಲ್ಲಿ ಮೀಸಲಾತಿ:–**

ಗ್ರಾಮೀಣ ಅಭ್ಯರ್ಥಿ ಎಂದರೆ ಕರ್ನಾಟಕ ಪೌರ ನಿಯಮಗಳ ಅಧಿನಿಯಮ 1976 ಅಥವಾ ಕರ್ನಾಟಕ ಪೌರ ಸಭೆಗಳ ಅಧಿನಿಯಮ 1964 ರಡಿಯಲ್ಲಿ ನಿರ್ದಿಷ್ಟಪಡಿಸಿದ ಒಂದು ದೊಡ್ಡ ಪ್ರದೇಶ, ಸಣ್ಣ ನಗರ ಪ್ರದೇಶ ಅಥವಾ ಪರಿವರ್ತನೆ ಹಂತದಲ್ಲಿರುವ ಪ್ರದೇಶ ಹೊರತಾಗಿ ಇತರೆ ಯಾವುದೇ ಪ್ರದೇಶದಲ್ಲಿರುವ ಶಾಲೆಯಲ್ಲಿ 1 ನೇ ತರಗತಿಯಿಂದ 10 ನೇ ತರಗತಿಯವರೆಗೆ ವ್ಯಾಸಂಗ ಮಾಡಿದ ಅಭ್ಯರ್ಥಿ.

ಗ್ರಾಮೀಣ ಅಭ್ಯರ್ಥಿಗಳ ಮೀಸಲಾತಿ ಅಡಿಯಲ್ಲಿ ಅರ್ಜಿ ಸಲ್ಲಿಸುವ ಅಭ್ಯರ್ಥಿಗಳು ಸಂಬಂಧಿಸಿದ ಪ್ರಮಾಣ ಪತ್ರಗಳನ್ನು **ಸರಕಾರದ ಆದೇಶ ಸಂಖ್ಯೆ: ಡಿಪಿಎಆರ್ 96 ಸೇನೆನಿ 2005 ದಿನಾಂಕ 10–08–2005** ರಲ್ಲಿ ನೀಡಿರುವ ನಿಗದಿತ ನಮೂನೆಯಲ್ಲಿ ಮಾತ್ರ ಸಲ್ಲಿಸಬೇಕು.

**ಊ) ಗ್ರಾಮೀಣ ಅಭ್ಯರ್ಥಿ ಮೀಸಲಾತಿ ಬಯಸುವ ಅಭ್ಯರ್ಥಿಗಳಿಗೆ ಸೂಚನೆಗಳು:–**

**ಗ್ರಾಮೀಣ ಅಭ್ಯರ್ಥಿ ಎಂದರೆ ಕರ್ನಾಟಕ ಪೌರ ನಿಯಮಗಳ ಅಧಿನಿಯಮ 1976 ಅಥವಾ ಕರ್ನಾಟಕ ಪೌರ ಸಭೆಗಳ ಅಧಿನಿಯಮ 1964ರಡಿಯಲ್ಲಿ ನಿರ್ದಿಷ್ಠ ಪಡಿಸಿದ ಒಂದು ದೊಡ್ಡ ಪ್ರದೇಶ, ಸಣ್ಣ ನಗರ ಪ್ರದೇಶ ಅಥವಾ ಪರಿವರ್ತನಾ ಹಂತದಲ್ಲಿರುವ ಪ್ರದೇಶಗಳ (ಮಹಾನಗರ ಪಾಲಿಕೆ / ನಗರ ಸಭೆ / ಪುರಸಭೆ / ಪಟ್ಟಣ ಪಂಚಾಯತ್) ಹೊರತಾದ ಪ್ರದೇಶವಾಗಿರುತ್ತದೆ. ಅಂದರೆ ಕೇವಲ ಗ್ರಾಮ ಪಂಚಾಯತ್/ಮಂಡಲ್ ಪಂಚಾಯತ್ ವ್ಯಾಪ್ತಿಗೆ ಒಳಪಡುವ ಶಾಲೆಯಲ್ಲಿ ಒಂದನೇ ತರಗತಿಯಿಂದ ಹತ್ತನೇ ತರಗತಿಯವರೆಗೆ ವ್ಯಾಸಂಗ ಮಾಡಿ ಉತ್ತೀರ್ಣರಾಗಿರುವ ಅಭ್ಯರ್ಥಿಗಳು ಮಾತ್ರ ಗ್ರಾಮೀಣ ಮೀಸಲಾತಿ ಸೌಲಭ್ಯ ಪಡೆಯಲು ಅರ್ಹರಿರುತ್ತಾರೆ.**

ಸದರಿ ಅಧಿನಿಯಮದಲ್ಲಿ **"ಗ್ರಾಮೀಣ ಅಭ್ಯರ್ಥಿಯನ್ನು"** ಈ ಕೆಳಗೆ ಉದ್ಧರಿಸಿದಂತೆ ಪರಿಭಾಷಿಸಲಾಗಿದೆ.

1) ಗ್ರಾಮೀಣ ಅಭ್ಯರ್ಥಿ ಎಂದರೆ ಒಂದು ಹುದ್ದೆಗಾಗಿ ನಿಯಮಿಸಲಾದ ಅರ್ಹತಾ ಪರೀಕ್ಷೆಯ ಎಸ್.ಎಸ್.ಎಲ್.ಸಿ. ಅಥವಾ ಉನ್ನತ ಪರೀಕ್ಷೆಯಾಗಿದ್ದಲ್ಲಿ 1ನೇ ತರಗತಿಯಿಂದ 10ನೇ ತರಗತಿಯವರೆಗೆ.
2) ಒಂದು ಹುದ್ದೆಗೆ ನಿಗದಿ ಪಡಿಸಲಾದ ಅರ್ಹತಾ ಪರೀಕ್ಷೆಯು ಎಸ್.ಎಸ್.ಎಲ್.ಸಿ.ಗಿಂತ ಕಡಿಮೆಯಾಗಿದ್ದಲ್ಲಿ 1ನೇ ತರಗತಿಯಿಂದ ಅರ್ಹತಾ ಪರೀಕ್ಷೆಯವರೆಗೆ:

3) ಸಾಮಾನ್ಯ ವರ್ಗದ ಅಭ್ಯರ್ಥಿಗಳು ನಮೂನೆ-1 ರಲ್ಲಿ ಅಂದರೆ, ಮೇಲುಸ್ಥರದಲ್ಲಿ (creamy layer) ಬರುವದಿಲ್ಲವೆಂದು ಸಂಬಂಧಿಸಿದ ತಹಸೀಲ್ದಾರರವರಿಂದ ಪಡೆದ ಪ್ರಮಾಣ ಪತ್ರದ ಜೊತೆಗೆ ಸರಕಾರದ ಆದೇಶ ದಿನಾಂಕ 10-08-2005ರಲ್ಲಿ ನಿಗದಿಪಡಿಸಲಾದ ನಮೂನೆ-2 ರಲ್ಲಿ ಗ್ರಾಮೀಣ ವ್ಯಾಸಂಗ ಪ್ರಮಾಣ ಪತ್ರವನ್ನು ಸಲ್ಲಿಸತಕ್ಕದ್ದು.

4) ಪ್ರವರ್ಗ-1, 2ಎ, 2ಬಿ, 3ಎ, 3ಬಿ, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಸೇರಿದ ಅಭ್ಯರ್ಥಿಗಳು ತಮ್ಮ ಮೀಸಲಾತಿ ಪ್ರಮಾಣ ಪತ್ರದ ಜೊತೆಗೆ ಸರಕಾರದ ಆದೇಶ ದಿನಾಂಕ 10-08-2005ರಲ್ಲಿ ನಿಗದಿ ಪಡಿಸಲಾದ ನಮೂನೆ-2ರಲ್ಲಿ ಗ್ರಾಮೀಣ ವ್ಯಾಸಂಗ ಪ್ರಮಾಣ ಪತ್ರವನ್ನು ಸಲ್ಲಿಸತಕ್ಕದ್ದು.

**ಸರ್ಕಾರದ ಆದೇಶ ಸಂಖ್ಯೆ: ಡಿಪಿಎಆರ್. 96 ಸೇ.ನೇ.ನಿ.2005 ದಿನಾಂಕ: 10-08-2005ರ ಪ್ರಕಾರ ಅಭ್ಯರ್ಥಿಯು 1 ರಿಂದ 10ನೆಯ ತರಗತಿಯವರೆಗೆ ವ್ಯಾಸಂಗ ಮಾಡುತ್ತಿದ್ದ ಅವಧಿಯಲ್ಲಿ ಸದರಿ ಪ್ರದೇಶಗಳು ಮಹಾನಗರ ಪಾಲಿಕೆಗಳು, ನಗರಸಭೆಗಳು, ಪುರಸಭೆಗಳು, ಪಟ್ಟಣ ಪಂಚಾಯಿತಿಗಳು ಮತ್ತು ಪರಿವರ್ತನಾ ಹಂತದಲ್ಲಿರುವ ಪ್ರದೇಶಗಳಾಗಿರಬಾರದು. ವಿವರ ಈ ಕೆಳಗೆ ನೀಡಲಾಗಿದೆ.**

| ಮಹಾನಗರ ಪಾಲಿಕೆಗಳು | | ನಗರ ಸಭೆಗಳು | | ಪುರ ಸಭೆಗಳು | | ಪಟ್ಟಣ ಪಂಚಾಯ್ತಿಗಳು | |
|---|---|---|---|---|---|---|---|
| | | **ಬೆಂಗಳೂರು ನಗರ ಜಿಲ್ಲೆ** | | **ಬೆಂಗಳೂರು ನಗರ ಜಿಲ್ಲೆ** | | | |
| 1 | ಬೆಂಗಳೂರು | 1 | ಯಲಹಂಕ | 1 | ಆನೇಕಲ್ | | |
| | | 2 | ಬ್ಯಾಟರಾಯನಪುರ | 2 | ಕೆಂಗೇರಿ | | |
| | | 3 | ಕೆ.ಆರ್.ಪುರಂ | | | | |
| | | 4 | ಬೊಮ್ಮನಹಳ್ಳಿ | | | | |
| | | 5 | ದಾಸರಹಳ್ಳಿ | | | | |
| | | 6 | ಪಟ್ಟಣಗೆರೆ | | | | |
| | | 7 | ಮಹದೇವಪುರ | | | | |
| | | | | **ಬೆಂಗಳೂರು ಗ್ರಾಮಾಂತರ ಜಿಲ್ಲೆ** | | | |
| | | 1 | ರಾಮನಗರ | 1 | ಮಾಗಡಿ | 1 | ನೆಲಮಂಗಲ |
| | | | | | | | |
| | | 2 | ದೊಡ್ಡಬಳ್ಳಾಪುರ | 2 | ದೇವನ ಹಳ್ಳಿ | | |
| | | 3 | ಚೆನ್ನಪಟ್ಟಣ | 3 | ಹೊಸಕೋಟೆ | | |
| | | | | 4 | ಕನಕಪುರ | | |
| | | | | 5 | ವಿಜಯಪುರ | | |
| | | | | **ಮೈಸೂರು ಜಿಲ್ಲೆ** | | | |
| 2 | ಮೈಸೂರು | | ಮೈಸೂರು | 1 | ನಂಜನಗೂಡು | 1 | ಪರಿಯಾಪಟ್ಟಣ |
| | | | | 2 | ಹುಣಸೂರು | 2 | ಹೆಚ್.ಡಿ.ಕೋಟೆ |
| | | | | 3 | ಕೆ.ಆರ್.ನಗರ | 3 | ಟಿ.ನರಸೀಪುರ |
| | | | | | | 4 | ಬನ್ನೂರು |
| | | | | **ಬೆಳಗಾಂವ ಜಿಲ್ಲೆ** | | | |
| 3 | ಬೆಳಗಾಂವ | 1 | ನಿಪ್ಪಾಣಿ | 1 | ಅಥಣಿ | 1 | ಹುಕ್ಕೇರಿ |
| | | 2 | ಗೋಕಾಕ | 2 | ಬೈಲಹೊಂಗಲ | 2 | ಖಾನಾಪೂರ |
| | | | | 3 | ಚಿಕ್ಕೋಡಿ | 3 | ಕೊಣ್ಣೂರು |
| | | | | 4 | ಮೂಡಲಗಿ | 4 | ಕುಡಚಿ |
| | | | | 5 | ರಾಮದುರ್ಗ | 5 | ರಾಯಭಾಗ |
| | | | | 6 | ಸಂಕೇಶ್ವರ | 6 | ಸದಲಗಾ |
| | | | | 7 | ಸವದತ್ತಿ | | |
| 4 | ಹುಬ್ಬಳ್ಳಿ / ಧಾರವಾಡ | | | | | | |
| | | | | **ಗುಲಬರ್ಗಾ ಜಿಲ್ಲೆ** | | | |
| 5 | ಗುಲಬರ್ಗಾ | | | 1 | ಆಳಂದ | 1 | ಅಫಜಲಪೂರ |
| | | | | 2 | ಚಿತ್ತಾಪೂರ | 2 | ಚಿಂಚೋಳಿ |
| | | | | 3 | ಸೇಡಂ | 3 | ಜೇವರ್ಗಿ |
| | | | | 4 | ಶಹಾಬಾದ | 4 | ಗುರುಮಿಠಕಲ್ |
| | | | | 5 | ಶಹಾಪೂರ | 5 | ವಾಡಿ |
| | | | | 6 | ಸುರಪೂರ | | |
| | | | | 7 | ಯಾದಗಿರಿ | | |
| | | | | **ತುಮಕೂರು ಜಿಲ್ಲೆ** | | | |
| | | 1 | ತುಮಕೂರು | 1 | ತಿಪಟೂರು | 1 | ಪಾವಗಡ |
| | | | | 2 | ಚಿಕ್ಕನಾಯ್ಕನ ಹಳ್ಳಿ | 2 | ಕೊರಟಗೆರೆ |
| | | | | 3 | ಸಿರಾ | 3 | ತುರುವೇಕೆರೆ |
| | | | | 4 | ಮಧುಗಿರಿ | 4 | ಗುಬ್ಬಿ |
| | | | | 5 | ಕುಣಿಗಲ್ | | |

| | | | | | | | |
|---|---|---|---|---|---|---|---|
| **ಕೋಲಾರ ಜಿಲ್ಲೆ** | | | | | | | |
| | | 1 | ಕೋಲಾರ | 1 | ಮುಳಬಾಗಿಲು | 1 | ಗುಡಿಬಂಡ |
| | | 2 | ಚಿಂತಾಮಣಿ | 2 | ಮಾಲೂರು | 2 | ಶ್ರೀನಿವಾಸಪುರ |
| | | 3 | ರಾಬರ್ಟಸನ್‌ಪೇಟೆ | 3 | ಬಂಗಾರಪೇಟೆ | 3 | ಬಾಗೇಪಲ್ಲಿ |
| | | 4 | ಚಿಕ್ಕಬಳ್ಳಾಪೂರ | 4 | ಗೌರಿ ಬಿದನೂರು | | |
| | | | | 5 | ಶಿಡ್ಲಘಟ್ಟ | | |
| **ಚಿತ್ರದುರ್ಗ ಜಿಲ್ಲೆ** | | | | | | | |
| | | 1 | ಚಿತ್ರದುರ್ಗ | 1 | ಚೆಳ್ಳಕೆರೆ | 1 | ಹೊಸದುರ್ಗ |
| | | | | 2 | ಹಿರಿಯೂರು | 2 | ಹೊಳಲ್ಕೆರೆ |
| | | | | | | 3 | ಮೊಳಕಾಲ್ಮೂರು |
| | **ದಾವಣಗೆರೆ ಜಿಲ್ಲೆ** | | | | | | |
| | | 1 | ದಾವಣಗೆರೆ | | | 1 | ಹರಪನಹಳ್ಳಿ |
| | | 2 | ಹರಿಹರ | | | 2 | ಚೆನ್ನಗಿರಿ |
| | | | | | | 3 | ಹೊನ್ನಾಳಿ |
| | | | | | | 4 | ಜಗಳೂರು |
| | **ಶಿವಮೊಗ್ಗ ಜಿಲ್ಲೆ** | | | | | | |
| | | 1 | ಶಿವಮೊಗ್ಗ | 1 | ಸಾಗರ | 1 | ಸೊರಬ |
| | | 2 | ಭದ್ರಾವತಿ | 2 | ಶಿಕಾರಿಪುರ | 2 | ಹೊಸನಗರ |
| | | | | | | 3 | ಶಿರಾಳಕೊಪ್ಪ |
| | | | | | | 4 | ತೀರ್ಥಹಳ್ಳಿ |
| | **ಚಾಮರಾಜ ನಗರ ಜಿಲ್ಲೆ** | | | | | | |
| | | 1 | ಚಾಮರಾಜನಗರ | 1 | ಕೊಳ್ಳೇಗಾಲ | 1 | ಯಳಂದೂರು |
| | | | | 2 | ಗುಂಡ್ಲುಪೇಟೆ | 2 | ಹನೂರು |
| | **ಮಂಡ್ಯ ಜಿಲ್ಲೆ** | | | | | | |
| | | 1 | ಮಂಡ್ಯ | 1 | ಮದ್ದೂರು | 1 | ಪಾಂಡವಪುರ |
| | | | | 2 | ಮಳವಳ್ಳಿ | 2 | ನಾಗಮಂಗಲ |
| | | | | 3 | ಶ್ರೀರಂಗಪಟ್ಟಣ | 3 | ಕೆ.ಆರ್.ಪೇಟೆ |
| | **ಹಾಸನ ಜಿಲ್ಲೆ** | | | | | | |
| | | 1 | ಹಾಸನ | 1 | ಹೊಳೇನರಸಿಪುರ | 1 | ಬೇಲೂರು |
| | | | | 2 | ಚೆನ್ನರಾಯಪಟ್ಟಣ | 2 | ಆರಕಲಗೂಡು |
| | | | | 3 | ಸಕಲೇಶಪುರ | 3 | ಆಲೂರು |
| | | | | 4 | ಅರಸೀಕೇರೆ | | |
| | **ಚಿಕ್ಕಮಗಳೂರು ಜಿಲ್ಲೆ** | | | | | | |
| | | 1 | ಚಿಕ್ಕಮಗಳೂರು | 1 | ಕಡೂರು | 1 | ತರೀಕೆರೆ |
| | | | | 2 | ಬೀರೂರು | 2 | ಕೊಪ್ಪ |
| | | | | | | 3 | ನರಸಿಂಹರಾಜಪುರ |
| | | | | | | 4 | ಶೃಂಗೇರಿ |
| | | | | | | 5 | ಮೂಡಿಗೆರೆ |
| | **ಉಡುಪಿ ಜಿಲ್ಲೆ** | | | | | | |
| | | 1 | ಉಡುಪಿ | 1 | ಕಾರ್ಕಳ | | |
| | | | | 2 | ಕುಂದಾಪುರ | | |
| | | | | 3 | ಸಾಲಿಗ್ರಾಮ | | |
| | **ದಕ್ಷಿಣ ಕನ್ನಡ ಜಿಲ್ಲೆ** | | | | | | |
| 1 | ಮಂಗಳೂರು | 1 | ಮಂಗಳೂರು | 1 | ಮೂಡಬಿದ್ರೆ | 1 | ಉಳ್ಳಾಲ |
| | | | | 2 | ಪುತ್ತೂರು | 2 | ಬಂಟ್ವಾಳ |
| | | | | | | 3 | ಬೆಳ್ತಂಗಡಿ |
| | | | | | | 4 | ಸುಳ್ಯ |
| | | | | | | 5 | ಮುಲ್ಕಿ |
| **ಬಿಜಾಪುರ ಜಿಲ್ಲೆ** | | | | | | | |
| | | 1 | ಬಿಜಾಪೂರ | 1 | ಇಂಡಿ | 1 | ಬಸವನಬಾಗೇವಾಡಿ |
| | | | | 2 | ಮುದ್ದೇಬಿಹಾಳ | | |
| | | | | 3 | ಸಿಂದಗಿ | | |
| | | | | 4 | ತಾಳಿಕೋಟೆ | | |

| | ಉತ್ತರ ಕನ್ನಡ ಜಿಲ್ಲೆ | | | | | | |
|---|---|---|---|---|---|---|---|
| | | 1 | ಕಾರವಾರ | 1 | ಭಟ್ಕಳ | 1 | ಹೊನ್ನಾವರ |
| | | 2 | ಸಿರ್ಸಿ | 2 | ಕುಮಟಾ | 2 | ಯಲ್ಲಾಪೂರ |
| | | 3 | ದಾಂಡೇಲಿ | | | 3 | ಮುಂಡಗೋಡ |
| | | | | | | 4 | ಸಿದ್ದಾಪುರ |
| | | | | | | 5 | ಅಂಕೋಲಾ |
| | | | | | | 6 | ಹಳಿಯಾಳ |
| | ಬಾಗಲಕೋಟೆ ಜಿಲ್ಲೆ | | | | | | |
| | | 1 | ಬಾಗಲಕೋಟೆ | 1 | ಜಮಖಂಡಿ | 1 | ಹುನಗುಂದ |
| | | 2 | ರಬಕವಿ ಬನಹಟ್ಟಿ | 2 | ಮುಧೋಳ್ | 2 | ಬಾದಾಮಿ |
| | | | | 3 | ಮಹಾಲಿಂಗಪೂರ | 3 | ಬೀಳಗಿ |
| | | | | 4 | ಇಲಕಲ್ | 4 | ಕೆರೂರು |
| | | | | 5 | ಗುಳೇದಗುಡ್ಡ | 5 | ತೇರದಾಳ |
| | ಹಾವೇರಿ ಜಿಲ್ಲೆ | | | | | | |
| | | 1 | ರಾಣಿಬೇನ್ನೂರು | 1 | ಹಾವೇರಿ | 1 | ಹಿರೇಕೆರೂರು |
| | | | | 2 | ಹಾನಗಲ್ | 2 | ಶಿಗ್ಗಾಂವ್ |
| | | | | 3 | ಬ್ಯಾಡಗಿ | 3 | ಬಂಕಾಪುರ |
| | | | | 4 | ಸವಣೂರು | | |
| | ಗದಗ ಜಿಲ್ಲೆ | | | | | | |
| | | 1 | ಗದಗ ಬೆಟಗೇರಿ | 1 | ನರಗುಂದ | 1 | ಮುಂಡರಗಿ |
| | | | | 2 | ಗಜೇಂದ್ರಗಡ | 2 | ಶಿರಹಟ್ಟಿ |
| | | | | 3 | ಲಕ್ಷ್ಮೇಶ್ವರ | 3 | ನರೇಗಲ್ |
| | | | | | | 4 | ರೋಣ |
| | | | | | | 5 | ಮುಳಗುಂದ |
| | ಧಾರವಾಡ ಜಿಲ್ಲೆ | | | | | | |
| | | | | 1 | ಅಣ್ಣೀಗೇರಿ | 1 | ಕುಂದಗೋಳ |
| | | | | | | 2 | ಅಳ್ನಾವರ |
| | | | | | | 3 | ಕಲಘಟಗಿ |
| | | | | | | 4 | ನವಲಗುಂದ |
| | ರಾಯಚೂರು ಜಿಲ್ಲೆ | | | | | | |
| | | 1 | ರಾಯಚೂರು | 1 | ಮಾನ್ವಿ | 1 | ಲಿಂಗಸೂಗೂರು |
| | | | | 2 | ಸಿಂಧನೂರು | 2 | ಮುದಗಲ್ |
| | | | | | | 3 | ದೇವದುರ್ಗ |
| | ಕೊಪ್ಪಳ ಜಿಲ್ಲೆ | | | | | | |
| | | 1 | ಗಂಗಾವತಿ | 1 | ಕೊಪ್ಪಳ | 1 | ಕುಷ್ಟಗಿ |
| | | | | | | 2 | ಯಲಬುರ್ಗಾ |
| | ಬೀದರ ಜಿಲ್ಲೆ | | | | | | |
| | | 1 | ಬೀದರ | 1 | ಭಾಲ್ಕಿ | 1 | ಔರಾದ |
| | | | | 2 | ಬಸವಕಲ್ಯಾಣ | | |
| | | | | 3 | ಹುಮನಾಬಾದ | | |
| | | | | 4 | ಚಿಟಗುಪ್ಪಾ | | |
| | ಬಳ್ಳಾರಿ ಜಿಲ್ಲೆ | | | | | | |
| | | 1 | ಬಳ್ಳಾರಿ | 1 | ಕಂಪ್ಲಿ | 1 | ಹೊವಿನ ಹಡಗಲಿ |
| | | 2 | ಹೊಸಪೇಟೆ | | | 2 | ತೆಕ್ಕಲಕೋಟೆ |
| | | | | | | 3 | ಶಿರಗುಪ್ಪ |
| | | | | | | 4 | ಕೊಟ್ಟೂರು |
| | | | | | | 5 | ಕಮಲಾಪುರ |
| | | | | | | 6 | ಕೂಡ್ಲಿಗಿ |
| | | | | | | 7 | ಸಂಡೂರು |
| | ಕೊಡಗು ಜಿಲ್ಲೆ | | | | | | |
| | | | | 1 | ಮಡಿಕೇರಿ | 1 | ಸೋಮವಾರಪೇಟೆ |
| | | | | | | 2 | ವಿರಾಜಪೇಟೆ |

**ವಿಶೇಷ ಸೂಚನೆ: ಸರ್ಕಾರದ ಆದೇಶ ಸಂಖ್ಯೆ: ಡಿಪಿಎಆರ್ 96 ಸೇನೇನಿ 2005 ದಿನಾಂಕ:10.8.2005ರ ನಮೂನೆ–2ರಲ್ಲಿ ನೀಡಿದ ವ್ಯಾಸಂಗ ಪ್ರಮಾಣ ಪತ್ರಗಳನ್ನು ನೇಮಕಾತಿ ಅಧಿಸೂಚನೆ ದಿನಾಂಕದ ನಂತರ ಅಥವಾ ಅರ್ಜಿ ಸಲ್ಲಿಸುವ ದಿನಾಂಕ ದೊಳಗೆ ಪಡೆದು ಅರ್ಜಿಯೊಡನೆ ಲಗತ್ತಿಸತಕ್ಕದ್ದು. ಈ ಹಿಂದೆ ಪಡೆಯಲಾದ ಪ್ರಮಾಣ ಪತ್ರಗಳನ್ನು ಪರಿಗಣಿಸಲಾಗುವುದಿಲ್ಲ.**

**ಋ) ಯೋಜನಾ ನಿರಾಶ್ರಿತರ ಗುಂಪಿನಲ್ಲಿ ಆಯ್ಕೆ ಬಯಸುವ ಅಭ್ಯರ್ಥಿಗಳಿಗೆ ಸೂಚನೆಗಳು:–**

1. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 71 ಸೆನೆನಿ 2001 ದಿನಾಂಕ 24–10–2002 ರನ್ವಯ ಶೇಕಡ 5% ರಷ್ಟು ಹುದ್ದೆಗಳನ್ನು ಯೋಜನಾ ನಿರಾಶ್ರಿತರ ಗುಂಪಿಗೆ ಮೀಸಲಿಡಲಾಗಿದೆ.
2. ಅಧಿಸೂಚನಾ ಸಂಖ್ಯೆ: ಡಿಪಿಎಆರ್ 23 ಎಸ್.ಆರ್.ಆರ್. 99 ದಿನಾಂಕ 23–11–2000 ರಲ್ಲಿ ರಾಜ್ಯ ಸಿವಿಲ್ ಸೇವೆಗಳಲ್ಲಿನ "ಗ್ರೂಪ್ ಸಿ ಮತ್ತು ಡಿ" ಹುದ್ದೆಗಳ ನೇರ ನೇಮಕಾತಿಗಾಗಿ ಶೇಕಡ 5% ರಷ್ಟು ರಿಕ್ತ ಸ್ಥಾನಗಳನ್ನು "ಯೋಜನೆಗಳಿಂದ ನಿರಾಶ್ರಿತರಾದವರ ಕುಟುಂಬಗಳ" ಅಭ್ಯರ್ಥಿಗಳಿಂದ ಭರ್ತಿ ಮಾಡಲು ಆಸ್ಪದ ಕಲ್ಪಿಸಿದ್ದು, ಎಲ್ಲಾ ಅಂಶಗಳು (ಪಡೆದಿರುವ ಪ್ರತಿಶತ ಅಂಕಗಳು ಹಾಗೂ ಜನ್ಮ ದಿನಾಂಕ ಸರಿಸಮಾನ ಇದ್ದಲ್ಲಿ) (when all things are being equal) ಈ ಕೆಳಕಂಡ ಆದ್ಯತೆಯಾನುಸಾರ ಭರ್ತಿ ಮಾಡಲು ನಿಗದಿಪಡಿಸಿದೆ:–

(i) ಯೋಜನೆಗಾಗಿ ಯಾವುದೇ ವ್ಯಕ್ತಿಯು ತನಗೆ ಆಧಾರವಾಗಿದ್ದ ವಾಸದ ಮನೆಯನ್ನು ಮತ್ತು ಕೊನೆಪಕ್ಷ ಶೇಕಡ 50 ರಷ್ಟು ಕೃಷಿ ಜಮೀನನ್ನು ಯೋಜನೆಗಾಗಿ ಕಳೆದುಕೊಳ್ಳಲಾದ ಅವನ ಕುಟುಂಬದ ಸದಸ್ಯರು.

(ii) ಯೋಜನೆಯ ಪೂರ್ವದ ಅವಧಿಯಲ್ಲಿ ಯಾವುದೇ ವ್ಯಕ್ತಿಯು ಭೂರಹಿತನಾಗಿದ್ದು, ತದನಂತರ ತನ್ನ ವಾಸದ ಮನೆಯನ್ನು ಯೋಜನೆಗಾಗಿ ಕಳೆದುಕೊಂಡ ವ್ಯಕ್ತಿಯ ಕುಟುಂಬದ ಸದಸ್ಯರು.

(iii) ಯೋಜನೆಗಾಗಿ ಯಾವುದೇ ವ್ಯಕ್ತಿಯು ತನಗೆ ಆಧಾರವಾಗಿದ್ದ ಶೇಕಡ 50ರಷ್ಟು ಮಾತ್ರ ಅಥವಾ ಅದಕ್ಕಿಂತ ಕಡಿಮೆ ಬೇಸಾಯದ ಭೂಮಿಯನ್ನು ಕಳೆದುಕೊಂಡ ವ್ಯಕ್ತಿಯ ಕುಟುಂಬದ ಸದಸ್ಯರು.

(iv) ಯೋಜನೆಗಾಗಿ ಇನ್ನಾವುದೇ ಪ್ರಕರಣದಲ್ಲಿ ನಿರಾಶ್ರಿತರಾದವರ ಕುಟುಂಬದ ಸದಸ್ಯರು.

**ವಿವರಣೆ:–** ಈ ಮೇಲ್ಕಂಡ ಉಪ ನಿಯಮದ ಉದ್ಧೃತ:–

(1) "ಯೋಜನೆಗಳಿಂದ ನಿರಾಶ್ರಿತರಾದ ವ್ಯಕ್ತಿ" ಎಂದರೆ, ಬಾಡಿಗೆ ಆಧಾರದ ಮೇಲೆ, ಅನುಭೋಗದ ಅವಧಿಗೆ ಜಮೀನು ಪಡೆದ ವ್ಯಕ್ತಿ ಸರ್ಕಾರದಿಂದ ಗುತ್ತಿಗೆ ಪಡೆದ, ಅಥವಾ ಇತರೆ ಆಸ್ತಿಗಳನ್ನು ಹೊಂದಿದ ಮಾಲೀಕನಾಗಿದ್ದು, ಯೋಜನೆಗಾಗಿ ಭೂಮಿಯನ್ನು : ಜಮೀನನ್ನು ಸ್ವಾಧೀನ ಪಡಿಸಿಕೊಳ್ಳುವುದಕ್ಕಿಂತ ಪೂರ್ವಭಾವಿಯಾಗಿ ಅಧಿಸೂಚನೆ ಹೊರಡಿಸುವ 5 ವರ್ಷಗಳ ಮುಂಚಿತವಾಗಿ ಯಾವುದೇ ವ್ಯಕ್ತಿಯ ಸ್ವಾಧೀನದಲ್ಲಿರುವ ಗ್ರಾಮೀಣದಲ್ಲಿನ ಅಥವಾ ಯೋಜನೆಯ ಪರಿಣಾಮದಿಂದಾಗಿ ಅದರ ವ್ಯಾಪ್ತಿಯಲ್ಲಿ ಬರುವಂತಹ ಜಮೀನು ಅಥವಾ ಆಸ್ತಿಯನ್ನು ಯೋಜನೆಯ ಉದ್ದೇಶಕ್ಕಾಗಿ ಸ್ವಾಧೀನ ಪಡಿಸಿಕೊಳ್ಳಲಾದ ಕಾರಣದಿಂದಾಗಿ ನಿರಾಶ್ರಿತನಾದ ವ್ಯಕ್ತಿ.

(2) "ಕುಟುಂಬ ಸದಸ್ಯರು" ಯೋಜನೆಗಳಿಂದ ನಿರಾಶ್ರಿತರಾದ ವ್ಯಕ್ತಿಗಳ ಸಂಬಂಧವೇನೆಂದರೆ ಅಂತಹ ವ್ಯಕ್ತಿಯ ಕುಟುಂಬವು ಆತನೊಂದಿಗೆ ವಾಸವಾಗಿರುವ ಮತ್ತು ಅವನ / ಅವಳ ಮೇಲೆ ಪಾಲನೆ ಹಾಗೂ ಪೋಷಣೆಗಾಗಿ ಅವಲಂಬಿತರಾಗಿರುವ ಗಂಡ / ಹೆಂಡತಿ, ಗಂಡು ಮಕ್ಕಳು, ಅವಿವಾಹಿತ ಹೆಣ್ಣು ಮಕ್ಕಳು, ಸೋದರರು ಮತ್ತು ಸೋದರಿಯರು.

(3) "ಯೋಜನೆ" ಎಂದರೆ, ನಿರಾಶ್ರಿತ ವ್ಯಕ್ತಿಗಳಿಂದ ಪಡೆಯಲಾದ ಜಮೀನನ್ನು ನಿರ್ಮಾಣ ಅಥವಾ ನೀರಾವರಿಯ ಉದ್ದೇಶಕ್ಕಾಗಿ ಅಥವಾ ನೀರು ಸರಬರಾಜು ಮಾಡುವ ಅಭಿವೃದ್ಧಿ ಕಾರ್ಯದ ವಿಸ್ತರಣೆ ಅಥವಾ ವಿದ್ಯುಚ್ಛಕ್ತಿ ಉತ್ಪಾದನೆ ಮತ್ತು ಪೂರೈಕೆ ಅಥವಾ ವಿದ್ಯುಚ್ಛಕ್ತಿ ಕಾರ್ಯಗಳ ಅನುಕೂಲಕರ ಅಭಿವೃದ್ಧಿಯೂ ಸೇರಿದಂತೆ ಸಾರ್ವಜನಿಕ ಉಪಯೋಗಗಳಿಗಾಗಿ ನಿರ್ಮಾಣ ಸುಧಾರಣೆ ಅಥವಾ ಅಭಿವೃದ್ಧಿ ಕಾರ್ಯಗಳ ಯೋಜನೆ.

**ವಿಶೇಷ ಸೂಚನೆ:–**

ಈ ಮೇಲ್ಕಂಡ ನಿಯಮಗಳು ಪ್ರಾರಂಭವಾಗುವುದಕ್ಕಿಂತ 20 ವರ್ಷಗಳ ಮುಂಚಿತವಾಗಿ ಯಾವುದೇ ಗ್ರಾಮೀಣದಲ್ಲಿನ ಅಥವಾ ಪ್ಲಾಟ್ ಅಥವಾ ಇನ್ನಿತರ ಯಾವುದೇ ಆಸ್ತಿಗಳನ್ನು ಹೊಂದಿದ್ದು, ಅಂತಹ ಆಸ್ತಿಗಳನ್ನು ಯೋಜನೆಗಳ ಉದ್ದೇಶಕ್ಕಾಗಿ ಉಪಯೋಗಿಸಿಕೊಂಡಿದ್ದಲ್ಲಿ, ಅಂತಹ ಜಮೀನುಗಳನ್ನು ಸ್ವಾಧೀನಪಡಿಸಿಕೊಂಡ ಕಾರಣದಿಂದಾಗಿ ನಿರಾಶ್ರಿತರಾದ ಕುಟುಂಬದ ಸದಸ್ಯರು/ವ್ಯಕ್ತಿಗಳು ಈ ನಿಯಮಗಳಿಗೆ ಸೌಲಭ್ಯ ಪಡೆಯಲು ಅರ್ಹರಿರುವುದಿಲ್ಲ.

ಯೋಜನೆಗಳಿಂದ ನಿರಾಶ್ರಿತರಾದ ಕುಟುಂಬದ ಅಭ್ಯರ್ಥಿಗಳು ಸರ್ಕಾರಿ ಸುತ್ತೋಲೆ ಸಂಖ್ಯೆ: ಸಿ.ಆ.ಸು.ಇ.:44:ಸೇ.ನೇನಿ ದಿನಾಂಕ 27–07–2001ರಲ್ಲಿ ನಿಗದಿಪಡಿಸಲಾದ ನಮೂನೆಯಲ್ಲಿ ಪ್ರಮಾಣ ಪತ್ರವನ್ನು ಸಕ್ಷಮ ಪ್ರಾಧಿಕಾರದಿಂದ ಪಡೆದು ಅದರ ಎರಡು ನಕಲು ಪ್ರತಿಗಳನ್ನು ಅರ್ಜಿಯೊಂದಿಗೆ ಲಗತ್ತಿಸತಕ್ಕದ್ದು.

**ಕನ್ನಡ ಮಾಧ್ಯಮದ ಅಭ್ಯರ್ಥಿ:–**

ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 71 ಎಸ್ಆರ್ಆರ್ 2001, ದಿನಾಂಕ: 24.10.2002 ರಲ್ಲಿ ಹೊರಡಿಸಿದ ಕರ್ನಾಟಕ ಸರ್ಕಾರಿ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ 9(1)(ಸಿ)ರ ಅನ್ವಯ ಅಭ್ಯರ್ಥಿಯು 1 ರಿಂದ 10ನೇ ತರಗತಿಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರಬೇಕು. ಈ ಬಗ್ಗೆ ಸಂಬಂಧಪಟ್ಟ ಶಾಲಾ ಮುಖ್ಯಸ್ಥರಿಂದ ನಿಗಧಿತ ನಮೂನೆಯಲ್ಲಿ ಪ್ರಮಾಣ ಪತ್ರವನ್ನು ಪಡೆದು ಸಂಬಂಧಿಸಿದ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೇಲು ಸಹಿ ಮಾಡಿಸಿ ಅರ್ಜಿಯೊಡನೆ ಲಗತ್ತಿಸಬೇಕು.

**ತಾತ್ಕಾಲಿಕ ಆಯ್ಕೆಪಟ್ಟಿ:–**

ಅರ್ಹತೆ (ಮೆರಿಟ್) ಮತ್ತು ಮೀಸಲಾತಿ ನಿಯಮಗಳನ್ವಯ ವಿವಿಧ ವರ್ಗದ ಹುದ್ದೆಗಳಿಗೆ ಅಭ್ಯರ್ಥಿಗಳನ್ನು ಆಯ್ಕೆಮಾಡಿ ತಾತ್ಕಾಲಿಕ ಆಯ್ಕೆಪಟ್ಟಿಯನ್ನು ಆಯ್ಕೆ ಪ್ರಾಧಿಕಾರಿಯಾದ ವಿಭಾಗೀಯ ಕಾರ್ಯದರ್ಶಿಗಳು, ಸಹ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ

ಇಲಾಖೆ, ಬೆಂಗಳೂರು ವಿಭಾಗ, ಬೆಂಗಳೂರು ಇವರ ಕಚೇರಿ ಮತ್ತು ಈ ವಿಭಾಗದ ಎಲ್ಲಾ ಜಿಲ್ಲಾ ಉಪನಿರ್ದೇಶಕರು (ಆಡಳಿತ) ರವರ ಕಚೇರಿಗಳಲ್ಲಿ ಪ್ರಕಟಿಸಲಾಗುವುದು ಹಾಗೂ ಈ ಬಗ್ಗೆ ರಾಜ್ಯ ಮಟ್ಟದ ಕನಿಷ್ಠ ಎರಡು ದಿನಪತ್ರಿಕೆಗಳಲ್ಲಿ ಸಂಕ್ಷಿಪ್ತ ಸೂಚನೆಯನ್ನು ಪ್ರಕಟಿಸಲಾಗುವುದು. ಅಭ್ಯರ್ಥಿಗಳು ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು ಪರಿಶೀಲಿಸಿ ತಮ್ಮ ಆಕ್ಷೇಪಣೆಗಳು ಏನಾದರೂ ಇದ್ದಲ್ಲಿ ಮುಂದೆ ತಿಳಿಸುವ ನಿಗದಿತ ದಿನಾಂಕದೊಳಗೆ ಆಕ್ಷೇಪಣೆಗಳನ್ನು ಸಲ್ಲಿಸಬಹುದಾಗಿದೆ. ಈ ದಿನಾಂಕದ ನಂತರ ಸಲ್ಲಿಸುವ ಯಾವುದೇ ಆಕ್ಷೇಪಣೆಗಳನ್ನು ಪರಿಗಣಿಸದೆ ತಿರಸ್ಕರಿಸಲಾಗುವುದು. ನಿಗದಿತ ಸಮಯದೊಳಗೆ ಆಕ್ಷೇಪಣೆಗಳನ್ನು ಸಲ್ಲಿಸದೆ ಇರುವ ಅಭ್ಯರ್ಥಿಗಳು ಅಂತಿಮ ಆಯ್ಕೆ ಪಟ್ಟಿ ಪ್ರಕಟವಾದ ನಂತರ ಯಾವುದೇ ರೀತಿಯ ಪರಿಹಾರಕ್ಕೆ ಅರ್ಹರಾಗುವುದಿಲ್ಲ. ಮತ್ತು ಈ ಬಗ್ಗೆ ವೈಯಕ್ತಿಕವಾಗಿ ಯಾವುದೇ ಅಭ್ಯರ್ಥಿಗೂ ಸೂಚನೆ ನೀಡಲಾಗುವುದಿಲ್ಲ.

**ವಿಶೇಷ ಸೂಚನೆ:–**

ತಾತ್ಕಾಲಿಕ ಆಯ್ಕೆಪಟ್ಟಿ ಪ್ರಕಟಿಸಿದ ನಂತರ ಅಭ್ಯರ್ಥಿಗಳು ಆಕ್ಷೇಪಣೆ ಸಲ್ಲಿಸುವಾಗ ಮೂಲ ಅರ್ಜಿಯಲ್ಲಿ ದಾಖಲಿಸಿದ ವಿಷಯಗಳಿಗೆ ಸಂಬಂಧಿಸಿದಂತೆ ಮಾತ್ರ ಆಕ್ಷೇಪಣೆ ಸಲ್ಲಿಸಬಹುದು. (ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ) ನಮೂದಿಸಲು ಬಿಟ್ಟು ಹೋಗಿದ್ದ / ಮರೆತು ಹೋಗಿದ್ದ ಯಾವುದೇ ಮಾಹಿತಿಗಳನ್ನು ಅಂದರೆ ಅಂಕಗಳ ವಿವರ, ಮಿಸಲಾತಿ ಪ್ರವರ್ಗ / ಗೌರವ ಶಿಕ್ಷಕರಾಗಿ / ಅರೆಕಾಲಿಕ ಶಿಕ್ಷಕರಾಗಿ / ಜನಗಣತಿ ಸಂಸ್ಥೆಯಲ್ಲಿ ಗುತ್ತಿಗೆ ಆಧಾರದ ಮೇಲೆ ಸೇವೆ ಸಲ್ಲಿಸಿದ ವರ್ಷಗಳ ಬಗ್ಗೆ ಮಾಹಿತಿಗಳು ಇತ್ಯಾದಿ ಆಯ್ಕೆಗೆ ಸಂಬಂಧಿಸಿದ ಮಾಹಿತಿಗಳನ್ನು ಅಥವಾ ಹೊಸದಾಗಿ ದಾಖಲಿಸಲು ಬಯಸುವ ಮಾಹಿತಿಗಳನ್ನು ಸಲ್ಲಿಸಲು ಅವಕಾಶವಿರುವುದಿಲ್ಲ. ಅಂತಹ ಆಕ್ಷೇಪಣೆ ಮತ್ತು ಲಗತ್ತುಗಳನ್ನು ಪರಿಗಣಿಸದೆ ತಿರಸ್ಕರಿಸಲಾಗುವುದು.

**ಅಂತಿಮ ಆಯ್ಕೆ ಪಟ್ಟಿ:–**

1) ತಾತ್ಕಾಲಿಕ ಆಯ್ಕೆಪಟ್ಟಿಯಲ್ಲಿ ಆಯ್ಕೆ ಹೊಂದಿರುವ ಎಲ್ಲಾ ಅಭ್ಯರ್ಥಿಗಳ ಮೂಲ ಅಂಕಪಟ್ಟಿ ಮತ್ತು ಪ್ರಮಾಣ ಪತ್ರಗಳನ್ನು ಪರಿಶೀಲಿಸಿ ದೃಢಪಡಿಸಿಕೊಂಡ ನಂತರ ಅಂತಿಮ ಆಯ್ಕೆಪಟ್ಟಿಯನ್ನು ಪ್ರಕಟಿಸಲಾಗುವುದು. ಮೂಲ ಪ್ರಮಾಣ ಪತ್ರಗಳನ್ನು ಪರಿಶೀಲನೆಗೆ ಸಲ್ಲಿಸದೇ ಇರುವ ಅಭ್ಯರ್ಥಿಗಳು ಅಂತಿಮ ಆಯ್ಕೆಪಟ್ಟಿಯಲ್ಲಿ ಪರಿಗಣನೆಗೆ ಬರುವುದಿಲ್ಲ.
2) ಅಂತಿಮ ಆಯ್ಕೆ ಪಟ್ಟಿಯನ್ನು ಪ್ರಕಟಿಸುವ ಸಂದರ್ಭದಲ್ಲಿ ಅಭ್ಯರ್ಥಿಗಳು ಅರ್ಜಿಯಲ್ಲಿ ನಮೂದಿಸಿರುವ ಜಿಲ್ಲಾ ಆದ್ಯತೆಯನ್ನು ಆಧಾರವಾಗಿಟ್ಟುಕೊಂಡು ಮೆರಿಟ್ ಮತ್ತು ಮೀಸಲಾತಿ ಆಧರಿಸಿ ನಿಯಮಾನುಸಾರ ಜಿಲ್ಲೆಗಳನ್ನು ಹಂಚಿಕೆ ಮಾಡಲಾಗುತ್ತದೆ.
3) ಜಿಲ್ಲಾ ಮಟ್ಟದ ಆಯ್ಕೆ ಪಟ್ಟಿಯಲ್ಲಿ ಆಯ್ಕೆಯಾದ ಅರ್ಹ ಅಭ್ಯರ್ಥಿಗಳ ಅರ್ಹತೆ ಮತ್ತು ಮೀಸಲಾತಿಗಳನ್ನು ಖಚಿತಪಡಿಸಿಕೊಂಡು ನೇಮಕಾತಿ ಪ್ರಾಧಿಕಾರಿಯಾದ ಸಂಬಂಧಿಸಿದ ಜಿಲ್ಲಾ ಉಪನಿರ್ದೇಶಕರು (ಆಡಳಿತ) ರವರು ನೇಮಕಾತಿ ಆದೇಶವನ್ನು ಕೌನ್ಸಿಲಿಂಗ್ ಮೂಲಕ ನೀಡುತ್ತಾರೆ.

**ವಿಶೇಷ ಸೂಚನೆ:–**

ಉನ್ನತೀಕರಿಸಲಾದ ಸರಕಾರಿ ಹಿರಿಯ ಪ್ರಾಥಮಿಕ ಶಾಲೆಗಳಲ್ಲಿ ಸ್ಥಳ ನಿಯುಕ್ತಿ ಹೊಂದಿದ ಅಭ್ಯರ್ಥಿಗಳು ಆಯಾಯಾ ಶಾಲೆಗಳಲ್ಲಿ 6ನೇ ಮತ್ತು 7ನೇ ತರಗತಿಯ ವಿಭಾಗಗಳಲ್ಲಿ ಗಣಿತ ಮತ್ತು ವಿಜ್ಞಾನ ವಿಷಯಗಳ ಬೋಧನೆ ಮಾಡಿ ಕಾರ್ಯಭಾರವನ್ನು ಸರಿದೂಗಿಸುವುದು ಕಡ್ಡಾಯವಾಗಿರುತ್ತದೆ. ಮತ್ತು ಇವರು ಹಿರಿಯ ಪ್ರಾಥಮಿಕ ಶಾಲೆಗಳ ಮುಖ್ಯೋಪಾಧ್ಯಾಯರ ಆಡಳಿತ ಮತ್ತು ಶೈಕ್ಷಣಿಕ ಮುಖಂಡತ್ವದಲ್ಲಿ ಸೇವೆ ಸಲ್ಲಿಸಲು ಬದ್ಧರಾಗಿರಬೇಕಾಗುತ್ತದೆ.

**ನಿಬಂಧನೆಗಳು:–**

1) ಅಭ್ಯರ್ಥಿಗಳು ನಿಗದಿತ ನಮೂನೆಯಲ್ಲಿ ಮಾತ್ರ ಅರ್ಜಿಗಳನ್ನು ಭರ್ತಿಸಿ, ಸಹಿ ಮಾಡಿ ಸಲ್ಲಿಸಬೇಕು. ನಿಗದಿತ ನಮೂನೆಯಲ್ಲಿ ಇಲ್ಲದ ಅರ್ಜಿಗಳನ್ನು ತಿರಸ್ಕರಿಸಲಾಗುವುದು. ಈ ಬಗ್ಗೆ ಯಾವುದೇ ಸೂಚನೆಗಳನ್ನು ವೈಯಕ್ತಿಕವಾಗಿ ನೀಡಲಾಗುವುದಿಲ್ಲ. ಅಭ್ಯರ್ಥಿಗಳಿಗೆ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯ ಪ್ರವೇಶ ಪತ್ರವನ್ನು ಅರ್ಜಿ ಸ್ವೀಕರಿಸುವ ಸಮಯದಲ್ಲಿ ನೀಡಲಾಗುವುದು.
2) ಮೂಲ ಅರ್ಜಿಯಲ್ಲಿ (ಓ.ಎಂ.ಆರ್) ನೀಡಿರುವ ಮಾಹಿತಿಗಳ ಬದಲಾವಣೆಗೆ ಯಾವುದೇ ಹಂತದಲ್ಲೂ ಅವಕಾಶವಿರುವುದಿಲ್ಲ.
3) ಅಭ್ಯರ್ಥಿಯು ಕೋರುವ ಮೀಸಲಾತಿ ಮತ್ತು ಇತರೆ ಯಾವುದೇ ಸೌಲಭ್ಯಗಳಿಗೆ ಸಂಬಂಧಿಸಿದಂತೆ ಎಲ್ಲಾ ಪ್ರಮಾಣ ಪತ್ರಗಳ ದೃಢೀಕೃತ ಪ್ರತಿಗಳನ್ನು ಅರ್ಜಿಯೊಡನೆ ಲಗತ್ತಿಸಬೇಕು. ಹಾಗೂ ಅದರ ವಿವರಗಳನ್ನು ಅರ್ಜಿಯಲ್ಲಿ ನೀಡಲಾಗಿರುವ ನಿಗದಿತ ಕಾಲಂಗಳಲ್ಲಿ ತಪ್ಪದೆ ನಮೂದಿಸಬೇಕು. ಒಂದು ವೇಳೆ ಯಾವುದೇ ವಿವರಗಳನ್ನು ನಿಗದಿ ಪಡಿಸಿದ ಕಾಲಂಗಳಲ್ಲಿ ನಮೂದಿಸದೆ ಇದ್ದಲ್ಲಿ ಮತ್ತು ಮೀಸಲಾತಿಗೆ ಸಂಬಂಧ ಪಟ್ಟಂತಹ ದಾಖಲೆಗಳನ್ನು ಅರ್ಜಿಯೊಡನೆ ಲಗತ್ತಿಸದಿದ್ದಲ್ಲಿ ಅಂತಹ ಮೀಸಲಾತಿ/ಕೋರಿಕೆಯನ್ನು ತಿರಸ್ಕರಿಸಲಾಗುವುದು. ಅಭ್ಯರ್ಥಿಯು ಅರ್ಜಿಯಲ್ಲಿ ನಮೂದಿಸಿರುವ ಮಾಹಿತಿಯನ್ನು ಮಾತ್ರ ಪರಿಗಣಿಸಲಾಗುವುದು.
4) ಅಭ್ಯರ್ಥಿಯು ಅರ್ಜಿ ಸಲ್ಲಿಸುವ ಸಮಯದಲ್ಲಿ ಯಾವುದೇ ಸರ್ಕಾರಿ ಇಲಾಖೆಯಲ್ಲಿ ಖಾಯಂ ಅಥವಾ ಹಂಗಾಮಿಯಾಗಿ ನೌಕರಿಯಲ್ಲಿದ್ದರೆ ಅವನು / ಅವಳು ತಾನು ಸೇವೆ ಸಲ್ಲಿಸುತ್ತಿರುವ ಹುದ್ದೆಯ ನೇಮಕಾತಿ ಪ್ರಾಧಿಕಾರಿಯವರ ಸಮ್ಮತಿಯಿಲ್ಲದೆ ಅರ್ಜಿಯನ್ನು ಸಲ್ಲಿಸಿದ್ದರೆ, ಅಂತಹ ಅಭ್ಯರ್ಥಿ ನೇಮಕಾತಿಗೆ ಅರ್ಹರಾಗುವುದಿಲ್ಲ.
5) ಅರ್ಜಿ ನಮೂನೆ, ಉತ್ತರ ಪತ್ರಿಕೆ, ಪ್ರವೇಶ ಪತ್ರಗಳ ನಿಗದಿತ ಸ್ಥಳಗಳಲ್ಲಿ ಎಡಗೈ ಹೆಬ್ಬೆಟ್ಟು ಗುರುತನ್ನು ಸ್ಪಷ್ಟವಾಗಿ ಹಾಕಬೇಕು. ಎಡಗೈ ಹೆಬ್ಬೆರಳ ಗುರುತು ರಹಿತ ಅರ್ಜಿಯನ್ನು ಯಾವುದೇ ಸೂಚನೆ ನೀಡದೆ ತಿರಸ್ಕರಿಸಲಾಗುವುದು.
6) ಅರ್ಜಿಯೊಡನೆ ಲಗತ್ತಿಸುವ ಪಾಸ್‌ಪೋರ್ಟ್ ಅಳತೆಯ ಭಾವ ಚಿತ್ರವು ಅಧಿಸೂಚನೆ ದಿನಾಂಕದ ನಂತರ ತೆಗೆಸಿದ್ದಾಗಿರಬೇಕು. ನೇಮಕಾತಿ ಪ್ರಕ್ರಿಯೆಗೆ ಬಳಸುವ ಎಲ್ಲಾ ಭಾವ ಚಿತ್ರಗಳು ಒಂದೇ ಬಾರಿ ತೆಗೆಸಿದ್ದು ಒಂದೇ ತೆರನಾಗಿರಬೇಕು.
7) ಒಂದಕ್ಕಿಂತ ಹೆಚ್ಚು ಜಿಲ್ಲೆಯಲ್ಲಿ ಅರ್ಜಿ ಸಲ್ಲಿಸುವ ಅಭ್ಯರ್ಥಿಗಳು ಪಡೆದುಕೊಂಡ ಎಲ್ಲಾ ಪ್ರವೇಶ ಪತ್ರಗಳನ್ನು ನಿಗದಿತ ನಮೂನೆಯೊಂದಿಗೆ ಪರೀಕ್ಷಾ ದಿನದಂದು ಪರೀಕ್ಷೆಗೆ ಹಾಜರಾಗುವ ಕೇಂದ್ರದಲ್ಲಿ ಕೊಠಡಿ ಮೇಲ್ವಿಚಾರಕರಿಗೆ ಒಪ್ಪಿಸುವುದು. ತಪ್ಪಿದಲ್ಲಿ ಮುಂದಿನ ಆಗುಹೋಗುಗಳಿಗೆ ಅಭ್ಯರ್ಥಿಯೇ ಜವಾಬ್ದಾರರಾಗಿರುತ್ತಾರೆ.

